ಸಂಪುಟ 1 ಸಂಚಿಕೆ 2

ಜನವರಿ–ಮಾರ್ಚ್ 2014

ಬೆಲೆ : ರೂ.75

# ಹೊಸಲೋಕ

ಖಾಸಗಿ ಪ್ರಸಾರದ ತ್ರೈಮಾಸಿಕ ಪತ್ರಿಕೆ



ಸಂಪಾದಕರು
ಬಂದಗದ್ದೆ ರಾಧಾಕೃಷ್ಣ
ಕೃತಿ ಆರ್.
ಉಮಾ ಹೆಗಡೆ
ಶ್ರೀಪಾದ ಟಿ. ಭಾಗವತ್
ಪ್ರಭಾಕರ ಸಾಂಶಿ

**ಹೊಸಲೋಕ**
ಹೆಗ್ಗೋಡು – 577417
ಸಾಗರ, ಶಿವಮೊಗ್ಗ ಜಿಲ್ಲೆ



Email: hosaloka1@gmail.com

ವಾರ್ಷಿಕ ಚಂದಾ ರೂ.300 – ಹಣವನ್ನು ಚೆಕ್, ಡಿಡಿ ರೂಪದಲ್ಲಿ ಕಳಿಸಿರಿ. ನಗದು ರೂಪದಲ್ಲಿ ಈ ಕೆಳಗಿನ ಖಾತೆಗೆ ಜಮಾ ಮಾಡಿರಿ.
'ಹೊಸ ಲೋಕ ಪತ್ರಿಕೆ' ಕರ್ನಾಟಕ ಬ್ಯಾಂಕ್, ಹೆಗ್ಗೋಡು, ಉಳಿತಾಯ ಖಾತೆ ಸಂಖ್ಯೆ: 3062 5201 0092 4201

Printed at
**ILA Mudrana**
No. 36, 40 Feet Road, Raghavanagar
NTY Layout, Bengaluru - 560 026, Ph : 26757159

# ಪರಿವಿಡಿ

## ಸಮಾಜವಾದ



## ನೀರು



## ಕಥೆ



## ಕವನ




ಒಳಪುಟದ ಚಿತ್ರಗಳು : ಅರುಣ್‌ಕುಮಾರ್
ರಕ್ಷಾಪುಟ ವಿನ್ಯಾಸ ಮತ್ತು ಚಿತ್ರ : ಪ್ರಕಾಶ್ ಎಸ್. ಬಾಬು
ಹಿಂಪುಟ ಚಿತ್ರ : ಗುಸ್ತಾವ್ ಕೋರ್ಬೆ

# ಮೊದಲ ಮಾತು



ಈ ಬಾರಿ ಸಮಾಜವಾದ ಮತ್ತು ನೀರು ಕುರಿತು ಆಯಾಕ್ಷೇತ್ರದಲ್ಲಿ ಅಧ್ಯಯನ ಮಾಡಿದ ಮತ್ತು ಪ್ರಾಯೋಗಿಕವಾಗಿ ತೊಡಗಿಸಿಕೊಂಡವರ ಲೇಖನಗಳಿವೆ. ಪತ್ರಿಕೆ ಪ್ರಾರಂಭ ಮಾಡುವ ಮೊದಲಿನ ಚರ್ಚೆಗಳಲ್ಲಿ, ನಮ್ಮ ಹೆಚ್ಚಿನ ಸಣ್ಣ ಪತ್ರಿಕೆಗಳು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಯ ಮೂಲಕವೇ ಸಮಾಜವನ್ನು ಪರೀಕ್ಷಿಸಲು ಹೊರಟಿರುವುದರಿಂದ ಸಮಾಜ ವಿಜ್ಞಾನ ರೀತಿಯ ಬರವಣಿಗೆಗಳು ಕನ್ನಡದಲ್ಲಿ ಬರಬೇಕೆಂದು ನಾವು ಬಯಸಿದೆವು. ಹಾಗಿದ್ದರೂ, ನಮ್ಮ ಪತ್ರಿಕೆಯ ಬರಹಗಳು ಬಹಳ ಅಕಾಡೆಮಿಕ್ ಆಗಿ ಬರೀ ಪಂಡಿತರ ವಲಯದಲ್ಲಿ ಮಾತ್ರ ಇರದೇ ಎಲ್ಲಾ ಸಾಮಾಜಿಕರನ್ನು ಒಳಗೊಳ್ಳುವಂತಾಗುವುದಾದರೆ ನಮ್ಮ ಉದ್ದೇಶ ಈಡೇರಿದಂತೆ. ಅದಕ್ಕಾಗಿಯೇ ವಿಮರ್ಶಾತ್ಮಕ ಬರೆಹಗಳ ಜೊತೆಗೆ ಆಯಾ ವಿಷಯಗಳ ಜೀವನಾನುಭವ ಉಳ್ಳವರ ಬರೆಹಗಳನ್ನು

ಪ್ರಕಟಿಸಬೇಕೆಂದು ತೀರ್ಮಾನಿಸಿದೆವು. ಇವು ವಿಷಯವನ್ನು ಚೇತೋಹಾರಿಗೊಳಿಸಿ ಹೊಸ ಹೊಳವುಗಳನ್ನು ಕೊಡಬಲ್ಲದು. ಇದರಿಂದ ಪಂಡಿತ ವಲಯ ಮತ್ತು ಸಾಮಾಜಿಕರಲ್ಲಿ ಪರಸ್ಪರ ನಂಟು ಬೆಳೆಯಬಹುದೆಂಬುದು ನಮ್ಮ ನಿರೀಕ್ಷೆ.

ಪತ್ರಿಕೆಯ ದೃಷ್ಟಿಯಿಂದ ಈ ಎರಡೂ ವಿಷಯಗಳು ಇಂದಿನ ಅತ್ಯಗತ್ಯ ವಿಚಾರಗಳು. ಮಂಗಳನೆಡೆಗೆ ಮುಖಮಾಡಿ ದಾಪುಗಾಲಿಡುತ್ತಿರುವ ಜಾಗತಿಕ ಸಮಾಜಕ್ಕೆ ಇಂದು ಯಾವ ಸಿದ್ಧಾಂತವಿದೆ? ಈ ಸಮಾಜ ನಿರ್ಮಾಣದ ಹಿನ್ನಲೆಯಲ್ಲಿ ಆಧಾರಭೂತವಾಗಿದ್ದ ಸಮಾಜವಾದ ಹಲವು ಚಳುವಳಿಗಳಲ್ಲಿ ಹೋರಾಟಗಳಲ್ಲಿ ಹುಟ್ಟಿ ಬೆಳೆದು ಇಂದು ಏನಾಗಿದೆ? ಈ ಸಮಾಜಕ್ಕೆ ಇದರ ಅಗತ್ಯವೇನು? ಮುಂತಾದ ಚರ್ಚೆಗೆ ಈ ಸಂಚಿಕೆಯು ಕಾರಣವಾಗಲಿ ಎಂದು ಬಯಸುತ್ತೇವೆ.

ನೀರಿಲ್ಲದ ಭೂಮಿ ಇರಲು ಸಾಧ್ಯವೇ? ಇದು ಸಾಧ್ಯವಿಲ್ಲವಾದರೂ ನೀರಿನ ಹಕ್ಕು, ಕೊರತೆ, ಬಳಕೆ, ಕೃಷಿಗೆ, ಕೈಗಾರಿಕೆಗೆ, ಕುಡಿಯುವ ನೀರು–ಹೀಗೆ ನೀರಿನ ನಾನಾ ಉಪಯೋಗಗಳು, ಆ ಸಂದರ್ಭದ ಬಿಕ್ಕಟ್ಟುಗಳು, ಅಣೆಕಟ್ಟುಗಳು, ಇದರ ಸಾಧಕ, ಬಾಧಕಗಳು, ನೀರಿನಿಂದ ಉತ್ಪಾದಿಸುವ ವಿದ್ಯುತ್‌ಶಕ್ತಿಯ ಸದ್ಬಳಕೆ, ದುರ್ಬಳಕೆ –ಹೀಗೆ ಇಂದು ನೀರಿನ ಉಪಯೋಗ ನಮಗೆ ದೊಡ್ಡ ಸಮಸ್ಯೆಯಾಗಿದೆ.

ಭೂಮಿಯಲ್ಲಿ ಬೇರೆಲ್ಲ ಪ್ರಾಣಿಗಳಿಗಿಂತ ಬುದ್ಧಿವಂತ ಜೀವಿಯಾದ ಮನುಷ್ಯನಿಂದ ಆಗುತ್ತಿರುವ ನೀರಿನ ದುರ್ಬಳಕೆಯನ್ನು ಅರಿಯಲೇಬೇಕಾದ ಮತ್ತು ಅದಕ್ಕೆ ಸೂಕ್ತ ಪರಿಹಾರಮಾರ್ಗ ಸೃಷ್ಟಿಸಿಕೊಳ್ಳಬೇಕಾದ ಸ್ಥಿತಿಯಿದೆ. ಆಹಾರವಿಲ್ಲದೆ ಹಸಿವಿನಿಂದ ಸಾಯುವವರ ಸಂಖ್ಯೆಗಿಂತ ನೀರಿಲ್ಲದೆ ಸಾಯುವವರ ಸಂಖ್ಯೆ ಮಿತಿಮೀರುವ ಮೊದಲು ಪರಿಹಾರೋಪಾಯಗಳನ್ನು ಹುಡುಕಿಕೊಳ್ಳಬೇಕು. ಆ ನಿಟ್ಟಿನಲ್ಲಿ ಜಾಗೃತರಾಗಬೇಕು. ಅಂಥಾ ಸಾಧ್ಯತೆಗಳಿಗೆ, ಚರ್ಚೆಗಳಿಗೆ ದಿಕ್ಕು ಕಾಣಲಿ.

ಮುಂದಿನ ಸಂಚಿಕೆಯಲ್ಲಿ ಇಸ್ಲಾಮ್ ಮತ್ತು ವಿಕಾಸಗೊಳ್ಳುತ್ತಿರುವ ಭಾರತದ ಸಂವಿಧಾನ ಕುರಿತು ಬರೆಹಗಳು ಇರುತ್ತವೆ. ಭಾಗವಹಿಸಿರಿ.

*





# ಸಮಾಜವಾದ : ಒಂದು ಪಕ್ಷಿನೋಟ

– ಬಾಪು ಹೆದ್ದೂರಶೆಟ್ಟಿ

ಸಮಾಜವಾದ, ಇಂದು ಜಗತ್ತಿನಲ್ಲೆಲ್ಲಾ ಅತ್ಯಂತ ಜನಪ್ರಿಯ ಶಬ್ದ. 'ಭಾರತದಲ್ಲಿಂದು ಎಲ್ಲರೂ ತಮ್ಮನ್ನು ಸಮಾಜವಾದಿಗಳು ಎಂದು ಹೇಳಿಕೊಳ್ಳುತ್ತಾರೆ... ಆದರೆ ಸಮಾಜವಾದದ ಬಗ್ಗೆ ಸ್ಪಷ್ಟತೆ ಹಾಗೂ ನಿಖರತೆ ಇಲ್ಲದಿರುವುದೇ ಈ ಬಗೆಗಿನ ಸರಿಸುಮಾರು ಏಕಾಭಿಪ್ರಾಯಕ್ಕೆ ಕಾರಣವಾಗಿದೆ' ಎನ್ನುತ್ತಾರೆ ಅಶೋಕ ಮೆಹತಾ[1]. ಹೀಗಾಗಿ ಸಮಾಜವಾದ ಎಂದರೇನು ಎನ್ನುವ ಬಗ್ಗೆ ಮಾತ್ರ ಬೇರೆ ಯಾವ ಶಬ್ದದ ಬಗ್ಗೆಯೂ ಇರದಷ್ಟು ಭಿನ್ನಾಭಿಪ್ರಾಯಗಳು ಇವೆ. ಕಮ್ಯುನಿಸ್ಟರು ಹಾಗೂ ಅರಾಜಕವಾದಿಗಳು ಕೂಡ ತಮ್ಮನ್ನು ಸಮಾಜವಾದಿಗಳೆಂದು ಹೇಳಿಕೊಳ್ಳುವ ಮೂಲಕ ಮತ್ತಷ್ಟು ಗೊಂದಲಕ್ಕೆ ಕಾರಣರಾಗಿದ್ದಾರೆ. ಉದಾಹರಣೆಗೆ, ಬಂಡವಾಳವಾದಿ ವ್ಯವಸ್ಥೆಯಿಂದ ಸಮಾಜ ಕಮ್ಯುನಿಸ್ಟ್ ವ್ಯವಸ್ಥೆಯ ಕಡೆಗೆ ಸಾಗುವಾಗಿನ ಸಂಕ್ರಮಣಾವಸ್ಥೆಯನ್ನೇ ಕಮ್ಯುನಿಸ್ಟರು 'ಸಮಾಜವಾದ' ಎನ್ನುತ್ತಾರೆ. ತಮ್ಮದು 'ವೈಜ್ಞಾನಿಕ ಸಮಾಜವಾದ' (scientific socialism) ಎಂದು ಹೇಳಿಕೊಳ್ಳುತ್ತಾರೆ. ಹಾಗೆಯೇ ಅನಧಿಪತ್ಯವಾದಿಗಳು ತಮ್ಮನ್ನು 'ಸ್ವಾತಂತ್ರ್ಯಪ್ರಿಯ ಸಮಾಜವಾದಿ'ಗಳು (libertarian socialists) ಎಂದು ಕರೆದುಕೊಳ್ಳುತ್ತಾರೆ.

ಜೊತೆಗೆ ಇನ್ನೂ ಹಲವರು ಸಮಾಜವಾದಿ ಸಮಾಜವನ್ನು ಸ್ಥಾಪಿಸಲು ಅನುಸರಿಸುವ ಮಾರ್ಗಗಳನ್ನೇ ಸಮಾಜವಾದ ಎನ್ನುತ್ತಾರೆ. ಸಮಾಜವಾದದ ನಿರ್ವಚನದ ಬಗ್ಗೆ ಇರುವ ಗೊಂದಲವನ್ನು ವಿವರಿಸುತ್ತ ಸಿ.ಎ.ಆರ್. ಕ್ರಾಸಲ್ಯಾಂಡ ಹೀಗೆ ಹೇಳುತ್ತಾರೆ: '....ಅತ್ಯಂತ ಹೆಚ್ಚಿನ ಗೊಂದಲ ಉಂಟಾಗಿರುವುದು, ಸಮಾಜವಾದ ಎಂಬ ಶಬ್ದವನ್ನು ಒಂದು ಸಮಾಜವನ್ನು ವಿವರಿಸುವುದಕ್ಕಾಗಲೀ ಅಥವಾ ಅದರ ಲಕ್ಷಣಗಳಾಗಿರುವ ಹಲವು ಮೌಲ್ಯಗಳನ್ನು ವಿವರಿಸುವುದಕ್ಕಾಗಲೀ ಬಳಸದೇ, ಇಂತಹ ಸಮಾಜವನ್ನು ಕಟ್ಟಲು ಅಥವಾ ಇಂತಹ ಮೌಲ್ಯಗಳನ್ನು ಸಾಧಿಸುವುದಕ್ಕಾಗಿ ಬಳಸಲಾಗುವ ಸಾಧನಗಳನ್ನು ನಿರ್ದೇಶಿಸಲು ಬಳಸಲಾಗುತ್ತಿರುವುದು'[2]. ಇವೆಲ್ಲವನ್ನೂ ಮೀರಿಸಿ ಜಾರ್ಜ್ ಬನಾರ್ಡ್ ಶಾ ಹೇಳುವಂತೆ 'ದುರಾದೃಷ್ಟದಿಂದ ಇಂದು ತಮ್ಮನ್ನು ಸಮಾಜವಾದಿ ಎಂದು ಕರೆದುಕೊಳ್ಳುವ ಜನರಿಗೆ ಸಮಾಜವಾದ ಎಂದರೇನು ಎನ್ನುವುದು ಗೊತ್ತಿರುವುದಿಲ್ಲ, ಆದುದರಿಂದ ಆ ಹೆಸರನ್ನು ಸಮಾಜವಾದಕ್ಕೆ ಸಂಬಂಧವೇ ಇಲ್ಲದ ತಮ್ಮ ಖಯಾಲಿಗಳಿಗೆ, ನಂಬಿಕೆಗಳಿಗೆ, ಅನಿಷ್ಟಗಳಿಗೆ, ಹಾಗೂ ತಪ್ಪುಗಳಿಗೆ ಜೋಡಿಸುತ್ತಾರೆ'[3].

'ಸಮಾಜವಾದ' ಹಾಗೂ 'ಸಮಾಜವಾದಿ' ಈ ಶಬ್ದಗಳು 1803 ರಲ್ಲಿ ಮೊಟ್ಟ ಮೊದಲಿಗೆ ಇಟಾಲಿಯನ್ ಭಾಷೆಯಲ್ಲಿ ಅಚ್ಚಾಗಿದ್ದು ಕಂಡು ಬರುತ್ತದೆ. ನಂತರ ಇಂಗ್ಲೆಂಡಿನ ರಾಬರ್ಟ್ ಓವೆನ್[4] ವಾದಿಗಳನ್ನು ನಿರ್ದೇಶಿಸಲು ಓವೆನ್‌ನ ಅನುಯಾಯಿಗಳು ಪ್ರಕಟಿಸುತ್ತಿದ್ದ 'ಸಹಕಾರಿ ಪತ್ರಿಕೆ'ಯಲ್ಲಿ 'ಸಮಾಜವಾದಿ' ಎಂಬ ಶಬ್ದವನ್ನು ಅಚ್ಚಿನಲ್ಲಿ ಬಳಸಿದ್ದು ಕಂಡುಬರುತ್ತದೆ. ಫ್ರಾನ್ಸ್‌ನಲ್ಲಿ ಸ್ಯಾಂ-ಸೀಮೋಂನ[5] ಅನುಯಾಯಿಗಳು ಪ್ರಕಟಿಸುತ್ತಿದ್ದ 'ಲ ಗ್ಲೋಬ್' ಎಂಬ ಪತ್ರಿಕೆಯಲ್ಲಿ ಅವನ ಸಿದ್ಧಾಂತಗಳನ್ನು ನಿರ್ದೇಶಿಸಲು 1832 ರಲ್ಲಿ 'ಸಮಾಜವಾದ' ಎಂಬ ಶಬ್ದವನ್ನು ಬಳಸಲಾಯಿತು. ಸಮಾಜವಾದಿ ವಿಚಾರಗಳ ಪರಂಪರೆಯನ್ನು ಹಲವು ಸಮಾಜವಾದಿ ಇತಿಹಾಸಕಾರರು ಇನ್ನೂ ಹಿಂದಿನ ಕಾಲದಲ್ಲಿಯೇ ಗುರುತಿಸುತ್ತಾರೆ. ಗ್ರೀಕ್, ರೋಮನ್ ಹಾಗೂ ಬೈಬಲ್ಲಿನಲ್ಲಿಯೂ ಸಮಾಜವಾದಿ ಆದರ್ಶಗಳನ್ನು ಕಾಣುತ್ತಾರೆ.

---

1. ಅಶೋಕ ಮೆಹತಾ (1911–1984) : ಭಾರತದ ಸಮಾಜವಾದಿ ಮುಖಂಡ, ಲೋಕಸಭಾ ಸದಸ್ಯ, ಯೋಜನಾ ಆಯೋಗದ ಉಪಾಧ್ಯಕ್ಷ ಹಾಗೂ ನಂತರ ಭಾರತ ಸರಕಾರದಲ್ಲಿ ಯೋಜನಾ ಮಂತ್ರಿ: 'ಸ್ಟಡೀಜ್ ಇನ್ ಸೋಷಲಿಜಂ' ಪುಸ್ತಕದ ಮುನ್ನುಡಿಯಲ್ಲಿ.
2. ಚಾರ್ಲ್ಸ್ ಅಂಥೋನಿ ರೇವೆನ್ ಕ್ರೊಸ್‌ಲ್ಯಾಂಡ್ (1918–1977) : ಬ್ರಿಟಿಷ್ ಲೇಬರ ಪಕ್ಷದ ಸದಸ್ಯ, ಹೌಸ್ ಆಫ್ ಕಾಮನ್ಸ ಸದಸ್ಯ, ಲೇಬರ್ ಪಕ್ಷದ ಸರಕಾರಗಳಲ್ಲಿ ಶಿಕ್ಷಣ ಮತ್ತು ವಿಜ್ಞಾನದ ಉಪಮಂತ್ರಿ, ಸ್ಥಳೀಯ ಸರಕಾರ ಹಾಗೂ ಪ್ರಾಂತೀಯ ಯೋಜನಾ ಉಪಮಂತ್ರಿ, ಪರಿಸರ ರಕ್ಷಣಾ ಉಪಮಂತ್ರಿ, ಫೇಬಿಯನ್ ಸೊಸೈಟಿಯ ಅಧ್ಯಕ್ಷ – ದ ಫ್ಯೂಚರ್ ಆಫ್ ಸೋಷಲಿಜಂ – ಪುಟ 65
3. ಜಾರ್ಜ ಬರ್ನಾರ್ಡ ಶಾ (1856–1950) : ನಾಟಕಕಾರ, ಕಾದಂಬರಿಕಾರ ಹಾಗೂ ವಿಮರ್ಶಕ, ಫೇಬಿಯನ್ ಸಮಾಜವಾದಿ – ಎನ್ ಇಂಟೆಲಿಜೆಂಟ್ ಉಮನ್ಸ ಗೈಡ್ ಟು ಸೋಷಲಿಜಂ ಎಂಡ್ ಕೆಪಿಟಾಲಿಜಂ – ಪುಟ 345
4. ರಾಬರ್ಟ ಓವೆನ್ (1771–1858) : ಇಂಗ್ಲೆಂಡಿನಲ್ಲಿ ಸಮಾಜವಾದದ, ಸಹಕಾರಿ ಆಂದೋಲನದ, ಕಾರ್ಮಿಕ ಸಂಘಟನೆಗಳ ಪಿತಾಮಹ.
5. ಕ್ಲೂದ್ ಆಂರಿ ದು ಉಹುರ್ವಾ, ಕೋಂ ದು ಸ್ಯಾಂ ಸೀಮೋಂ (1760–1825) : (Claude Henri de Rouvroy, comte de Saint-Simon) : ಫ್ರಾನ್ಸ ದೇಶದ ಸಮಾಜವಾದಿ.

'ಆದರೆ ಇಂದು ನಾವು ಕಾಣುವ ಸಮಾಜವಾದ ಫ್ರೆಂಚ್ ಹಾಗೂ ಔದ್ಯೋಗಿಕ ಕ್ರಾಂತಿಗಳು ಪ್ರಾರಂಭಿಸಿದ ಪ್ರಕ್ರಿಯೆಯ ಪರಿಣಾಮವಾಗಿ ಮೈದಾಳಿತು' ಎನ್ನುತ್ತಾರೆ ಅಶೋಕ ಮೆಹತಾ[6]. ಇಂಗ್ಲೆಂಡಿನಲ್ಲಿ ರಾಬರ್ಟ ಓವೆನ್ ಹಾಗೂ ಫ್ರಾನ್ಸ್‌ನಲ್ಲಿ ಸ್ಯಾಂ ಸೀಮೋಂ ಹಾಗೂ ಶಾರ್ಲ ಫೂರಿಯೆ[7] ಔದ್ಯೋಗಿಕ ಕ್ರಾಂತಿ ಹುಟ್ಟುಹಾಕುತ್ತಿದ್ದ ಸಮಾಜವನ್ನು 'ಕಳಪೆ, ಅನೈತಿಕ' ಸಮಾಜ ಎಂದು ಖಂಡಿಸಿದರು, ಅದರ ಬದಲಿಗೆ 'ಹೊಸ ನೈತಿಕ' ಸಮಾಜವನ್ನು ಹುಟ್ಟುಹಾಕಬಯಸಿದರು. ಈ ಹಿನ್ನೆಲೆಯಲ್ಲಿ ಫ್ರೆಂಚ್ ಕ್ರಾಂತಿಯ ಸಂದರ್ಭದಲ್ಲಿ ಗ್ರಾಕ್ಕುಸ್ ಬಬಫ್[8] ಪ್ರಕಟಿಸಿದ 'ಸಮಾನರ ಪ್ರಣಾಳಿಕೆ'ಯನ್ನೇ ಮೊದಲ ಸಮಾಜವಾದಿ ಘೋಷಣೆ ಎಂದು ಪರಿಗಣಿಸಲಾಗುತ್ತದೆ. ಇಂದಿಗೂ ಸಮಾಜವಾದದ ಮೂಲತತ್ವಗಳೆಂದು ಒಪ್ಪಿಕೊಳ್ಳಲಾಗುವ 'ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರಭಾವ'ಗಳನ್ನು ನೀಡಿದವನೇ ಈ ಬಬಫ್.

ಸಮಾಜವಾದಿ ಇತಿಹಾಸಕಾರ ಜಾರ್ಜ ಲೈಥ್ಯಾಮ್ 'ಸಮಾಜವಾದ ಎಂದರೆ, ಮೊದಲನೆಯದಾಗಿ, ಆಸ್ತಿಯ ಸಿದ್ಧಾಂತವಲ್ಲ, ರಾಜ್ಯವ್ಯವಸ್ಥೆಯ ಬಗೆಗಿನ ಸಿದ್ಧಾಂತವೂ ಅಲ್ಲ. ಸಮಾಜವಾದ ಸಮಾನತೆಯ ಬಗೆಗಿನ ಸಿದ್ಧಾಂತ. ಸಮಾನತೆಯ ಬಗೆಗಿನ ಒತ್ತಾಸೆ ಎಲ್ಲಾ ಸಮಾಜವಾದಿಗಳನ್ನೂ ಒಟ್ಟಿಗೆ ತರುತ್ತದೆ, ಮಿಕ್ಕುಳಿದ ಎಲ್ಲಾ ವಿಷಯಗಳ ಬಗ್ಗೆ ಅವರಲ್ಲಿ ಭಿನ್ನಾಭಿಪ್ರಾಯವಿದೆ' ಎಂದು ಹೇಳುತ್ತಾರೆ.[9]

ರಾಬರ್ಟ್ ಓವೆನ್, ಸ್ಯಾಂ ಸೀಮೋಂ ಹಾಗೂ ಶಾರ್ಲ ಫೂರಿಯೆ ಇವರ ಪ್ರತಿಭಟನೆ ಭಾವನಾತ್ಮಕವಾಗಿದ್ದುದರಿಂದ ಕ್ಷಿಪ್ರ ಕ್ರಾಂತಿಯ ಮೂಲಕವೇ ಸಮಾಜದಲ್ಲಿ ಬದಲಾವಣೆ ತರಬೇಕೆಂದು ಪ್ರತಿಪಾದಿಸುತ್ತಿದ್ದ ಲೂಯಿ ಬ್ಲೊಂಕಿ[10] ಇವರನ್ನು 'ಯುಟೋಪಿಯನ್', ಅಂದರೆ 'ಕಲ್ಪನಾ ಲೋಕ'ದ ಸಮಾಜವಾದಿಗಳು ಎಂದು ಕರೆದ. ಆದರೆ ನಂತರ ಅವರ ಈ ಪ್ರತಿಭಟನೆಗೆ ಜಾನ್ ಸ್ಟುಅರ್ಟ್[11] ಮಿಲ್ ಆರ್ಥಿಕ-ಸೈದ್ಧಾಂತಿಕ ತಳಹದಿಯನ್ನು ಒದಗಿಸಿದ. ಇಲ್ಲಿಂದ ಮುಂದೆ ಸಮಾಜವಾದ ವಿವಿಧ ವಿಚಾರಧಾರೆಗಳಲ್ಲಿ ಹರಿಯಲು ಪ್ರಾರಂಭಿಸಿತು.

ಬ್ಲೊಂಕಿ ಕ್ಷಿಪ್ರಕ್ರಾಂತಿಯನ್ನು ಅನುಮೋದಿಸಿದರೆ, ಲೂಯಿ ಬ್ಲೊಂ[12] ಜನತಾಂತ್ರಿಕ ವಿಧಾನಗಳನ್ನು ಅನುಮೋದಿಸುತ್ತಾನೆ. ಲಡ್ಲೊ ಕ್ರಿಶ್ಚಿಯನ್ ಧರ್ಮವನ್ನು ಆಧರಿಸಿ

---

6. ಅಶೋಕ ಮೆಹತಾ (1911–1984) – ರಿಫ್ಲೆಕ್ಷನ್ಸ ಆನ್ ಸೋಷಲಿಸ್ಟ ಇರಾ – ಪುಟ 24
7. ಫ್ರಾನ್ಸ್ವಾ ಮಾರಿ ಶಾರ್ಲ ಫೂರಿಯೇ (1772–1837) : (François Marie Charles Fourier): ಫ್ರಾನ್ಸ ದೇಶದ ಸಮಾಜವಾದಿ.
8. ಫ್ರಾನ್ಸ್ವಾ ನೋಯೆಲ್ ಬಬಫ್ (1760–1797) : (François-Noël Babeuf) ಇವರು ಗ್ರಾಕ್ಯೂಸ್ಸ ಬಬಫ (Gracchus Babeuf) ಎಂದೂ ಹೆಸರಾಗಿದ್ದರು : ಫ್ರೆಂಚ್ ಕ್ರಾಂತಿಯ ಮುಖಂಡ, ಮೇ 27 ರಂದು ಸಮಾನರ ಸಂಚಿನ ಕಾರಣಕ್ಕಾಗಿ ಗಿಲಟಿನ್ ಮಾಡಲಾಯಿತು.
9. ಜಾರ್ಜ ಲೈಥ್ಯಾಮ್ : A Short History of Socialism – P 306
10. ಲೂಯಿ ಅಗಸ್ತ ಬ್ಲಾಂಕಿ (1805–1881) : (Louis Auguste Blanqui): ಫ್ರಾನ್ಸ ದೇಶದ ರಾಜಕಾರಣಿ.
11. ಜಾನ್ ಸ್ಟುಅರ್ಟ ಮಿಲ್ (1806–1873) : ಇಂಗ್ಲೆಂಡಿನ ಅರ್ಥಶಾಸ್ತ್ರಜ್ಞ, ರಾಜಕಾರಣಿ.
12. ಲೂಯಿ ಜ್ಯಾಂ ಜೋಸೆಫ್ ಶಾರ್ಲ ಬ್ಲಾಂ (1811–1882) : (Louis Jean Joseph Charles Blanc) : ಜನತಾಂತ್ರಿಕ ಸಮಾಜವಾದದ ಪಿತಾಮಹ.

ಸಮಾಜವಾದವನ್ನು ಕಟ್ಟಲು ಕರೆ ನೀಡಿದರೆ, ಹೆಸ್ ಸಹಕಾರವನ್ನಾಧರಿಸಿ ಕಟ್ಟಲು ಕರೆ ನೀಡುತ್ತಾನೆ. ಪ್ರಸ್ತುತ ರಾಜ್ಯ ವ್ಯವಸ್ಥೆಯನ್ನು ಕಿತ್ತು ಹಾಕಿ ಹೊಸ ರಾಜ್ಯ ವ್ಯವಸ್ಥೆಯೊಂದನ್ನು ಕಟ್ಟುವುದರ ಮೂಲಕ ಸಮಾಜವಾದವನ್ನು ತರಬೇಕು ಎಂದು ಕಾರ್ಲ್ ಮಾರ್ಕ್ಸ್ ಮೊದಲಾದವರು ಹೇಳಿದರೆ, ಇರುವ ರಾಜ್ಯ ವ್ಯವಸ್ಥೆಯನ್ನೇ ಬಳಸಿಕೊಂಡು ಸಮಾಜವಾದವನ್ನು ತರಬೇಕೆಂದು ಬ್ಲೊಂ ಹಾಗೂ ಫೆರ್ಡಿನಾಂಡ ಲಾಸ್ಸೆಲ್ಲ್[13] ಮೊದಲಾದವರು ಹೇಳುತ್ತಾರೆ. ಪ್ರೂಧೋಂ[14], ರಾಜ್ಯ ವ್ಯವಸ್ಥೆಯೇ ಇಲ್ಲದಿರುವ ಸಮಾಜವಾದಿ ಸಮಾಜವನ್ನು ನಿರ್ಮಿಸಬಯಸುತ್ತಾನೆ. ಬೂಷೆ[15] ವ್ಯಕ್ತಿಯನ್ನು ಕೇಂದ್ರದಲ್ಲಿಟ್ಟು ಯೋಚಿಸುತ್ತಾನೆ. ಪಿಕೆ[16] ಸಮೂಹವನ್ನು ತನ್ನ ವಿಚಾರಗಳ ಕೇಂದ್ರದಲ್ಲಿಡುತ್ತಾನೆ. ಹೀಗೆ ಹಲವಾರು ಧಾರೆಗಳಲ್ಲಿ ಸಮಾಜವಾದಿ ಚಿಂತನೆ ಮುಂದುವರಿಯುತ್ತದೆ.

ಸಮಾಜವಾದಿ ವಿಚಾರಗಳ ಆಧಾರದ ಮೇಲೆ ಯುರೋಪಿನ ಹಲವಾರು ದೇಶಗಳಲ್ಲಿ ಸ್ಥಾಪಿತವಾಗಿದ್ದ 'ಸೋಷಿಯಲ್ ಡೆಮೊಕ್ರೆಟಿಕ್' ಪಕ್ಷಗಳನ್ನು ಅಂತರ್‍ರಾಷ್ಟ್ರೀಯ ಮಟ್ಟದಲ್ಲಿ ಒಂದುಗೂಡಿಸಿ 1864ರಲ್ಲಿ ಕಟ್ಟಲಾದ ಪ್ರಥಮ ಅಂತರ್‍ರಾಷ್ಟ್ರೀಯ ಕಾರ್ಮಿಕ ಸಂಘಟನೆಯಲ್ಲಿ ಮೂರು ವಿಚಾರ ಧಾರೆಗಳು ಸ್ಪಷ್ಟ ರೂಪ ಪಡೆದಿದ್ದವು – ರಾಜ್ಯ ವ್ಯವಸ್ಥೆಯನ್ನೇ ನಿರಾಕರಿಸುವ ಅನಧಿಪತ್ಯವಾದ, ಪ್ರಸ್ತುತ ರಾಜ್ಯ ವ್ಯವಸ್ಥೆಯನ್ನು ಹಿಂಸಾತ್ಮಕ ಕ್ರಾಂತಿಯ ಮೂಲಕ ಕಿತ್ತೊಗೆಯ ಬಯಸುವ ಮಾರ್ಕ್ಸ್‌ವಾದ ಹಾಗೂ ರಾಜ್ಯ ವ್ಯವಸ್ಥೆಯನ್ನು ಜನತಾಂತ್ರಿಕ ರಾಜ್ಯ ವ್ಯವಸ್ಥೆಯನ್ನಾಗಿ ಮಾರ್ಪಡಿಸಿ ಅದರ ಮೂಲಕ ಸಮಾಜವಾದವನ್ನು ಸಾಧಿಸಬಯಸುವ ಜನತಾಂತ್ರಿಕ ಸಮಾಜವಾದ. ಈ ಸಂಘಟನೆಯಲ್ಲಿ ಮಾರ್ಕ್ಸ್‌ವಾದ ಹಾಗೂ ಅನಧಿಪತ್ಯವಾದಗಳ ನಡುವೆ ಘರ್ಷಣೆ ನಡೆದು 1872ರಲ್ಲಿ ಅನಧಿಪತ್ಯವಾದಿ ನಾಯಕ ಮಿಖೈಲ್ ಬಾಕುನಿನ್[17] ಅವನನ್ನು ಸಂಘಟನೆಯಿಂದ ಹೊರದೂಡಲಾಯಿತು. ಅನಧಿಪತ್ಯವಾದಿಗಳ ಕಾಟ ತಪ್ಪಿಸಲು ಮಾರ್ಕ್ಸ್ ಸಂಘಟನೆಯ ಕಛೇರಿಯನ್ನು ಯುರೋಪಿನಿಂದ ಅಮೇರಿಕೆಯ ನ್ಯೂಯಾರ್ಕಿಗೆ ಸ್ಥಳಾಂತರಿಸಿದ. ಆದರೆ ಇದರಿಂದಾಗಿ ಸಂಘಟನೆಯೇ ಮುರಿದು ಹೋಯಿತು.

ನಂತರ 1889 ರಲ್ಲಿ ಸಂಘಟಿಸಲಾದ ಎರಡನೆಯ ಅಂತರ್‍ರಾಷ್ಟ್ರೀಯಕ್ಕೆ ಸಮಾಜವಾದಿ ಗುರಿಯನ್ನು ಸಾಧಿಸಲು ಕಾನೂನುಬದ್ಧ ಹಾಗೂ ಸಂಸದೀಯ ಚಟುವಟಿಕೆಗಳನ್ನು ಅವಶ್ಯಕ ಸಾಧನಗಳೆಂದು ನಂಬುವ ಪಕ್ಷಗಳನ್ನು ಮಾತ್ರ ಆಹ್ವಾನಿಸಲು ನಿರ್ಧರಿಸಲಾಯಿತು. ಇದರಿಂದಾಗಿ ಅನಧಿಪತ್ಯವಾದಿಗಳಿಗೆ ಪ್ರವೇಶವನ್ನು ನಿರಾಕರಿಸಿದಂತಾಯಿತಲ್ಲದೇ, ಮಾರ್ಕ್ಸ್‌ವಾದಿಗಳು ಕಾನೂನುಬದ್ಧ ಸಂಸದೀಯ ಚಟುವಟಿಕೆಗಳನ್ನು ಸಮಾಜವಾದ

---

13. ಫೆರ್ಡಿನಾಂಡ್ ಯೋಹಾನ್ ಗೋಟ್ಲೀ ಲಾಸ್ಸೆಲ್ಲ್ (1825–1864) : Ferdinand Johann Gottlieb Lassalle : ಜರ್ಮನಿಯ ತತ್ವಚಿಂತಕ, ಸಮಾಜವಾದಿ.
14. ಪಿಯರೆ ಜೋಸೆಫ ಪ್ರೂಧೋಂ (1809–1865) : (Pierre-Joseph Proudhon), ಫ್ರಾನ್ಸ ದೇಶದ ಸಮಾಜವಾದಿ–ಅನಧಿಪತ್ಯವಾದಿ.
15. ಫಿಲಿಪಿ–ಜೋಸೆಫ್ ಬಾಂಜಾಮಾನ್ ಬೂಷೆ (1795–1865) : (Philippe-Joseph-Benjamin Buchez)
16. ಕೊನ್ಸ್ಟಾಂತಿಂ ಪಿಕೆ (1801–1887) : (Constantin Pecqueur) ಫ್ರಾನ್ಸ ದೇಶದ ಸಮಾಜವಾದಿ
17. ಮಿಖೈಲ್ ಬಾಕುನಿನ್ (1814–1876) : ರಶಿಯದ ಅನಧಿಪತ್ಯವಾದಿ.

ತರಲು ಸಾಧನಗಳೆಂದು ಒಪ್ಪಿಕೊಳ್ಳುವ ಹಾಗೆಯೂ ಆಯಿತು. ಆದರೂ ಕೂಡ ಈ ಬಾರಿ ಸಂಘಟನೆಯಲ್ಲಿ ಮಾರ್ಕ್ಸ್‌ವಾದಿಗಳು ಹಾಗೂ ಸುಧಾರಣಾವಾದಿಗಳ ನಡುವೆ ಸಂಘರ್ಷ ಪ್ರಾರಂಭವಾಯಿತು. ರಾಜ್ಯ ವ್ಯವಸ್ಥೆಯನ್ನು ಒಂದು ವರ್ಗವ್ಯವಸ್ಥೆ ಎಂದು ವ್ಯಾಖ್ಯಾನಿಸಿ ಅದು ಬಂಡವಾಳವಾದಿ ವರ್ಗವನ್ನು ಪ್ರತಿನಿಧಿಸುವುದರಿಂದ ಅದನ್ನು ಹಿಂಸಾತ್ಮಕವಾಗಿಯಾದರೂ ಬುಡಸಹಿತ ಕಿತ್ತು ಹಾಕಬೇಕೆಂಬ ತಮ್ಮ ವಾದವನ್ನು ಮಾರ್ಕ್ಸ್‌ವಾದಿಗಳು ಕೈಬಿಡಲಿಲ್ಲ. ಆದರೆ ಅದೊಂದು ತಟಸ್ಥ ವ್ಯವಸ್ಥೆ ಎಂದೂ, ಯಾವ ವರ್ಗ ಬೇಕಾದರೂ ಅದನ್ನು ತನ್ನ ಅನುಕೂಲಕ್ಕಾಗಿ ಬಳಸಿಕೊಳ್ಳುವುದು ಸಾಧ್ಯವೆಂದೂ, ಆದುದರಿಂದ ಪ್ರಜಾಪ್ರಭುತ್ವವನ್ನು ವಿಸ್ತರಿಸುವುದರ ಮೂಲಕ ರಾಜ್ಯ ವ್ಯವಸ್ಥೆಯನ್ನು ಜನಪರ ವ್ಯವಸ್ಥೆಯನ್ನಾಗಿ ಪರಿವರ್ತಿಸುವುದು ಸಾಧ್ಯ ಎಂದೂ ಸಮಾಜವಾದಿಗಳು ಹಾಗೂ ಸುಧಾರಣಾವಾದಿಗಳು ವಾದಿಸಿದರು. ಇವರಲ್ಲಿ ಇಂಗ್ಲೇಂಡಿನ ಫೇಬಿಯನ್ ಸಮಾಜವಾದಿಗಳು, ಸ್ಕಾಂಡಿನೇವಿಯಾದ ಸಮಾಜವಾದಿಗಳು ಹಾಗೂ ಜರ್ಮನಿಯ ಎಡ್ವರ್ಡ್ ಬರ್ನ್‌ಸ್ಟೈನ್[18] ಪ್ರಮುಖರು.

ಸಮಾಜವಾದ ಬಂಡವಾಳವಾದದ ಗರ್ಭದಿಂದಲೇ ಹುಟ್ಟುತ್ತದೆ ಎಂದು ಮಾರ್ಕ್ಸ್ ವ್ಯಾಖ್ಯಾನಿಸಿದ್ದ. ಆದರೆ ಬಂಡವಾಳವಾದ ಇನ್ನೂ ಬೆಳೆದಿರದ ಹಾಗೂ ಇನ್ನೂ ಪಾಳೇಗಾರಿ ವ್ಯವಸ್ಥೆಯನ್ನು ಹೊಂದಿದ್ದ, ಔದ್ಯೋಗಿಕ ಬೆಳವಣಿಗೆಯಾಗದೇ ಕಾರ್ಮಿಕರು ಅತ್ಯಲ್ಪ ಸಂಖ್ಯೆಯಲ್ಲಿದ್ದು, ಪೆಟಿ ಬೂರ್ಷುವಾ ವರ್ಗವೆಂದು ಮಾರ್ಕ್ಸ್ ಕರೆದಿದ್ದ ರೈತರೇ ಹೆಚ್ಚಿನ ಸಂಖ್ಯೆಯಲ್ಲಿದ್ದ ರಶಿಯದಲ್ಲಿ ಸಮಾಜವಾದಿಗಳು ಕ್ರಾಂತಿ ಮಾಡಿ ಫೆಬ್ರುವರಿ 1917ರಲ್ಲಿ ಝಾರನನ್ನು ಅಧಿಕಾರದಿಂದ ಕೆಳಗಿಳಿಸಿದರು. ಆದರೆ ರಶಿಯದಲ್ಲಿದ್ದ ಸೋಷಿಯಲ್ ಡೆಮೊಕ್ರೆಟಿಕ್ ಪಕ್ಷವನ್ನು 1903ರಲ್ಲಿ ಒಡೆದು ಇಬ್ಭಾಗ ಮಾಡಿ, ಪಕ್ಷದಲ್ಲಿ ತನಗೆ ಅಲ್ಪಮತವಿದ್ದರೂ ತನ್ನ ಗುಂಪನ್ನು 'ಬಹುಮತ'ದ ಗುಂಪು (ಬೋಲ್ಶೆವಿಕ್) ಎಂದು ಕರೆದುಕೊಂಡಿದ್ದ, ಹಾಗೂ ಫೆಬ್ರುವರಿಯಲ್ಲಿ ಕ್ರಾಂತಿ ನಡೆದಾಗ ವಿದೇಶದಲ್ಲಿ ತಲೆಮರೆಸಿಕೊಂಡಿದ್ದ ವ್ಲದಿಮೀರ್ ಲೆನಿನ್[19] ಅಕ್ಟೋಬರ್ 1917ರಲ್ಲಿ ಸಮಾಜವಾದಿಗಳನ್ನು ಅಧಿಕಾರದಿಂದ ಕೆಳಗಿಳಿಸಿ ತಾನು ಅಧಿಕಾರ ಹಿಡಿದುಕೊಂಡ. ಝಾರನ ಇಡೀ ಪರಿವಾರವನ್ನು ಗುಂಡಿಕ್ಕಿ ಕೊಲ್ಲಲಾಯಿತು. ಮಾರ್ಕ್ಸ್ ಹೇಳಿದ ಕಾರ್ಮಿಕರ ಸರ್ವಾಧಿಕಾರವನ್ನು ಲೆನಿನ್ ಪಕ್ಷದ ಸರ್ವಾಧಿಕಾರವನ್ನಾಗಿ ಪರಿವರ್ತಿಸಿದ. 1918ರಲ್ಲಿ ಸಮಾಜವಾದಿ ಪಕ್ಷದಲ್ಲಿದ್ದ ತನ್ನ ಗುಂಪಿನ ಹೆಸರನ್ನು 'ಕಮ್ಯುನಿಸ್ಟ ಪಕ್ಷ' ಎಂದು ಬದಲಿಸಿದ. ನಂತರ ಯುರೋಪಿನ ಸುಮಾರು ಎಲ್ಲಾ ಸೋಷಿಯಲ್ ಡೆಮೊಕ್ರೆಟಿಕ್ ಪಕ್ಷಗಳನ್ನು ಒಡೆದು ಕಮ್ಯುನಿಸ್ಟ ಪಕ್ಷಗಳನ್ನು ಕಟ್ಟಿದ. ಇಲ್ಲಿಂದ ನಂತರ ಸಮಾಜವಾದಿಗಳು ತಮ್ಮನ್ನು ಈ ಕಮ್ಯುನಿಸ್ಟರಿಂದ ಭಿನ್ನವಾಗಿ ಗುರುತಿಸಿಕೊಳ್ಳಲು 'ಜನತಾಂತ್ರಿಕ ಸಮಾಜವಾದಿಗಳು' ಎಂದು ಕರೆದುಕೊಳ್ಳಲಾರಂಭಿಸಿದರು. ಕಮ್ಯುನಿಸ್ಟರು ತಮ್ಮದೇ ಆದ ಒಂದು ಅಂತರ್‍ರಾಷ್ಟ್ರೀಯ ಸಂಘಟನೆಯನ್ನು ಕಟ್ಟಿಕೊಂಡರು.

---

18. ಎಡ್ವರ್ಡ್ ಬರ್ನ್‌ಸ್ಟೈನ್ (1850–1932) Eduard Bernstein : ಜರ್ಮನಿಯ ಸಮಾಜವಾದಿ. ಪರಿಷ್ಕರಣವಾದದ ಪಿತಾಮಹನೆಂದೇ ಹೆಸರುವಾಸಿ.
19. ವ್ಲದಿಮೀರ್ ಇಲ್ಯಿಚ್ ಲೆನಿನ್ (1870–1924) : Vladimir Ilyich Lenin : ರಶಿಯ ದೇಶದ ಕ್ರಾಂತಿಕಾರಿ. ಮಾರ್ಕ್ಸ್ ಅನುಯಾಯಿ.

ಈ ರೀತಿ ಎರಡನೆಯ ಅಂತರಾಷ್ಟ್ರೀಯದ ಒಕ್ಕಟ್ಟು ರಶಿಯದ ಬೋಲ್ಷೆವಿಕ್ ಕ್ರಾಂತಿಯ ಪರಿಣಾಮವಾಗಿ ಒಡೆದುಹೋಯಿತು. ಎರಡು ವಿರೋಧಿ ಅಂತರಾಷ್ಟ್ರೀಯಗಳು ಅಸ್ತಿತ್ವಕ್ಕೆ ಬಂದು ಅವುಗಳಲ್ಲೊಂದು 'ಕ್ರಾಂತಿಯ ಮೂಲಕ ಸಮಾಜವಾದ'ವನ್ನು ಪ್ರತಿಪಾದಿಸಿದರೆ ಇನ್ನೊಂದು 'ಜನತಂತ್ರವಿಲ್ಲದೆ ಸಮಾಜವಾದವಿಲ್ಲ' ಎಂದು ಘೋಷಿಸಿತು.

ಜಗತ್ತಿನಲ್ಲೆಲ್ಲಾ ಬಂಡವಾಳವಾದ ಹಾಗೂ ಸಮಾಜವಾದಗಳೆರಡಕ್ಕೂ, ಕಮ್ಯುನಿಸಂ ಒಂದು ಪ್ರಬಲ ವಿರೋಧಿಯಾಗಿ ಬೆಳೆಯಿತು. ಅದರ ಸಮಾಜವಾದ ವಿರೋಧ, ಬಂಡವಾಳವಾದದ ವಿರೋಧಕ್ಕಿಂತ ಹೆಚ್ಚಾಗಿ ಬೆಳೆದು ಸರ್ವಾಧಿಕಾರದ ಬರುವಿಗೆ ದಾರಿ ಮಾಡಿಕೊಟ್ಟಿತು. ಸರ್ವಾಧಿಕಾರ ಬೆಳೆದು, ಬಂಡವಾಳವಾದ, ಸಮಾಜವಾದ ಹಾಗೂ ಕಮ್ಯುನಿಸಂ, ಈ ಮೂರೂ ಸಿದ್ಧಾಂತಗಳನ್ನು ಎದುರಿಸಿ ನಿಂತಿತು. ಮಾರ್ಕ್ಸ್‌ನ ವಿಶ್ಲೇಷಣೆಯ ಜಾಲದಿಂದ ಹೊರಬರಲಾಗದ ಮಾರ್ಕ್ಸ್‌ವಾದಿಗಳು ಸರ್ವಾಧಿಕಾರವನ್ನು ಮಾರ್ಕ್ಸ್‌ವಾದದ ಚೌಕಟ್ಟಿನಲ್ಲಿಯೇ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿ ಬಂಡವಾಳವಾದದ ಕೊನೆಯ ಹೋರಾಟವೇ ಸರ್ವಾಧಿಕಾರ ಎಂದು ಅದನ್ನು ನಿರ್ವಚಿಸಿದರು. ಆದರೆ ಈ ವಿವರಣೆಯನ್ನು ಒಪ್ಪದ ಸಮಾಜವಾದಿಗಳು ಸರ್ವಾಧಿಕಾರ ಒಂದು ಹೊಸ ಸಿದ್ಧಾಂತವೇ ಆಗಿತ್ತು ಎಂದು ಹೇಳಿದರು.

ಲೆನಿನ್ ನಂತರ ಅಧಿಕಾರಕ್ಕೆ ಬಂದ ಜೋಸೆಫ್ ಸ್ಟಾಲಿನ್[20], ತನ್ನ ಪಕ್ಷದಲ್ಲೇ ಇದ್ದ ತನ್ನ ವಿರೋಧಿಗಳಲ್ಲಿ ಹಲವರನ್ನು ಕೊಂದು, ಹಲವರನ್ನು ಗಡೀಪಾರು ಮಾಡಿ, ಪಕ್ಷದ ಸರ್ವಾಧಿಕಾರವನ್ನು ತನ್ನ ವೈಯಕ್ತಿಕ ಸರ್ವಾಧಿಕಾರವನ್ನಾಗಿ ಪರಿವರ್ತಿಸಿದ. ಎರಡನೆಯ ಮಹಾಯುದ್ಧದ ಸಂದರ್ಭದಲ್ಲಿ ಸ್ಟಾಲಿನ್ ಜರ್ಮನಿಯ ಸರ್ವಾಧಿಕಾರಿ ಹಿಟ್ಲರನೊಡನೆ ಕೈಜೋಡಿಸಿದ. ಎಲ್ಲಾ ದೇಶಗಳ ಕಮ್ಯುನಿಸ್ಟರು ಹಿಟ್ಲರನ ಸರ್ವಾಧಿಕಾರವನ್ನು ಬೆಂಬಲಿಸಿದರು. ಈ ಬೆಳವಣಿಗೆಗಳಿಂದಾಗಿ ಭಾರತದ ಮಾರ್ಕ್ಸ್‌ವಾದಿಗಳೂ ಸೇರಿದಂತೆ, ಜಗತ್ತಿನ ಹಲವಾರು ಕಡೆಗಳಲ್ಲಿ ಹಲವಾರು ಮಾರ್ಕ್ಸ್‌ವಾದಿಗಳು ಮಾರ್ಕ್ಸ್‌ವಾದದಿಂದ ಭ್ರಮನಿರಸನ ಹೊಂದಿದರು. ಎರಡನೆಯ ಮಹಾಯುದ್ಧದ ಸಂದರ್ಭದಲ್ಲಿ ಸಮಾಜವಾದಿಗಳು ಭೂಗತರಾಗಿ ಸರ್ವಾಧಿಕಾರದ ವಿರುದ್ಧ ಹೋರಾಡಿದರು. ಮಹಾಯುದ್ಧದ ಕೊನೆಯ ಹಂತದಲ್ಲಿ ರಶಿಯದ ಕೆಂಪು ಸೈನ್ಯದ ಬಲದ ಮೇಲೆ ಪೂರ್ವ ಯುರೋಪಿನ ಹಲವಾರು ದೇಶಗಳಲ್ಲಿ ಕಮ್ಯುನಿಸ್ಟರು ಅಧಿಕಾರ ಹಿಡಿದುಕೊಂಡರು. ಮಹಾಯುದ್ಧದ ನಂತರ ಚುನಾವಣೆಗಳು ನಡೆದ ಪಶ್ಚಿಮ ಯುರೋಪಿನ ಹಲವಾರು ದೇಶಗಳಲ್ಲಿ ಸಮಾಜವಾದಿಗಳು ಅಧಿಕಾರಕ್ಕೆ ಬಂದರು. ಹೀಗೆ ಅಧಿಕಾರಕ್ಕೆ ಬಂದ ಸ್ಕ್ಯಾಂಡಿನೇವಿಯದ ದೇಶಗಳಲ್ಲಿ ಸಮಾಜವಾದಿಗಳು ಸಾಧಿಸಿದ ಪ್ರಗತಿ, ಜಗತ್ತಿನ ಎಲ್ಲಾ ಸಮಾಜವಾದಿಗಳೂ ಅವರ ಬಗ್ಗೆ ಹೆಮ್ಮೆಪಡುವಂತೆ ಮಾಡಿತು. ಉದಾಹರಣೆಗೆ, ಮಾನವ ಅಭಿವೃದ್ಧಿ ಸೂಚ್ಯಾಂಕಗಳಲ್ಲಿ ಸಮಾಜವಾದಿ ಸ್ವೀಡನ್ 10ನೆಯ ಸ್ಥಾನದಲ್ಲಿದ್ದರೆ ಕಮ್ಯುನಿಸ್ಟ್ ರಶಿಯ 67 ಸ್ಥಾನದಲ್ಲಿದೆ. ಇಲ್ಲಿ ಸಮಾಜವಾದ ವರ್ಗ ಹೋರಾಟದ ಆಧಾರದ ಮೇಲೆ ಬೆಳೆಯದೆ ಆರ್ಥಿಕ ಹಾಗೂ ಸಾಮಾಜಿಕ ಅಸಮಾನತೆಗಳನ್ನು ಕಡಿಮೆ ಮಾಡುತ್ತ ಹೋಗುವ ಸುಧಾರಣೆಗಳ ಮೇಲೆ ಒತ್ತು ಕೊಟ್ಟು ಮುಂದುವರೆಯಿತು.

---

20. ಜೋಸೆಫ್ ಸ್ಟಾಲಿನ್ (1879–1953) : ಹುಟ್ಟು ಹೆಸರು Ioseb Besarionis dze Jugashvili. ನಂತರ ತನ್ನನ್ನು ಸ್ಟಾಲಿನ್ ಎಂದರೆ ಉಕ್ಕು ಎಂದು ಹೆಸರಿಸಿಕೊಂಡ ಜಾರ್ಜಿಯದ ಕಮ್ಯುನಿಸ್ಟ ಮುಖಂಡ, ಲೆನಿನ್‌ನ ಅನುಯಾಯಿ.

ಎರಡನೆಯ ಮಹಾಯುದ್ಧದಿಂದಾಗಿ ಮುರಿದುಹೋದ ಕಮ್ಯುನಿಸ್ಟ್ ಅಂತರ್‌ರಾಷ್ಟ್ರೀಯವನ್ನು ಪುನರ್‌ಸಂಘಟಿಸುವುದು ಕಮ್ಯುನಿಸ್ಟರಿಗೆ ಸಾಧ್ಯವಾಗಲಿಲ್ಲ. ಆದರೆ ಕಮ್ಯುನಿಸ್ಟ್ ಜಗತ್ತಿನಲ್ಲಿ ಗಮನಾರ್ಹ ಸೈದ್ಧಾಂತಿಕ ಹಾಗೂ ಸಂಘಟನಾತ್ಮಕ ಬೆಳವಣಿಗೆಗಳು ನಡೆದಿವೆ. ಒಂದೆಡೆಗೆ ಯುರೋ-ಕಮ್ಯುನಿಸ್ಟ್ ಆಂದೋಲನ ಮಾರ್ಕ್ಸ್‌ವಾದವನ್ನು ಲೆನಿನೀಕರಣದಿಂದ ಬಿಡುಗಡೆ ಮಾಡಿ ಮಾನವೀಯ ದೃಷ್ಟಿಕೋನದಿಂದ ಹೊಸದಾಗಿ ವ್ಯಾಖ್ಯಾನಿಸಲು ಪ್ರಯತ್ನಿಸುವುದರ ಜೊತೆಗೆ ಮಾರ್ಕ್ಸ್‌ನ ಯುವಾವಸ್ಥೆಯಲ್ಲಿಯ ಬರವಣಿಗೆಗಳು ಬೆಳಕು ಕಂಡು, ಮಾನವೀಯತೆಯ ಬಗೆಗಿನ ಅವನ ವಿಚಾರಗಳು ಪ್ರಾಮುಖ್ಯ ಪಡೆದು ಮಾರ್ಕ್ಸ್‌ನನ್ನು ಹೊಸಬೆಳಕಿನಲ್ಲಿ ಕಾಣುವ ಪ್ರಯತ್ನಗಳೂ ನಡೆದವು. ಇವೆಲ್ಲವುದರ ಪರಿಣಾಮವಾಗಿ ರಶಿಯ ಹಾಗೂ ಪೂರ್ವ ಯುರೋಪಿನ ದೇಶಗಳಲ್ಲಿ ಸ್ವಾತಂತ್ರದ ಬಗೆಗಿನ ತುಡಿತ ಹೆಚ್ಚಾಗಿ, ರಶಿಯ ಒಡೆದುಹೋಗಿ, ಪೂರ್ವ ಯುರೋಪಿನ ದೇಶಗಳಲ್ಲಿ ಮಾರ್ಕ್ಸವಾದ ಸೋತು, ಜನತಂತ್ರ ಸ್ಥಾಪಿತವಾಯಿತು.

ಎರಡನೆಯ ಮಹಾಯುದ್ಧದ ನಂತರ ಅಂತರ್‌ರಾಷ್ಟ್ರೀಯ ಸಂಘಟನೆಯನ್ನು ಕಟ್ಟುವುದು ಕಮ್ಯುನಿಸ್ಟರಿಗೆ ಸಾಧ್ಯವಾಗದಿದ್ದರೂ ಸಮಾಜವಾದಿಗಳು ಅಂತರ್‌ರಾಷ್ಟ್ರೀಯ ಸಂಘಟನೆಯೊಂದನ್ನು ಕಟ್ಟಿ ಬೆಳೆಸುವಲ್ಲಿ ಯಶಸ್ವಿಯಾಗಿದ್ದಾರೆ. ಈ ಸಂಘಟನೆಯಲ್ಲಿ ಇಂದು 170 ಸಮಾಜವಾದಿ ಹಾಗೂ ಕಾರ್ಮಿಕ ಪಕ್ಷಗಳು ಸದಸ್ಯತ್ವವನ್ನು ಹೊಂದಿವೆ. 55 ದೇಶಗಳಲ್ಲಿರುವ ಸದಸ್ಯ ಪಕ್ಷಗಳು ಸರಕಾರ ರಚಿಸಿವೆ. ಸಮಾಜವಾದಿ ಜಗತ್ತಿನಲ್ಲಿ ಕೂಡಾ ಗಮನಾರ್ಹ ಸೈದ್ಧಾಂತಿಕ ಬೆಳವಣಿಗೆಗಳು ಕಂಡುಬರುತ್ತಿವೆ. ಹಳೆಯ ಜಾಡುಗಳನ್ನು ಬಿಟ್ಟು ಸಮಾಜವಾದಿಗಳು ಬದಲಾದ ಪರಿಸ್ಥಿತಿಯಲ್ಲಿ ಸಮಾಜವಾದವನ್ನು ಪುನರ್‌ವ್ಯಾಖ್ಯಾನಿಸಲು ಪ್ರಯತ್ನಿಸುತ್ತಿದ್ದಾರೆ. ಸಮಾನತೆಯ ಆದರ್ಶಕ್ಕೆ ಅಗ್ರಪೂಜೆ ಸಲ್ಲಿಸಿ, ಒಂದು ದೇಶ ಎಷ್ಟರ ಮಟ್ಟಿಗೆ ಸಮಾಜವಾದಿ ಎಂದು ನಿರ್ಧರಿಸುವಲ್ಲಿ ಸಮಾನತೆಯನ್ನೇ ಅಳತೆಗೋಲಾಗಿ ಬಳಸುತ್ತಿದ್ದಾರೆ. ಉದಾಹರಣೆಗೆ ಜಾಗತೀಕರಣದ ಪ್ರಕ್ರಿಯೆಯನ್ನು ಸಂಕುಚಿತ ದೃಷ್ಟಿಕೋನದಿಂದ ನೋಡಿ ಸಾರಾಸಗಟಾಗಿ ಅದನ್ನು ಕಡೆಗಣಿಸದೇ, ಜಾಗತೀಕರಣದ ಸಂದರ್ಭದಲ್ಲಿಯೂ ಸಮಾನತೆಯ ಆದರ್ಶವನ್ನು ಹೇಗೆ ಸಾಕಾರಗೊಳಿಸಬೇಕೆನ್ನುವುದರ ಬಗ್ಗೆ ಯೋಚನೆ ಮಾಡುತ್ತಿದ್ದಾರೆ. ಸಮಾನತೆಯ ಆದರ್ಶವನ್ನು ಬರಿ ಒಂದು ದೇಶದ ಗಡಿಗಳೊಳಗೇ ಸಾಧಿಸುವುದು ಸಾಧುವಲ್ಲವೆಂದು ಹೇಳಿ ದೇಶ-ದೇಶಗಳ ನಡುವೆಯೂ ಸಮಾನತೆಯನ್ನು ಸಾಧಿಸಲು ಪ್ರಯತ್ನಿಸಬೇಕು ಎನ್ನುವುದರ ಮೂಲಕ ಸಮಾಜವಾದದ ನಿಜವಾದ ಅಂತರ್‌ರಾಷ್ಟ್ರೀಯ ಆಯಾಮವನ್ನು ಗುರುತಿಸಲು ಪ್ರಯತ್ನಿಸುತ್ತಿದ್ದಾರೆ.

'ಸಮಾಜವಾದ' ಇಂದು ಇಡೀ ಜಗತ್ತಿನಲ್ಲೇ ಅತ್ಯಂತ ಜನಪ್ರಿಯ ಶಬ್ದವಾಗಿದೆಯಷ್ಟೇ ಅಲ್ಲ, ಅತ್ಯಂತ ಜನಪ್ರಿಯ ಸಿದ್ಧಾಂತವೂ ಆಗಿದೆ. ಜಗತ್ತಿನ ಬಹುಸಂಖ್ಯೆ ರಾಷ್ಟ್ರಗಳು, ಅದರಲ್ಲೂ ಮೂರನೆಯ ಜಗತ್ತಿನ ಹಿಂದುಳಿದ ಬಡ ರಾಷ್ಟ್ರಗಳು ಸಮಾಜವಾದವನ್ನೇ ತಮ್ಮ ಗುರಿ ಎಂದು ಘೋಷಿಸುತ್ತಿವೆ. ಒಂದೆಡೆ ಬಂಡವಾಳವಾದಿ ರಾಷ್ಟ್ರಗಳು ಕ್ರಮೇಣ ಕಲ್ಯಾಣ ರಾಜ್ಯಗಳಾಗಿ ಪರಿವರ್ತನೆ ಹೊಂದುತ್ತಿವೆ. ಇನ್ನೊಂದೆಡೆಗೆ ಕಮ್ಯುನಿಸ್ಟ್ ರಾಷ್ಟ್ರಗಳಲ್ಲಿ ಜನತಂತ್ರ ಹಾಗೂ ಸ್ವಾತಂತ್ರ್ಯಗಳೆಡೆಗೆ ಒಲವು ಹೆಚ್ಚುತ್ತಿದೆ. ಸ್ಥೂಲವಾಗಿ ಹೇಳುವುದಾದರೆ ಬಂಡವಾಳವಾದಿ ಹಾಗೂ ಕಮ್ಯುನಿಸ್ಟ್ ರಾಷ್ಟ್ರಗಳು ನಿಧಾನವಾಗಿ ಆದರೆ ನಿಶ್ಚಿತವಾಗಿ ಜನತಾಂತ್ರಿಕ ಸಮಾಜವಾದದ ದಾರಿ ಸವೆಸುತ್ತಿವೆ. ಎರಡೂ ಬಣಗಳಿಗೆ ಸೇರಿರದ ಮೂರನೆಯ ಜಗತ್ತಿನ ಹಿಂದುಳಿದ ಬಡರಾಷ್ಟ್ರಗಳು ಸಮಾಜವಾದವನ್ನೇ ತಮ್ಮ ಗುರಿ

ಎಂದು ಹೇಳಿಕೊಳ್ಳುತ್ತಿರುವುದನ್ನು ಗಮನಿಸಿದರೆ ಭಾರತವೂ ಸೇರಿದಂತೆ ಇಡೀ ಜಗತ್ತೇ ಸಮಾಜವಾದಿ ವ್ಯವಸ್ಥೆಯತ್ತ ಮುನ್ನಡೆಯುತ್ತಿದೆ ಎಂದು ನಿರ್ವಿವಾದವಾಗಿ ಹೇಳಬಹುದು.

1932ರಲ್ಲಿ ಮಹಾತ್ಮಾ ಗಾಂಧಿ ಸವಿನಯ ಕಾನೂನುಭಂಗ ಚಳುವಳಿಗೆ ಆಹ್ವಾನ ನೀಡಿದಾಗ ಚಳುವಳಿಯಲ್ಲಿ ಭಾಗವಹಿಸಿದ ಜಯಪ್ರಕಾಶ ನಾರಾಯಣ[21], ಅಚ್ಯುತ ಪಟವರ್ಧನ[22], ಅಶೋಕ ಮೆಹತಾ[23], ಎಸ್.ಜಿ. ಗೋರೆ[24], ಮೀನೂ ಮಸಾನಿ[25], ಮೊದಲಾದವರನ್ನು ನಾಸಿಕ ಜೈಲಿನಲ್ಲಿ ಬಂಧನದಲ್ಲಿಡಲಾಗಿತ್ತು. ಸಮಾಜವಾದಿ ರಾಜಕೀಯ ಸಂಘಟನೆಯನ್ನು ಕಟ್ಟಬೇಕೆಂಬ ಕನಸು ಹುಟ್ಟಿದ್ದು ಈ ಜೈಲಿನಲ್ಲಿಯೇ. ನಾಸಿಕದ ಜೈಲಿನಲ್ಲಿದ್ದ ಸಮಾಜವಾದಿಗಳಲ್ಲಿ ಜಯಪ್ರಕಾಶ ನಾರಾಯಣರು ಮಾರ್ಕ್ಸ್‌ವಾದದಿಂದ ಪ್ರಭಾವಿತರಾಗಿದ್ದರು. ಮೀನೂ ಮಸಾನಿ ಹಾಗೂ ಅಶೋಕ ಮೆಹತಾ ಅವರು ಜನತಾಂತ್ರಿಕ ಸಮಾಜವಾದದಿಂದ ಪ್ರಭಾವಿತರಾಗಿದ್ದರು. ಅಚ್ಯುತ ಪಟವರ್ಧನ ಮೊದಲಾದವರು ಗಾಂಧೀವಾದಿಗಳಾಗಿದ್ದರು. ಭಾರತದ ಕಮ್ಯುನಿಸ್ಟರು ಕಮ್ಯುನಿಸ್ಟ ಅಂತರಾಷ್ಟ್ರೀಯದ ಆದೇಶದ ಮೇರೆಗೆ ಸ್ವಾತಂತ್ರ್ಯ ಆಂದೋಲನವನ್ನು ವಿರೋಧಿಸಿದ್ದರು. ಆದರೆ ದೇಶಪ್ರೇಮಿಗಳಾಗಿದ್ದ ಸಮಾಜವಾದಿಗಳು ಸ್ವಾತಂತ್ರ್ಯ ಆಂದೋಲನದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಆದುದರಿಂದ ಅಂದಿನ ಸಮಾಜವಾದಿಗಳಲ್ಲಿ ಮಾರ್ಕ್ಸ್‌ವಾದಿಗಳು ಪ್ರಬಲರಾಗಿದ್ದರೂ ಅವರು ಕಮ್ಯುನಿಸ್ಟ ಪಕ್ಷವನ್ನು ಸೇರಬಯಸದೇ ಕಾಂಗ್ರೆಸ್ಸಿನೊಳಗಡೆಯೇ ತಮ್ಮ ಸಂಘಟನೆಯನ್ನು ರಚಿಸಬಯಸಿದರು.

ಜೈಲಿನಿಂದ ಹೊರಗೆ ಬಂದ ನಂತರ ಈ ಮುಖಂಡರು ಹಾಗೂ ವಾರಾಣಸಿ ಜೈಲಿನಿಂದ ಹೊರಗೆ ಬಂದಿದ್ದ ಆಚಾರ್ಯ ನರೇಂದ್ರದೇವ[26], ಜರ್ಮನಿಯಿಂದ ಮರಳಿದ್ದ ರಾಮಮನೋಹರ ಲೋಹಿಯಾ[27] ಮೊದಲಾದವರು ಸೇರಿ ಕಾಂಗ್ರೆಸ್ ಸಮಾಜವಾದಿ ಪಕ್ಷವನ್ನು ಕಟ್ಟಿದರು. 1934ರ ಅಕ್ಟೋಬರ್ 21–22ರಂದು 13 ಪ್ರಾಂತ್ಯಗಳಿಂದ ಬಂದ

---

21. ಜಯಪ್ರಕಾಶ ನಾರಾಯಣ (1902–1979) : ಭಾರತದ ಸಮಾಜವಾದಿ ಮುಖಂಡ. ನಂತರ 'ಲೋಕನಾಯಕ'ನೆಂದು ಹೆಸರುವಾಸಿ.
22. ಅಚ್ಯುತ ಪಟವರ್ಧನ (1905–1992) : ಮಹಾರಾಷ್ಟ್ರದ ಮುಖಂಡ. ಗಾಂಧಿವಾದಿ. ಸ್ವಾತಂತ್ರ್ಯಯೋಧ. ಸ್ವಾತಂತ್ರ್ಯಪೂರ್ವ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸದಸ್ಯ.
23. ಅಶೋಕ ಮೆಹತಾ (1911–1984) : ಗುಜರಾತಿನ ಸಮಾಜವಾದಿ ಮುಖಂಡ. ಲೋಕಸಭಾ ಸದಸ್ಯ. ಯೋಜನಾ ಆಯೋಗದ ಉಪಾಧ್ಯಕ್ಷ. ಕೇಂದ್ರದಲ್ಲಿ ಯೋಜನಾ ಮಂತ್ರಿ.
24. ಎಸ್.ಜಿ.ಗೋರೆ. (1907–1993) :ಇವರನ್ನು ನಾನಾಸಾಹೇಬ ಗೋರೆ ಎಂದೂ ಕರೆಯಲಾಗುತ್ತದೆ. ಲೋಕಸಭೆ, ರಾಜ್ಯಸಭೆಗಳ ಸದಸ್ಯ. ನಂತರ ಇಂಗ್ಲೆಂಡಿನಲ್ಲಿ ಭಾರತದ ರಾಯಭಾರಿ.
25. ಮಿನೋಚೆರ್ ರುಸ್ತುಂ ಮಸಾನಿ. (1905–1988) : ಸಮಾಜವಾದಿ ಮುಖಂಡ. ಸಂವಿಧಾನ ಸಭೆಯ ಸದಸ್ಯ. ಮುಂಬಯಿಯ ಮೇಯರ್. ನಂತರ ಸ್ವತಂತ್ರ ಪಕ್ಷದ ಸಂಸ್ಥಾಪಕ ಸದಸ್ಯ. ಲೋಕಸಭಾ ಸದಸ್ಯ. ವಿರೋಧ ಪಕ್ಷದ ನಾಯಕ. ಬ್ರೆಜಿಲ್‌ನಲ್ಲಿ ಭಾರತದ ರಾಯಭಾರಿ.
26. ಆಚಾರ್ಯ ನರೇಂದ್ರ ದೇವ (1889–1956) : ಮೂಲ ಹೆಸರು ಅವಿನಾಶಿಲಾಲ. ಲಖನೌ ಹಾಗೂ ಬನಾರಸ ವಿಶ್ವವಿದ್ಯಾಲಯಗಳ ಉಪಕುಲಪತಿ. ಯುನೈಟೆಡ್ ಪ್ರಾವಿನ್ಸ್‌ನ ವಿಧಾನ ಸಭೆಯ ಹಾಗೂ ನಂತರ ರಾಜ್ಯ ಸಭೆಯ ಸದಸ್ಯ.
27. ರಾಮಮನೋಹರ ಲೋಹಿಯಾ (1910–1967) : ಲೋಕಸಭಾ ಸದಸ್ಯ.
28. ಡಾ. ಸಂಪೂರ್ಣಾನಂದ (1891–1969) : ಕಾಂಗ್ರೆಸ್ ಸಮಾಜವಾದಿ ಪಕ್ಷದ ಪ್ರಥಮ ಸಮ್ಮೇಳನದ ಅಧ್ಯಕ್ಷ. ನಂತರ ಉತ್ತರ ಪ್ರದೇಶ ರಾಜ್ಯದ ಮುಖ್ಯ ಮಂತ್ರಿ. ಭೂಸುಧಾರಣಾ ಕಾನೂನುಗಳ ಜಾರಿಕರ್ತ. ನಂತರ ರಾಜಸ್ಥಾನದ ರಾಜ್ಯಪಾಲ.

ಸುಮಾರು 150 ಸಮಾಜವಾದಿಗಳು ಮುಂಬಯಿಯ ರೆಡಿಮನಿ ಟೆರೆಸಿನಲ್ಲಿ ಡಾ। ಸಂಪೂರ್ಣಾನಂದರ[28] ಅಧ್ಯಕ್ಷತೆಯಲ್ಲಿ ಪ್ರಥಮ ಸಮ್ಮೇಳನವನ್ನು ನಡೆಸಿ, ಬ್ರಿಟಿಷರಿಂದ ಸಂಪೂರ್ಣ ಸ್ವಾತಂತ್ರ್ಯ ಪ್ರಾಪ್ತಿ ಹಾಗೂ ಸಮಾಜವಾದಿ ಸಮಾಜ ಸ್ಥಾಪನೆ ಪಕ್ಷದ ಗುರಿ ಎಂದು ಘೋಷಿಸಿದರು. ನಂತರ 1936ರಲ್ಲಿ ಮೇರಠದಲ್ಲಿ ಹಾಗೂ ಅದೇ ವರ್ಷದ ಕೊನೆಯಲ್ಲಿ ಫೈಜಪುರದಲ್ಲಿ ನಡೆದ ತನ್ನ ಸಮ್ಮೇಳನಗಳಲ್ಲಿ ಮಾರ್ಕ್ಸವಾದವನ್ನು ತಮ್ಮ ಸಿದ್ಧಾಂತವನ್ನಾಗಿ ಒಪ್ಪಿಕೊಂಡರು. ಆದರೂ ಕೂಡ ಪಕ್ಷದಲ್ಲಿ ನಾಲ್ಕು ವಿಚಾರಧಾರೆಗಳು ಕಂಡುಬರುತ್ತಿದ್ದವು. ಆಚಾರ್ಯ ನರೇಂದ್ರದೇವ, ಜಯಪ್ರಕಾಶ ನಾರಾಯಣರ ಮಾರ್ಕ್ಸವಾದ, ಮೀನೂ ಮಸಾನಿ ಹಾಗೂ ಅಶೋಕ ಮೆಹತಾ ಅವರ ಜನತಾಂತ್ರಿಕ ಸಮಾಜವಾದ, ಅಚ್ಯುತ ಪಟವರ್ಧನರ ಗಾಂಧೀವಾದ ಹಾಗೂ ರಾಮಮನೋಹರ ಲೋಹಿಯಾ ಅವರ ಅನಧಿಪತ್ಯವಾದ.

ಎರಡನೆಯ ಮಹಾಯುದ್ಧ ಪ್ರಾರಂಭವಾದಾಗ ಬ್ರಿಟಿಷರನ್ನು ಮುಜುಗರಕ್ಕೊಳಪಡಿಸಲು ನಿರಾಕರಿಸಿದ ಗಾಂಧಿ ವೈಯಕ್ತಿಕ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಇದನ್ನು ಜಯಪ್ರಕಾಶ ನಾರಾಯಣರು ವಿರೋಧಿಸಿ ಬ್ರಿಟೀಷರ ವಿರುದ್ಧ ಕೊನೆಯ ಸಮರ ಸಾರಲು ಇದು ಅತ್ಯಂತ ಸೂಕ್ತ ಸಮಯ ಎಂದು ವಾದಿಸಿದರು. ಆದುದರಿಂದ 1942ರಲ್ಲಿ ಕಾಂಗ್ರೆಸ್ 'ಭಾರತ ಬಿಟ್ಟು ತೊಲಗಿ' ಎಂಬ ಕರೆ ನೀಡಿದುದರ ಶ್ರೇಯ ಸಮಾಜವಾದಿಗಳಿಗೇ ಸೇರಬೇಕು. ಹೀಗಾಗಿ ಸಮಾಜವಾದಿಗಳು 'ಭಾರತ ಬಿಟ್ಟು ತೊಲಗಿ' ಹೋರಾಟದಲ್ಲಿ ಸಂಪೂರ್ಣವಾಗಿ ತೊಡಗಿಕೊಂಡರು. ಈ ಆಂದೋಲನದ ಪ್ರಾರಂಭದಲ್ಲಿಯೇ ಬ್ರಿಟಿಷರು ಸರಿಸುಮಾರು ಎಲ್ಲಾ ಕಾಂಗ್ರೆಸ್ ಮುಖಂಡರನ್ನು ಬಂಧಿಸಿದ್ದರಿಂದ, ಭೂಗತ ಚಳುವಳಿ ಅಹಿಂಸೆಯೇ ಎಂಬ ಗಾಂಧಿಯವರ ವಿಚಾರವನ್ನು ಒಪ್ಪಿಕೊಳ್ಳದ ಸಮಾಜವಾದಿಗಳು ಭೂಗತವಾಗಿಯೇ ಈ ಹೋರಾಟವನ್ನು ನಡೆಸಿದರು. ತಾವಿದ್ದ ಹಜಾರಿಬಾಗ್ ಜೈಲಿನಿಂದ ತಪ್ಪಿಸಿಕೊಂಡು ಜಯಪ್ರಕಾಶ ನಾರಾಯಣರು ಭಾರತದ ಈ ಕೊನೆಯ ಹೋರಾಟಕ್ಕೆ ನಾಯಕತ್ವ ನೀಡಿದರು. ಆದುದರಿಂದ ಈ ಹೋರಾಟದ ಸಂಪೂರ್ಣ ಶ್ರೇಯವೂ ಸಮಾಜವಾದಿಗಳಿಗೇ ಸೇರಬೇಕು.

ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟ 1947 ಸಮಾಜವಾದಿಗಳಿಗೆ ಸಂಘಟನಾತ್ಮಕವಾಗಿಯೂ ಸೈದ್ಧಾಂತಿಕವಾಗಿಯೂ ಒಂದು ಪ್ರಮುಖ ಸ್ಥಿತ್ಯಂತರದ ವರ್ಷವಾಯಿತು. 'ಭಾರತದ ರಾಷ್ಟ್ರೀಯ ಕಾಂಗ್ರೆಸ್' ಒಂದು ರಾಜಕೀಯ ಪಕ್ಷವಾಗಿರಲಿಲ್ಲ, ಅದೊಂದು ವೇದಿಕೆಯಾಗಿತ್ತು. ಆದುದರಿಂದಲೇ ಕಾಂಗ್ರೆಸ್ಸಿನೊಳಗಡೆಯೇ 'ಕಾಂಗ್ರೆಸ್ ಸಮಾಜವಾದಿ ಪಕ್ಷ'ದ ಸ್ಥಾಪನೆ ಸಾಧ್ಯವಾಗಿತ್ತು. ಆದರೆ 1947ರ ಪ್ರಾರಂಭದಲ್ಲಿ ಸ್ವಾತಂತ್ರ್ಯ ಕೈಗೆಟಕುವ ಹಾಗೆ ಆದಾಗ, ಕಾಂಗ್ರೆಸ್ಸನ್ನು ವಿಸರ್ಜಿಸಬೇಕೆಂಬ ಮಹಾತ್ಮಾ ಗಾಂಧಿಯವರ ಅಭಿಪ್ರಾಯಕ್ಕೆ ವಿಪರೀತವಾಗಿ, ಕಾಂಗ್ರೆಸ್ ಒಂದು ರಾಜಕೀಯ ಪಕ್ಷವಾಗಿ ಪರಿವರ್ತನೆ ಹೊಂದಿ, ಪ್ರತ್ಯೇಕ ಸದಸ್ಯತ್ವ, ಸಂವಿಧಾನ ಹಾಗೂ ಕಾರ್ಯಕ್ರಮಗಳಿರುವ ಬೇರೆ ಯಾವುದೇ ಪಕ್ಷದ ಸದಸ್ಯರು ಕಾಂಗ್ರೆಸ್ಸಿನ ಸದಸ್ಯರಾಗಲಾಗದು ಎಂಬ ನಿಯಮವನ್ನು ಅಂಗೀಕರಿಸಿತು. ಇದರಿಂದಾಗಿ ಕಾಂಗ್ರೆಸ್ ಸಮಾಜವಾದಿ ಪಕ್ಷವನ್ನು ವಿಸರ್ಜಿಸಿ ಕಾಂಗ್ರೆಸ್ ಪಕ್ಷದಲ್ಲಿ ಮುಂದುವರಿಯಬೇಕೇ ಅಥವಾ ಕಾಂಗ್ರೆಸ್ ಪಕ್ಷವನ್ನು ತ್ಯಜಿಸಿ ಸಮಾಜವಾದಿ ಪಕ್ಷದ ರಾಜಕೀಯ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕೇ ಎಂಬ ಪ್ರಶ್ನೆ ಬಂದಾಗ, ಸಮಾಜವಾದಿಗಳು ಕಾಂಗ್ರೆಸ್ಸನ್ನು ತ್ಯಜಿಸಿ

ತಮ್ಮ ಪ್ರತ್ಯೇಕ ರಾಜಕೀಯ ಅಸ್ತಿತ್ವವನ್ನು ಉಳಿಸಿಕೊಳ್ಳಲು ನಿರ್ಧರಿಸಿದರು. ಹೀಗೆ ಭಾರತ ಬ್ರಿಟಿಷರಿಂದ ಪಡೆದ ಸ್ವಾತಂತ್ರ್ಯ, ಸಮಾಜವಾದಿಗಳಿಗೆ ಕಾಂಗ್ರೆಸ್ ಪಕ್ಷದಿಂದಲೂ ಸ್ವಾತಂತ್ರ್ಯವನ್ನು ತಂದುಕೊಟ್ಟಿತು.

ಒಂದೆಡೆ ಮಾರ್ಕ್ಸ್‌ವಾದದಿಂದ ಸೈದ್ಧಾಂತಿಕವಾಗಿಯೂ, ಸಂಘಟನಾತ್ಮಕವಾಗಿಯೂ ಭ್ರಮನಿರಸನಗೊಳ್ಳುತ್ತ ಹೋಗುತ್ತಿದ್ದ ಸಮಾಜವಾದಿಗಳು, ಇನ್ನೊಂದೆಡೆಗೆ ಸೈದ್ಧಾಂತಿಕ ನೆಲೆಯಲ್ಲಿ ಮಹಾತ್ಮಾ ಗಾಂಧಿಯವರ ಅಹಿಂಸಾತ್ಮಕ ಸತ್ಯಾಗ್ರಹ ಹಾಗೂ ಗುರಿ ಮತ್ತು ದಾರಿಗಳ ಸಿದ್ಧಾಂತಗಳಿಂದ ಪ್ರಭಾವಿತರಾಗುತ್ತ ಹೋದರು. ಭಾರತದ ಜನಸಂಖ್ಯೆಯಲ್ಲಿ ಪ್ರತಿಶತ 80ರಷ್ಟು ಜನ ಹಳ್ಳಿಗಳಲ್ಲಿ ವ್ಯವಸಾಯವನ್ನು ನಂಬಿ ಬದುಕುವ ರೈತರಾಗಿದ್ದರು. ಮಾರ್ಕ್ಸ್‌ನ ಪ್ರಕಾರ ಇವರು ಪೆಟಿ ಬೂರ್ಷ್ವಾ ಆಗಿದ್ದುದರಿಂದ ಭಾರತದಲ್ಲಿ ಮಾರ್ಕ್ಸ್ ಹೇಳಿದ ಕ್ರಾಂತಿ ಸಾಧ್ಯವಿಲ್ಲ ಎಂಬುದನ್ನು ಸಮಾಜವಾದಿಗಳಲ್ಲಿದ್ದ ಮಾರ್ಕ್ಸ್‌ವಾದಿಗಳು ಮನಗಂಡರು. ಜೊತೆಗೆ ಭಾರತಕ್ಕೆ ವಿಶಿಷ್ಟವಾಗಿದ್ದ ಜಾತಿ ಆಧಾರಿತ ಸಾಮಾಜಿಕ ಅಸಮಾನತೆಗೆ ಮಾರ್ಕ್ಸ್‌ನ ಸಿದ್ಧಾಂತದಲ್ಲಿ ಪರಿಹಾರವಿಲ್ಲದಿರುವುದನ್ನೂ ಅವರು ಮನಗಂಡರು. ಜನತಾಂತ್ರಿಕ ಸಂಸ್ಥೆಗಳು ಮತ್ತು ಪರಂಪರೆಗಳು ದೃಢವಾಗಿ ನೆಲೆ ನಿಂತಿಲ್ಲದ ದೇಶಗಳಿಗಾಗಿ ಮಾತ್ರ ಮಾರ್ಕ್ಸ್ ಕಾರ್ಮಿಕರ ಸರ್ವಾಧಿಕಾರದ ಮಾತನ್ನು ಹೇಳಿದ್ದ ಎಂದು ಅರಿತುಕೊಂಡ ಈ ಮಾರ್ಕ್ಸ್‌ವಾದಿಗಳು ರಾಜ್ಯವ್ಯವಸ್ಥೆಯನ್ನು ಜನತಂತ್ರದ ಮೂಲಕ ಸಮಾಜವಾದ ತರಲು ಪಳಗಿಸಬಹುದು ಎಂಬ ಜನತಾಂತ್ರಿಕ ಸಮಾಜವಾದಿಗಳ ವಾದವನ್ನು ಒಪ್ಪಿಕೊಂಡರು.

ಬ್ರಿಟಿಷ್ ಸರಕಾರ ಕಮ್ಯುನಿಸ್ಟ್ ಪಕ್ಷವನ್ನು ನಿಷೇಧಿಸಿದ್ದರಿಂದ ಕಾಂಗ್ರೆಸ್ ಸಮಾಜವಾದಿ ಪಕ್ಷವನ್ನು ಸೇರಿಕೊಂಡಿದ್ದ ಕಮ್ಯುನಿಸ್ಟರು ಕಾಂಗ್ರೆಸ್ ಸಮಾಜವಾದಿ ಪಕ್ಷವನ್ನೇ ಕಬಳಿಸಲು ಮಾಡಿದ ಪ್ರಯತ್ನವನ್ನು ಬಯಲಿಗೆಳೆದ ಮೀನೂ ಮಸಾನಿ, 1939ರಲ್ಲಿ ಲಾಹೋರಿನಲ್ಲಿ ನಡೆದ ಸಮ್ಮೇಳನದಲ್ಲಿ, ತಮ್ಮ ಅಧ್ಯಕ್ಷ ಭಾಷಣದಲ್ಲಿ, ರಶಿಯದಲ್ಲಿ ಮಾರ್ಕ್ಸ್‌ನ ಹೆಸರಿನಲ್ಲಿ ಸ್ಥಾಪಿಸಲಾಗಿದ್ದ ಸರ್ವಾಧಿಕಾರಿ ವ್ಯವಸ್ಥೆಯನ್ನು ಖಂಡಿಸಿ, ಸಮಾಜವಾದವನ್ನು ಸ್ಥಾಪಿಸಲು ಜನತಾಂತ್ರಿಕ ಹಾಗೂ ಶುದ್ಧ ಸಾಧನಗಳನ್ನು ಬಳಸಬೇಕೆಂದು ಕರೆ ನೀಡಿದರು.

ಮಹಾತ್ಮಾ ಗಾಂಧಿಯವರ ಅಹಿಂಸಾತ್ಮಕ ಸತ್ಯಾಗ್ರಹ ಹಾಗೂ ಗುರಿ ಮತ್ತು ದಾರಿಗಳ ಸಿದ್ಧಾಂತಗಳನ್ನು ಒಪ್ಪಿಕೊಳ್ಳುವಲ್ಲಿಯೂ ಸಮಾಜವಾದಿಗಳಿಗೆ ಯಾವ ಸೈದ್ಧಾಂತಿಕ ಮುಜುಗರವೂ ಆಗಬೇಕಿರಲಿಲ್ಲ. ಪ್ರೂಧೋಂ ಹಿಂಸೆಯನ್ನು ನಕಾರಾತ್ಮಕವಾಗಿ ಪರಿಗ್ರಹಿಸಿ ಅದನ್ನು ತ್ಯಜಿಸಬೇಕು ಎಂದು ಹೇಳಿದ್ದ. ಮಹಾತ್ಮಾ ಗಾಂಧಿ ಇದನ್ನೇ ಸಕಾರಾತ್ಮಕವಾಗಿ ಪರಿಗ್ರಹಿಸಿ ಅಹಿಂಸೆಯನ್ನು ಒಪ್ಪಿಕೊಳ್ಳಬೇಕು ಎಂದು ಹೇಳಿದ್ದರು. ಸಮಾಜವಾದಿಗಳು, ವಿಶೇಷವಾಗಿ ಅವರಲ್ಲಿನ ಮಾರ್ಕ್ಸ್‌ವಾದಿಗಳು ಜನತಂತ್ರವನ್ನು ಒಪ್ಪಿಕೊಂಡಿದ್ದರಿಂದ, ಸಮಾಜದ ಜನತಾಂತ್ರಿಕ ಪರಿವರ್ತನೆಯಲ್ಲಿ ಹಿಂಸೆಗೆ ಯಾವ ಸ್ಥಾನವೂ ಇರಬೇಕಿರಲಿಲ್ಲ. ಸಮಾಜವಾದ ಗುರಿ ಹಾಗೂ ಜನತಂತ್ರ ದಾರಿ ಎನ್ನುವುದಾದರೆ, ಗುರಿ ಹಾಗೂ ದಾರಿಗಳ ಶುದ್ಧತೆಯ ಸಿದ್ಧಾಂತವೂ ಅದರಲ್ಲೇ ಅಡಕವಾಗಿತ್ತು. ಈ ಎಲ್ಲ ಹಿನ್ನೆಲೆಯಲ್ಲಿ 1947ರಲ್ಲಿ ಕಾನಪುರದಲ್ಲಿ ನಡೆದ ಸಮ್ಮೇಳನದಲ್ಲಿ ಸಮಾಜವಾದಿ ಪಕ್ಷ ಮಾರ್ಕ್ಸ್‌ವಾದವನ್ನು ತ್ಯಜಿಸಿ ಸಂಪೂರ್ಣವಾಗಿ ಜನತಾಂತ್ರಿಕ ಸಮಾಜವಾದವನ್ನು ತನ್ನ ಸಿದ್ಧಾಂತವನ್ನಾಗಿ ಘೋಷಿಸಿತು.

ಕಾಂಗ್ರೆಸ್ಸಿನೊಂದಿಗೆ ಸಂಘಟನಾತ್ಮಕವಾಗಿ ಸಂಬಂಧವನ್ನು ಕಳಚಿಕೊಂಡಿದ್ದರೂ, ಸೈದ್ಧಾಂತಿಕವಾಗಿ ಸಮಾಜವಾದಿಗಳು ಹಾಗೂ ಕಾಂಗ್ರೆಸ್ ಹತ್ತಿರವಾಗಿಯೇ ಇದ್ದವು. ಸ್ವಾತಂತ್ರ್ಯಪೂರ್ವದಲ್ಲಿಯೇ ಕಾಂಗ್ರೆಸ್ಸು ಹಲವಾರು ಸಮಾಜವಾದಿ ಕಾರ್ಯಕ್ರಮಗಳನ್ನು

ಒಪ್ಪಿಕೊಂಡಿತ್ತು. 1931ರಲ್ಲಿ ಮೂಲ ಉದ್ಯೋಗಗಳ ರಾಷ್ಟ್ರೀಕರಣವಾಗಬೇಕೆಂದೂ, 1936ರಲ್ಲಿ 'ರೈತರಿಗೆ, ಕಾರ್ಮಿಕರಿಗೆ ಸಂಘಟನೆಗಳನ್ನು ಕಟ್ಟಿಕೊಳ್ಳುವ ಹಾಗೂ ಮುಷ್ಕರ ಹೂಡುವ ಹಕ್ಕು, ರೈತಕೂಲಿಕಾರರಿಗೆ ನಿಗದಿತ ಸಂಬಳ, ಗೇಣಿದಾರರಿಗೆ ರಕ್ಷಣೆ, ಅನ್ಯಾಯವಾಗಿ ಹೇರಲಾದ ಸುಂಕಗಳ ರದ್ದತಿ, ಕಡಿಮೆ ದರದಲ್ಲಿ ಸಾಲ, ಗೇಣಿ ಮತ್ತು ತೆರಿಗೆಗಳಲ್ಲಿ ಕಡಿತ' ಮುಂತಾದ ಕಾರ್ಯಕ್ರಮಗಳನ್ನು ತಾನು ಅಧಿಕಾರಕ್ಕೆ ಬಂದರೆ ಜಾರಿಗೊಳಿಸುವುದಾಗಿ ಹೇಳಿತ್ತು. 1938ರಲ್ಲಿ ಜವಾಹರಲಾಲ ನೆಹರೂ ಅವರ ಅಧ್ಯಕ್ಷತೆಯಲ್ಲಿ ಸ್ವತಂತ್ರ ಭಾರತದ ಆರ್ಥಿಕ ಕಾರ್ಯಕ್ರಮಗಳನ್ನು ರೂಪಿಸಲು ಒಂದು ರಾಷ್ಟ್ರೀಯ ಯೋಜನಾ ಸಮಿತಿಯನ್ನು ರಚಿಸಿತ್ತು. ಸ್ವಾತಂತ್ರ್ಯಾನಂತರ ಕಾಂಗ್ರೆಸ್ಸು ಸಮಾಜವಾದದೆಡೆಗಿನ ಈ ಪ್ರಯಾಣವನ್ನು ನಿಧಾನವಾಗಿ ಮುಂದುವರೆಸಿತ್ತು. ವಿಮಾನಗಳನ್ನು ತಯಾರಿಸುವ ಬೆಂಗಳೂರಿನ ಕಾರಖಾನೆಯನ್ನೂ, ಹಡಗುಗಳನ್ನು ತಯಾರಿಸುವ ವಿಶಾಖಪಟ್ಟಣದ ಕಾರಖಾನೆಯನ್ನೂ, ರಿಜರ್ವ ಬ್ಯಾಂಕನ್ನೂ, ಇಂಪೀರಿಯಲ್ ಬ್ಯಾಂಕನ್ನೂ, ಜೀವವಿಮಾ ನಿಗಮವನ್ನೂ ರಾಷ್ಟ್ರೀಕರಿಸಿತು. ಜಮೀನುದಾರಿಯನ್ನು ರದ್ದುಗೊಳಿಸಲು, ಗೇಣಿದಾರರಿಗೆ ರಕ್ಷಣೆ ನೀಡಲು ಕಾನೂನುಗಳನ್ನು ರಚಿಸಿತು. ಇವುಗಳಿಗೆ ನ್ಯಾಯಾಂಗ ಅಡ್ಡಿ ಪಡಿಸಿದಾಗ ಸಂವಿಧಾನವನ್ನೇ ತಿದ್ದುಪಡಿ ಮಾಡಿತು. ಯೋಜನಾಬದ್ಧ ಆರ್ಥಿಕ ಅಭಿವೃದ್ಧಿಗಾಗಿ ರಾಷ್ಟ್ರೀಯ ಯೋಜನಾ ಆಯೋಗವನ್ನು ರಚಿಸಿ 1951 ರಲ್ಲಿಯೇ ಪ್ರಥಮ ಪಂಚ ವಾರ್ಷಿಕ ಯೋಜನೆಯನ್ನು ಪ್ರಾರಂಭಿಸಿತು.

ಮೊದಲ ಸಾರ್ವತ್ರಿಕ ಚುನಾವಣೆಯಲ್ಲಿ ಅತ್ಯಂತ ದೊಡ್ಡ ವಿರೋಧಿ ಪಕ್ಷವಾಗಿ ಬೆಳೆಯುವ ಕನಸು ಕಂಡಿದ್ದ ಸಮಾಜವಾದಿಗಳಿಗೆ ಚುನಾವಣಾ ಪರಿಣಾಮದಿಂದಾಗಿ ಭ್ರಮನಿರಸನವಾಯಿತು. ದೊಡ್ಡ ವಿರೋಧಿ ಪಕ್ಷವನ್ನು ಕಟ್ಟಲು ಅವರು ಗಾಂಧಿವಾದಿಗಳಾಗಿದ್ದ ಆಚಾರ್ಯ ಕೃಪಲಾನಿ[29]ಯವರ ಕಿಸಾನ ಮಜದೂರ್ ಪ್ರಜಾ ಪಾರ್ಟಿ ಹಾಗೂ ಸಮಾಜವಾದದ ಪರವಾಗಿದ್ದ ನೇತಾಜಿ ಸುಭಾಷ್ ಚಂದ್ರ ಬೋಸ[30]ರ ಫಾರ್ವರ್ಡ ಬ್ಲಾಕ್‌ಗಳ ಜೊತೆಗೆ ಒಟ್ಟು ಸೇರಿ ಪ್ರಜಾಸಮಾಜವಾದಿ ಪಕ್ಷ ಕಟ್ಟಿದರು. ಆದರೆ ಅಂಬೇಡ್ಕರ್ ಅವರ ಪಕ್ಷದ ಜೊತೆಗೂ ಸೇರುವ ಅವರ ಆಸೆ ಕಾರಣಾಂತರಗಳಿಂದ ಈಡೇರಲಿಲ್ಲ. ಈ ಹಿನ್ನೆಲೆಯಲ್ಲಿ ಹಲವು ಸಮಾಜವಾದಿಗಳು ಕಾಂಗ್ರೆಸ್ಸಿನೊಂದಿಗೆ ಸಹಕರಿಸಬೇಕೆಂದು ವಾದಿಸಿದರು. 'ಹಿಂದುಳಿದ ಅರ್ಥವ್ಯವಸ್ಥೆಗಳ ರಾಜಕೀಯ ಒತ್ತಡಗಳು' ಎಂಬ ಸಿದ್ಧಾಂತವನ್ನು ಮುಂದಿಟ್ಟ ಅಶೋಕ ಮೆಹತಾ, ಹಿಂದುಳಿದ ದೇಶಗಳಲ್ಲಿ ಪ್ರಗತಿ ಸಾಧಿಸಬೇಕಾದರೆ ಧೃಢ ಆರ್ಥಿಕ ನಿರ್ಧಾರಗಳನ್ನು ಕೈಗೊಳ್ಳಬೇಕಾಗುತ್ತದೆ ಹಾಗೂ ಹೀಗೆ ಮಾಡಬೇಕಾದರೆ ವಿರೋಧವನ್ನು ಅಂಚಿಗೆ ತಳ್ಳಿ ಸರಕಾರವನ್ನು ಬಲಪಡಿಸಬೇಕಾಗುತ್ತದೆ ಎಂದು ವಾದಿಸಿದರು. ಪ್ರಧಾನ ಮಂತ್ರಿಗಳಾಗಿದ್ದ ನೆಹರೂ, ಕಾಂಗ್ರೆಸ್ ಹಾಗೂ ಪ್ರಜಾಸಮಾಜವಾದಿ ಪಕ್ಷಗಳೆರಡೂ ಸಂಘಟನೆಯ ಹಾಗೂ ಸರಕಾರದ ಎರಡೂ ಸ್ತರಗಳಲ್ಲಿ ಪರಸ್ಪರ ಸಹಕರಿಸಬೇಕು ಎಂದು ಕರೆಯಿತ್ತರು. ಆದರೆ ಸಮಾಜವಾದಿಗಳು ಕಾರ್ಯಕ್ರಮಗಳ ಸಮಯಬದ್ಧ ಅನುಷ್ಠಾನದ ಬಗ್ಗೆ ಒತ್ತಾಯ ಮಾಡಿದಾಗ ಅದು ಕಾರ್ಯಸಾಧ್ಯವಲ್ಲವೆಂದು ಹಿಂಜರಿದರು. ಇದಕ್ಕೆ

---

29. ಆಚಾರ್ಯ ಕೃಪಲಾನಿ (1888–1982) : ಗಾಂಧಿವಾದಿ, ಕಾಂಗ್ರೆಸ್ ಅಧ್ಯಕ್ಷ, ಲೋಕಸಭಾ ಸದಸ್ಯ, ಪ್ರಜಾ ಸಮಾಜವಾದಿ ಪಕ್ಷದ ಅಧ್ಯಕ್ಷ.
30. ಸುಭಾಷ ಚಂದ್ರ ಬೋಸ (1897–1945?) : ಸ್ವಾತಂತ್ರ್ಯ ಯೋಧ, ಕಾಂಗ್ರೆಸ್ ಅಧ್ಯಕ್ಷ, ನಂತರ ಆಝಾದ ಹಿಂದ ಸೈನ್ಯದ ನಾಯಕ.

ಪ್ರತಿಯಾಗಿ ಹಲವರು ಕಾಂಗ್ರೆಸ್ಸನ್ನು ಸಂಪೂರ್ಣವಾಗಿ ವಿರೋಧಿಸಬೇಕೆಂದು ವಾದಿಸಿದರು. ಈ ಮಧ್ಯೆ ಪಕ್ಷ ಒಡೆದು ಹೋಗಿ ಒಡಕು-ವಿಲೀನಗಳ ಪ್ರಕ್ರಿಯೆ ಪ್ರಾರಂಭವಾಯಿತು. ಕಾಂಗ್ರೆಸ್ ಬಗ್ಗೆ ಸಹಾನುಭೂತಿ ಇದ್ದ ಅಶೋಕ ಮೆಹತಾ ಮೊದಲಾದವರು ಕಾಂಗ್ರೆಸ್ ಸೇರಿದರು. ಕಾಂಗ್ರೆಸ್ಸನ್ನು ಸಂಪೂರ್ಣವಾಗಿ ವಿರೋಧಿಸ ಹೊರಟವರು ಕೋಮುವಾದಿ ಪಕ್ಷಗಳೊಡನೆ ಸೇರಿಕೊಂಡರು.

ಸ್ವಾತಂತ್ರ್ಯ ಹಾಗೂ ಸಂಘಟನೆಗಳ ನಡುವೆ ಒಂದು ಸೈದ್ಧಾಂತಿಕ ವೈರುಧ್ಯವಿದೆ. ಸ್ವಾತಂತ್ರ್ಯ ಹೆಚ್ಚಿದಷ್ಟೂ ಸಂಘಟನೆ ಬಲಹೀನವಾಗಿರುತ್ತದೆ. ಸಂಘಟನೆ ಬಲಶಾಲಿಯಾದಷ್ಟೂ ಸ್ವಾತಂತ್ರ್ಯ ಮೊಟಕುಗೊಳ್ಳುತ್ತದೆ. ಇವೆರಡರ ನಡುವೆ ಸಮಾನತೆಯ ಸಮನ್ವಯವನ್ನು ಸಮಾಜವಾದ ಸಾಧಿಸಬಯಸುತ್ತದೆ. ಆದರೆ ಒಂದೆಡೆ ಕಮ್ಯುನಿಸ್ಟರು ಸಂಘಟನೆಗೆ ಮಹತ್ವ ಕೊಟ್ಟು ವೈಯಕ್ತಿಕ ಸ್ವಾತಂತ್ರ್ಯವನ್ನು ಮೊಟಕುಗೊಳಿಸುತ್ತಾರೆ. ಇನ್ನೊಂದೆಡೆಗೆ 'ವ್ಯವಸ್ಥಾ ಅವಿಧೇಯತೆ'ಯನ್ನೇ ತಮ್ಮ ಕಾರ್ಯಾತ್ಮಕ ಸ್ಥಿರಭಿತ್ತಿಯನ್ನಾಗಿ ಮಾಡಿಕೊಂಡ ಅನಧಿಪತ್ಯವಾದಿಗಳು ವೈಯಕ್ತಿಕ ಸ್ವಾತಂತ್ರ್ಯಕ್ಕೇ ಮಹತ್ವ ಕೊಟ್ಟು 'ವ್ಯಕ್ತಿ ವಿಶಿಷ್ಟ ಸಿದ್ಧಾಂತಿ'ಗಳಾಗಿ ಸಂಘಟನೆಯನ್ನು ಛಿದ್ರಗೊಳಿಸುತ್ತಾರೆ. ಭಾರತದ ಸಂದರ್ಭದಲ್ಲಿ ಕಮ್ಯುನಿಸ್ಟರು ತಮ್ಮನ್ನು ಕಮ್ಯುನಿಸ್ಟರೆಂದು ಗುರುತಿಸಿಕೊಂಡಿದ್ದರಿಂದ ಸಮಾಜವಾದಿಗಳು ಅವರನ್ನು ದೂರ ಮಾಡುವುದು ಸಾಧ್ಯವಾಯಿತು. ಆದರೆ ಸಮಾಜವಾದಿ ಪಕ್ಷದಲ್ಲಿದ್ದ ಅನಧಿಪತ್ಯವಾದಿಗಳನ್ನು ಅನಧಿಪತ್ಯವಾದಿಗಳು ಎಂದು ಗುರುತಿಸಲು ಸಮಾಜವಾದಿಗಳಿಗೆ ಸಾಧ್ಯವಾಗದೇ ಹೋಗಿದ್ದು ಹಾಗೂ ಪಕ್ಷದಲ್ಲಿದ್ದ ಅನಧಿಪತ್ಯವಾದಿಗಳು ತಮ್ಮನ್ನು, ಅಷ್ಟೇ ಅಲ್ಲ, ತಮ್ಮನ್ನೇ, ಸಮಾಜವಾದಿಗಳು ಎಂಬ ಭ್ರಮೆಯಲ್ಲಿಯೇ ಉಳಿದುಕೊಂಡಿದ್ದು ಈ ಸಮಾಜವಾದಿ ಸಂಘಟನೆಯಲ್ಲಿನ ಒಡಕು-ವಿಲೀನಗಳ ಪ್ರಕ್ರಿಯೆಗೆ ಕಾರಣವಾಯಿತು. 1954ರಲ್ಲಿ ಪರಸ್ಪರ ದೂರವಾಗಿದ್ದ ಸಮಾಜವಾದಿಗಳು ಮತ್ತು ಅನಧಿಪತ್ಯವಾದಿಗಳು 1964ರಲ್ಲಿ ಮತ್ತೇ ಒಂದುಗೂಡಿ, ನಾಲ್ಕು ತಿಂಗಳೊಳಗೆ ಮತ್ತೇ ದೂರವಾಗಿ, 1971ರಲ್ಲಿ ಮತ್ತೇ ಒಂದುಗೂಡಿದರು. 1977ರಲ್ಲಿ ಜಯಪ್ರಕಾಶ ನಾರಾಯಣರ ಧುರೀಣತ್ವದಿಂದ ರಚಿತವಾದ ಜನತಾ ಪಕ್ಷದಲ್ಲಿ ಸೇರುವ ಮೂಲಕ ಸಮಾಜವಾದಿಗಳು ಹಾಗೂ ಅನಧಿಪತ್ಯವಾದಿಗಳ ಈ ಒಡಕು-ವಿಲೀನಗಳ ಪ್ರಕ್ರಿಯೆ ಒಂದು ರೀತಿ ಕೊನೆಗೊಂಡಿತು. ಈ ಪ್ರಕ್ರಿಯೆಯ ಮಧ್ಯೆ ಹಾಗೂ ನಂತರ ಕೂಡ ಅನಧಿಪತ್ಯವಾದಿಗಳು ಒಂದಾಗಿ ಉಳಿದುಕೊಳ್ಳುವುದು ಸಾಧ್ಯವಾಗದೇ ತಮ್ಮ ಸ್ವಭಾವದ ಪರಿಣಾಮವಾಗಿ ಹಲವು ಹನ್ನೆರಡು ಗುಂಪುಗಳಲ್ಲಿ ಹರಿದು ಹಂಚಿಹೋದರು.

ಹೀಗೆ, ಒಂದೆಡೆ ಕಾಂಗ್ರೆಸ್ಸು ಹೆಚ್ಚು ಹೆಚ್ಚು ಸಮಾಜವಾದಿ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತ ಹೋದ ಹಾಗೆ, ಇನ್ನೊಂದೆಡೆಗೆ ಕಮ್ಯುನಿಸ್ಟರು ಹೆಚ್ಚು ಹೆಚ್ಚು ಜನತಾಂತ್ರಿಕ ವಿಧಾನಗಳನ್ನು ಬಳಸಿ ಅಧಿಕಾರವನ್ನು ಪಡೆಯಲು ಪ್ರಯತ್ನಿಸುತ್ತ ಹೋದ ಹಾಗೆ, ಈ ಪ್ರಕ್ರಿಯೆಗಳ ಪರಿಣಾಮವಾಗಿ ಜನತಾಂತ್ರಿಕ ಸಮಾಜವಾದಿಗಳು ಭಾರತದ ರಾಜಕೀಯದಲ್ಲಿ ತಮ್ಮ 'ವಿಶಿಷ್ಟ' ಸ್ಥಾನವನ್ನು ಕಳೆದುಕೊಳ್ಳುತ್ತ ಹೋದರು ಎಂದು ಸಮಾಜವಾದಿ ಇತಿಹಾಸಕಾರ ಪಾಲ್ ರೋಜ್ ಅಭಿಪ್ರಾಯ ಪಡುತ್ತಾರೆ. ಆದರೆ ಸಂಘಟನಾತ್ಮಕವಾಗಿ ಸಮಾಜವಾದ ಬಲಗುಂದಿದರೂ, ಸೈದ್ಧಾಂತಿಕವಾಗಿ ಬೆಳೆಯುತ್ತಲೇ ಹೋಯಿತು.

ದೇಶದ ಇತಿಹಾಸದಲ್ಲಿ ಜನತಂತ್ರಕ್ಕೆ ಸರ್ವಾಧಿಕಾರ ಎಸೆದ ಸವಾಲನ್ನು ಜಯಪ್ರಕಾಶ ನಾರಾಯಣರು ಎದುರಿಸಿದರು. ಸೈದ್ಧಾಂತಿಕವಾಗಿ ಗಾಂಧಿಯವರ ನಾಗರಿಕ ಅಸಹಕಾರ ಆಂದೋಲನದಿಂದ ತಮ್ಮ ವಿಚಾರಯಾತ್ರೆಯನ್ನು ಪ್ರಾರಂಭಿಸಿದ ಜಯಪ್ರಕಾಶ

ನಾರಾಯಣರು ಮಾರ್ಕ್ಸವಾದದ ಹಾಗೂ ಜನತಾಂತ್ರಿಕ ಸಮಾಜವಾದಗಳ ಮೂಲಕ ಸರ್ವೋದಯವನ್ನು ತಲುಪಿದ್ದರು. ವೈಯಕ್ತಿಕ ವ್ಯಷ್ಟಿಯ ಆಯಾಮವನ್ನು ಹೊಂದಿದ್ದ ಮಹಾತ್ಮಾ ಗಾಂಧಿಯವರ ಅಹಿಂಸಾತ್ಮಕ ಸತ್ಯಾಗ್ರಹದ ಪರಿಕಲ್ಪನೆಯನ್ನು ಸಮಷ್ಟಿಯ ಆಯಾಮವನ್ನು ಹೊಂದಿದ್ದ ಸಮಾಜವಾದಿಗಳ ಹೋರಾಟದ ಪರಿಕಲ್ಪನೆಯೊಂದಿಗೆ ಸಮನ್ವಯಗೊಳಿಸಿ ಜಯಪ್ರಕಾಶ ನಾರಾಯಣರು ಹಲವು ಬಾರಿ 'ರಾಜ್ಯ ಶಕ್ತಿ'ಯ ಜೊತೆಗಿರುವ, ಹಲವು ಬಾರಿ 'ರಾಜ್ಯ ಶಕ್ತಿ'ಯನ್ನು ವಿರೋಧಿಸುವ 'ಜನ ಶಕ್ತಿ'ಯ ಪರಿಕಲ್ಪನೆಯ ಹೊಸ ಸಿದ್ಧಾಂತವನ್ನು ಪರಿಭಾವಿಸಿದರು. ರಾಜ್ಯ ಶಕ್ತಿ ಜನರ ಕಲ್ಯಾಣಕ್ಕಾಗಿ ಕೆಲಸ ಮಾಡುತ್ತಿದ್ದರೆ ಜನ ಶಕ್ತಿ ಅದರೊಂದಿಗೆ ಸಹಕರಿಸಬೇಕೆಂದೂ, ರಾಜ್ಯ ಶಕ್ತಿ ಜನರ ಹಿತಾಸಕ್ತಿಗಳಿಗೆ ವಿರುದ್ಧವಾಗಿ ನಡೆದುಕೊಂಡರೆ ಜನ ಶಕ್ತಿ ಅದನ್ನು ವಿರೋಧಿಸಬೇಕೆಂದೂ ಹೇಳುವ ಮೂಲಕ ಜಯಪ್ರಕಾಶ ನಾರಾಯಣರು ಹೆಗೆಲನ ದ್ವಂದ್ವಾತ್ಮಕ ಸಿದ್ಧಾಂತಕ್ಕೆ ಒಂದು ಹೊಸ ಆಯಾಮ ನೀಡಿದರು.

ಒಂದೆಡೆ ಜಯಪ್ರಕಾಶ ನಾರಾಯಣರು, ರಾಜ್ಯವ್ಯವಸ್ಥೆಯ ಅಧಿಕಾರದ ಕೇಂದ್ರೀಕರಣದ ಗುಣವಿಶೇಷ ಹೊಂದಿದ ಸರ್ವಾಧಿಕಾರದ ಸವಾಲನ್ನು ಸೋಲಿಸಿ ಭಾರತದಲ್ಲಿ ಜನತಂತ್ರವನ್ನು ಭದ್ರಗೊಳಿಸಿದರೆ, ಇನ್ನೊಂದೆಡೆಗೆ ಅಶೋಕ ಮೆಹತಾ ರಾಜ್ಯವ್ಯವಸ್ಥೆಯ ಅಧಿಕಾರದ ವಿಕೇಂದ್ರೀಕರಣದ ಮೂಲಕ ಜನತಂತ್ರವನ್ನು ಗಟ್ಟಿಗೊಳಿಸುವತ್ತ ಚಿಂತನೆ ಮಾಡಿದರು. ಬರಿ ಆಡಳಿತದ ವಿಕೇಂದ್ರೀಕರಣದ ಸಾಧನಗಳಾಗಿದ್ದ ಪಂಚಾಯತಿ ರಾಜ್ ಘಟಕಗಳನ್ನು ಅಭಿವೃದ್ಧಿಯ ಸಾಧನಗಳನ್ನಾಗಿ ಪರಿಕಲ್ಪಿಸಿದರು.

ಅಂದು ಸಮಾಜವಾದಿಗಳು ಹೇಳಿದ್ದನ್ನು ಗಾಂಧಿ ಒಪ್ಪಿರಲಿಲ್ಲ, ಆದರೆ ಇಂದು ದೇಶ ಮಹಾತ್ಮಾ ಗಾಂಧಿ ತೋರಿಸಿದ ದಾರಿಯಲ್ಲಲ್ಲ, ಸಮಾಜವಾದಿಗಳು ತೋರಿಸಿದ ದಾರಿಯಲ್ಲಿ ಮುನ್ನಡೆದಿದೆ ಎಂದರೆ ಬಹಳ ಜನರಿಗೆ ಆಶ್ಚರ್ಯವಾಗಬಹುದು. ಆದರಿದು ಒಂದು ಐತಿಹಾಸಿಕ ಸತ್ಯ. 1934ರಲ್ಲಿ ಮುಂಬಯಿಯ ಸಮಾಜವಾದಿಗಳು ಅಂಗೀಕರಿಸಿದ್ದ ಕಾರ್ಯಕ್ರಮವನ್ನು ಮೀನೂ ಮಸಾನಿಯವರು ಮಹಾತ್ಮಾ ಗಾಂಧಿಯವರಿಗೆ ಪ್ರತಿಕ್ರಿಯೆಗಾಗಿ ನೀಡಿದ್ದರು. ಅದಕ್ಕೆ ನೀಡಿದ ತಮ್ಮ ಪ್ರತಿಕ್ರಿಯೆಯಲ್ಲಿ ಮಹಾತ್ಮಾ ಗಾಂಧಿಯವರು ಕಾಂಗ್ರೆಸ್ ಸಮಾಜವಾದಿ ಪಕ್ಷದ ಸ್ಥಾಪನೆಯನ್ನು ಸ್ವಾಗತಿಸಿದರೂ ಅದರ ಕಾರ್ಯಕ್ರಮಗಳನ್ನು ವಿರೋಧಿಸಿದ್ದರು. ಉದಾಹರಣೆಗೆ ಜಮೀನುದಾರಿ ಪದ್ಧತಿಯ ರದ್ದತಿಯನ್ನು ಅವರು ವಿರೋಧಿಸಿದ್ದರು. ಆದರೆ ನಂತರ ಪರಿಹಾರ ಧನವನ್ನೂ ನೀಡದೇ ರೈತರೇ ಜಮೀನುದಾರರ ಭೂಮಿಯನ್ನು ಕಿತ್ತುಕೊಳ್ಳಬೇಕು ಎನ್ನುವಷ್ಟರ ಮಟ್ಟಿಗೆ ಸಮಾಜವಾದಿಗಳ ನಿಲುವನ್ನು ಒಪ್ಪಿಕೊಂಡರು. ಇಂದು ದೇಶದಲ್ಲಾಗಿರುವ ಬದಲಾವಣೆಗಳನ್ನು ಗಮನಿಸಿದರೆ ದೇಶ ಸಮಾಜವಾದಿಗಳು ತೋರಿಸಿದ ದಾರಿ ತುಳಿಯುತ್ತಿದೆ ಎಂಬುದು ಸ್ಪಷ್ಟವಾದೀತು? ಅಂತರ್ರಾಷ್ಟ್ರೀಯ ಅರ್ಥಶಾಸ್ತ್ರಜ್ಞರು ಇತ್ತೀಚೆಗೆ ಬಳಸುತ್ತಿರುವ 'ಜಿನಿ' ಮಾನದಂಡದ ಪ್ರಕಾರ ಇಂದು ಭಾರತ ಬಂಡವಾಳವಾದಿ ಅಮೇರಿಕೆಗಿಂತ ಅಷ್ಟೇ ಅಲ್ಲ, ಕಮ್ಯುನಿಸ್ಟ ಚೀನಕ್ಕಿಂತ ಹೆಚ್ಚಿನ ಸಮಾನತೆಯನ್ನು ಸಾಧಿಸಿದೆ. ಇದು ಸಮಾಜವಾದಿಗಳ ಅತ್ಯಂತ ದೊಡ್ಡ ಗೆಲುವು ಎನ್ನುವುದು ನನ್ನ ವೈಯಕ್ತಿಕ ಅಭಿಪ್ರಾಯ.

*

---

**ಬಾಪೂ ಹೆದ್ದೂರಶೆಟ್ಟಿ**, ವಕೀಲರು, 26, 6ನೇ ಮುಖ್ಯರಸ್ತೆ, ಪ್ಯಾಲೇಸ್ ಗುಟ್ಟಹಳ್ಳಿ, ಬೆಂಗಳೂರು–3



# ಬಂಡವಾಳ (ಸಾಮ್ರಾಜ್ಯದ) ಚಕ್ರವರ್ತಿಯ ಹೊಸ ಅವತಾರಗಳು

**–ರಾಜೇಂದ್ರ ಚೆನ್ನಿ**

ಬಂಡವಾಳಶಾಹಿಯ ವಿಶ್ಲೇಷಣೆಯು ಬಂಡವಾಳಶಾಹಿಯ ಚರಿತ್ರೆಯಷ್ಟೇ ಸುದೀರ್ಘವಾಗಿದೆ. ಯೂರೋಪಿನಲ್ಲಿ ಹಲವಾರು ಚಾರಿತ್ರಿಕ ವಿದ್ಯಮಾನಗಳ ಫಲವಾಗಿ ಹುಟ್ಟಿಕೊಂಡ ಬಂಡವಾಳಶಾಹಿಯು ಅಲ್ಲಿಯ ನಾಗರೀಕತೆ ಹಾಗೂ ಸಾಮಾಜಿಕ ರಚನೆಗಳಲ್ಲಿ ಮೂಲಭೂತವಾದ ಪಲ್ಲಟಗಳನ್ನು ತಂದಿತು. ಜೊತೆಗೆ ಅನೇಕ ಆತಂಕ ಹಾಗೂ ತಲ್ಲಣಗಳನ್ನು ಕೂಡ. ಹೀಗಾಗಿ ಅದರ ಹುಟ್ಟಿನೊಂದಿಗೇ ಅದರ ಪರ ಹಾಗೂ ವಿರೋಧದ ವಿಶ್ಲೇಷಣೆಗಳೂ ಹುಟ್ಟಿಕೊಂಡವು. ಇತಿಹಾಸಕಾರರು ಬಂಡವಾಳದ ಉಗಮವನ್ನು ಒಂದು ಸುದೀರ್ಘವಾದ ಪ್ರಕ್ರಿಯೆಯಾಗಿ ನೋಡುತ್ತಾರೆಯಾದ್ದರಿಂದ ಆ ಪ್ರಕ್ರಿಯೆಯನ್ನು ಹಲವಾರು ಶತಮಾನಗಳಲ್ಲಿ ಕಾಣುವುದು ಸಾಧ್ಯವಿದೆ. ಆದರೆ ಹೆಚ್ಚು ನಿರ್ದಿಷ್ಟವಾಗಿ 18 ಹಾಗೂ 19ನೇ ಶತಮಾನಗಳಲ್ಲಿ ಅದು ಒಂದು ಖಚಿತವಾದ ರೂಪವನ್ನು ಪಡೆದುಕೊಂಡಿತು ಎನ್ನಬಹುದು. ಜ್ಞಾನಪರ್ವ (enlightenment), ಆಧುನಿಕ ವಿಜ್ಞಾನ

ಹಾಗೂ ತಂತ್ರಜ್ಞಾನದ ಬೆಳವಣಿಗೆ, ಭೂಮಿಯ ಒಡೆತನದಲ್ಲಾದ ಪಲ್ಲಟಗಳು, ಮಧ್ಯಮ ವರ್ಗವು ಪ್ರಬಲವಾಗಿದ್ದುದು ಮತ್ತು ಬಹುಮುಖ್ಯವಾಗಿ ಔದ್ಯೋಗಿಕ ಕ್ರಾಂತಿ– ಇವೆಲ್ಲವುಗಳ ಪರಿಣಾಮದಿಂದಾಗಿ ಬಂಡವಾಳಶಾಹಿಯು ಅಸ್ತಿತ್ವಕ್ಕೆ ಬಂದಿತು. ಈ ಎಲ್ಲ ಸಂಗತಿಗಳಷ್ಟೇ ಮುಖ್ಯವಾದುದು ಸಾಮ್ರಾಜ್ಯಶಾಹಿ. ಬಂಡವಾಳದ ಅನೇಕ ವಿಶ್ಲೇಷಣೆಗಳು ಈ ಸಂಗತಿಯನ್ನು ಅಲಕ್ಷಿಸಿದ್ದು ಆನಂತರ ವಿಸ್ತಾರವಾಗಿ ಚರ್ಚೆಗೆ ಒಳಗಾಯಿತು. ಬಂಡವಾಳಶಾಹಿ ಹಾಗೂ ಸಾಮ್ರಾಜ್ಯಶಾಹಿಗಳನ್ನು ಪ್ರತ್ಯೇಕಿಸಿ ನೋಡುವುದು ತಪ್ಪು ಮಾತ್ರವಲ್ಲ ಬಂಡವಾಳಶಾಹಿಯ ಇಂದಿನ ಸ್ವರೂಪವನ್ನು ಅರ್ಥಮಾಡಿಕೊಳ್ಳುವುದಕ್ಕೆ ಅಡ್ಡಿಯಾಗುತ್ತದೆ. ಕೆಲವು ಸಾಂಪ್ರದಾಯಿಕ ವಿಶ್ಲೇಷಣೆಗಳು ಬಂಡವಾಳಶಾಹಿಯ 'ಆಂತರಿಕ' ಬೆಳವಣಿಗೆಗಳ ಮೇಲೆ ತಮ್ಮ ಗಮನವನ್ನು ಕೇಂದ್ರೀಕರಿಸಿದ್ದವು. (ಉದಾಹರಣೆಗೆ ಇಂಗ್ಲೆಂಡ್‌ನಲ್ಲಿ ಬಂಡವಾಳಶಾಹಿಯ ಬೆಳವಣಿಗೆಯನ್ನು ಅಲ್ಲಿಯ ಸಾಮಾಜಿಕ ರಚನೆ ಹಾಗೂ ಚರಿತ್ರೆಯ ಆಧಾರದ ಮೇಲೆ ಮಾತ್ರ ವಿಶ್ಲೇಷಿಸಿ, ಅದು ಬ್ರಿಟಿಷ್ ಸಾಮ್ರಾಜ್ಯಶಾಹಿಯ ಬೆಂಬಲದಿಂದ ಬೆಳೆದದ್ದನ್ನು ಅಲಕ್ಷಿಸುವುದು). ಇಂಥ ವಿಶ್ಲೇಷಣೆಯ ತೊಂದರೆಯೆಂದರೆ ಬಂಡವಾಳಶಾಹಿಯು ತನ್ನ ಬೆಳವಣಿಗೆಯ ಒಂದು ಹಂತದಲ್ಲಿ ಮಾತ್ರ ಅಂತರ್‌ರಾಷ್ಟ್ರೀಯ ಸ್ವರೂಪವನ್ನು ಪಡೆದುಕೊಂಡಿತು ಹಾಗೂ ಇದೇ ವಿದ್ಯಮಾನವು ಇಂದು ಜಾಗತೀಕರಣದ ರೂಪದಲ್ಲಿ ಕಂಡುಬರುತ್ತಿದೆಯೆನ್ನುವ ವಾದವನ್ನು ಅದು ಮಂಡಿಸುತ್ತದೆ. ಲೆನಿನ್ ಕೂಡ ಸಾಮ್ರಾಜ್ಯಶಾಹಿಯನ್ನು ಬಂಡವಾಳಶಾಹಿಯ ಆಧುನಿಕ ಹಂತವೆಂದು ವಿವರಿಸಿದ್ದಾನೆ. ಜಾಗತೀಕರಣವು ನವವಸಾಹತುಶಾಹಿಯೇ ಆಗಿದೆ ಎನ್ನುವುದು ನಿಜವಾಗಿದೆ. ಆದರೆ ಬಂಡವಾಳಶಾಹಿಯು ತನ್ನ ಆರಂಭದ ಕಾಲದಿಂದಲೇ ಸಾಮ್ರಾಜ್ಯಶಾಹಿಯಿಂದ ಚಲನಶೀಲತೆ ಹಾಗೂ ಶಕ್ತಿಯನ್ನು ಪಡೆದಿತ್ತು ಎನ್ನುವುದನ್ನು ಕಡೆಗಣಿಸಬಾರದು. ಇಲ್ಲದಿದ್ದರೆ ಬಂಡವಾಳಶಾಹಿಯ ಅಪಾರವಾದ ಪ್ರಾಬಲ್ಯವನ್ನು ಚಾರಿತ್ರಿಕವಾಗಿ ವಿವರಿಸುವ ಬದಲಾಗಿ ಅದನ್ನು ಪುರಾಣಸದೃಶವಾದ ದೈತ್ಯ ಶಕ್ತಿಯನ್ನಾಗಿ ಅಂದರೆ ಒಂದು ರೂಪಕವನ್ನಾಗಿ ನೋಡತೊಡಗುತ್ತೇವೆ. ಬಹುಶಃ ಈ ಕಾರಣದಿಂದಾಗಿಯೆ ಇಂದಿನ ಬಹುಪಾಲು ವಿಶ್ಲೇಷಣೆಗಳು ಬಂಡವಾಳಶಾಹಿಯ ಅಂತಿಮ ವಿಜಯವನ್ನು ಒಪ್ಪಿಕೊಂಡಂತೆ ಕಾಣುತ್ತದೆ. ಜಾಗತೀಕರಣದ ಇಂದಿನ ಹಂತದಲ್ಲಿ ಬಂಡವಾಳಶಾಹಿಯು ಅತ್ಯಂತ ಪ್ರಬಲವಾಗಿರುವಂತೆ ಕಾಣುತ್ತದೆ ಎನ್ನುವುದು ಬೇರೆ; ಬಂಡವಾಳಶಾಹಿಯೇ ಎಂದೂ ಸೋಲುಕಾಣದ ಮಹಾನ್ ಶಕ್ತಿಯೆನ್ನುವುದು ಬೇರೆ. ಬಂಡವಾಳಶಾಹಿಯ ಅಂತಿಮ ವಿಜಯವು ಆಗಿಬಿಟ್ಟಿದೆ ಎನ್ನುವ ಕಥನಗಳು ಬಂಡವಾಳಶಾಹಿ ರಾಷ್ಟ್ರಗಳಲ್ಲಿ, ವಿಶೇಷವಾಗಿ ಅಮೇರಿಕದಲ್ಲಿ ಹುಟ್ಟಿಕೊಂಡಿವೆ. ಮನುಷ್ಯ ಚರಿತ್ರೆಯು ತನ್ನ ಅಂತಿಮ ಹಂತವನ್ನು ತಲುಪಿದ್ದು, ಈ ಹಂತದಲ್ಲಿ ಆದರ್ಶಸ್ಥಿತಿಯಾದ ಬಂಡವಾಳಶಾಹಿ ಸ್ವರೂಪವನ್ನು ಪಡೆದುಕೊಂಡಿದೆ ಎಂದು ಈ ಕಥನಗಳು ಹೇಳುತ್ತವೆ. (End of History ಮುಂತಾದ ಜನಪ್ರಿಯ ಕಥನಗಳನ್ನು ನೆನಪಿಸಿಕೊಳ್ಳಬಹುದಾಗಿದೆ). ಸೂಕ್ಷ್ಮವಾಗಿ ನೋಡಿದರೆ ಮಾರ್ಕ್ಸ್‌ವಾದವು ಮನುಷ್ಯ ನಾಗರೀಕತೆಯ ಭವಿಷ್ಯದ ಬಗ್ಗೆ ಒಂದು teleological ವಾದವನ್ನು ಮುಂದಿಟ್ಟಿತ್ತು. ಅಂದರೆ ಬಂಡವಾಳಶಾಹಿಯು ತನ್ನ ವೈರುಧ್ಯಗಳಿಂದಾಗಿ ಕೊನೆಗೊಂಡು ವರ್ಗರಹಿತ ಸಮಾಜವು ಅಸ್ತಿತ್ವಕ್ಕೆ ಬರುತ್ತದೆಯೆನ್ನುವ ಆದರ್ಶದ ಕಲ್ಪನೆಯನ್ನು ಹೊಂದಿತ್ತು. ಇದು ಯಾಂತ್ರಿಕವಾಗಿ 'ದೈವೇಚ್ಛೆ' ಯಿಂದ ಆಗುತ್ತದೆಯೆಂದಲ್ಲ; ಬಂಡವಾಳಶಾಹಿ ವಿರೋಧಿ ವರ್ಗಗಳು ಸಮರ್ಪಕವಾದ ಪ್ರಜ್ಞೆಯನ್ನು ಬೆಳೆಸಿಕೊಂಡು ಹೋರಾಟದ ಮೂಲಕ ಅಧಿಕಾರವನ್ನು ಪಡೆದುಕೊಂಡು ಅದನ್ನು ಸಾಧ್ಯವಾಗಿಸುತ್ತವೆ

ಎಂದು ಮಾರ್ಕ್ಸ್‌ವಾದವು ಹೇಳುತ್ತದೆ. End of History ಯಂಥ ಕಥನಗಳು ಕೂಡ ಒಂದು teleological ವಾದವನ್ನು ಮುಂದಿಡುತ್ತವೆ. ಫರಕು ಇಷ್ಟೇ. ಈ ಕಥನಗಳ ಪ್ರಕಾರ ಮನುಷ್ಯ ನಾಗರೀಕತೆಯು ಅನಿವಾರ್ಯವಾಗಿ ಹಾಗೂ ಸರಿಯಾಗಿ ತಲುಪಿದ ಅಂತಿಮಸ್ಥಿತಿಯು ಬಂಡವಾಳಶಾಹಿಯು ಇಂದಿನ ಸ್ಥಿತಿಯಾಗಿದೆ ಎಂದು ಹೇಳುತ್ತವೆ. ಈ ವಾದವನ್ನು ಮಾರ್ಕ್ಸ್‌ವಾದದ teleology ಯ ಅಣಕವೆಂದು ನೋಡಬಹುದಾಗಿದೆ. ಆದರೆ ಅದನ್ನು ಬಂಡವಾಳಶಾಹಿಯ ವಿಜೃಂಭಣೆಯ ಒಂದು ಭಾಗವಾಗಿ ನೋಡುವುದೇ ಹೆಚ್ಚು ಸೂಕ್ತವಾಗಿದೆ.

ಈ ವಿಜೃಂಭಣೆಯ ಪರಿಣಾಮವೆಂದರೆ ಬಂಡವಾಳಶಾಹಿಯ ಒಂದು ಸಮಗ್ರವಾದ critique ಈಗ ಕಂಡು ಬರುತ್ತಿಲ್ಲ. ತಮ್ಮದೇ ಆದ ಕಾರಣಕ್ಕಾಗಿ ಬಂಡವಾಳಶಾಹಿಯನ್ನು ವಿರೋಧಿಸುವ ಹಲವಾರು ಸಿದ್ಧಾಂತಗಳಿವೆ; ಸ್ಥಳೀಯವಾಗಿ ಅದನ್ನು ವಿರೋಧಿಸಿ ಪ್ರತಿಭಟಿಸುವ ನೂರಾರು ಹೊಸ ಸಾಮಾಜಿಕ ಚಳುವಳಿಗಳು ಜಗತ್ತಿನ ಉದ್ದಕ್ಕೂ ನಡೆಯುತ್ತಲೇ ಇವೆ. ಆದರೆ ಇವುಗಳು ಸೈದ್ಧಾಂತಿಕವಾಗಿ ಸೀಮಿತವಾಗಿರುವುದರಿಂದ ಎಲ್ಲಿಯೋ ಅವು ಬಂಡವಾಳಶಾಹಿಯ ಪ್ರಾಬಲ್ಯವನ್ನು ಅಪರಿಹಾರ್ಯವೆಂದು ಒಪ್ಪಿಕೊಂಡು ಬಿಟ್ಟವೆ ಎನ್ನುವ ಸಂಶಯವು ಬರುತ್ತದೆ. ಬಂಡವಾಳಶಾಹಿಯ ಪರಿಣಾಮದಿಂದಾಗಿ ಹುಟ್ಟುವ ಸಮಸ್ಯೆಗಳಿಗೆ ಸ್ಥಳೀಯ ಪರಿಹಾರಗಳನ್ನು ಇವು ಹುಡುಕುತ್ತವೆಯೆ ಹೊರತು ಸಮಗ್ರವಾಗಿ ಬಂಡವಾಳಶಾಹಿ ವ್ಯವಸ್ಥೆಯನ್ನೇ ಎದುರು ಹಾಕಿಕೊಳ್ಳುವುದಿಲ್ಲ. ಉದಾಹರಣೆಗೆ ಭಾರತದಲ್ಲಿ ನಡೆಯುತ್ತಿರುವ ಪರಿಸರವಾದಿ ಚಳುವಳಿಗಳು ಪರಿಸರವಿನಾಶವು ಬಂಡವಾಳಶಾಹಿಯ ಅನಿವಾರ್ಯವಾದ ಭಾಗವೆನ್ನುವುದನ್ನು ಪ್ರಮುಖವಾಗಿ ಗುರುತಿಸುವುದಿಲ್ಲ. ಹಾಗೆಯೆ ಅನೇಕ ಮಹಿಳಾಪರ ಚಳುವಳಿಗಳು ಕೂಡ ಪುರುಷ ಪ್ರಾಧಾನ್ಯ ಹಾಗೂ ಬಂಡವಾಳಶಾಹಿಯ ನಿಕಟ ಸಂಬಂಧಗಳನ್ನು ಪ್ರಧಾನವಾಗಿ ಗುರುತಿಸುವುದಿಲ್ಲ ಈ ಎಳೆಯನ್ನು ಹಿಂಬಾಲಿಸಿಕೊಂಡು ನೋಡಿದರೆ ಈ ಸೈದ್ಧಾಂತಿಕ ಕೊರತೆಯನ್ನು ಇಂದಿನ ಸಮಾಜವಾದಿ ಚಿಂತನೆಯಲ್ಲಿಯೇ ಗುರುತಿಸಬಹುದಾಗಿದೆ. ಲೋಹಿಯಾ, ಕಿಶನ್ ಪಟ್ನಾಯಕ್‌ರಂಥ ಪ್ರಖರ ಸಮಾಜವಾದಿ ಚಿಂತಕರು ಬಂಡವಾಳದ ಸಮಗ್ರವಾದ ವಿಶ್ಲೇಷಣೆಗೆ ಪ್ರಯತ್ನಿಸಿದ್ದಾರೆ. ಆದರೆ ಮಾರ್ಕ್ಸ್‌ವಾದಿ ಪರಿಭಾಷೆಯನ್ನೇ ತಿರಸ್ಕರಿಸುವಂತೆ ಕಾಣುವ ಅನೇಕ ಸಮಾಜವಾದಿಗಳು ಇಂಥ ಸಮಗ್ರ ವಿಶ್ಲೇಷಣೆಯನ್ನು ದೂರವಿಟ್ಟಿದ್ದಾರೆ.

## ಐತಿಹಾಸಿಕ ಹಿನ್ನಲೆ

ಚಾರಿತ್ರಿಕವಾಗಿ ನೋಡಿದರೆ ಸಮಾಜವಾದವು ಬಂಡವಾಳಶಾಹಿ ಪ್ರವರ್ಧಮಾನವಾಗುತ್ತಿದ್ದ ಕಾಲದಲ್ಲಿ ಅದರ ವಿರುದ್ಧ ಹುಟ್ಟಿಕೊಂಡ ಸಮಗ್ರವಾದ ತಾತ್ವಿಕ, ರಾಜಕೀಯ ಪ್ರತಿರೋಧವಾಗಿತ್ತು. ಬಂಡವಾಳಶಾಹಿ ವಿರೋಧದ ಸಾವಿರಾರು ವಿಭಿನ್ನ ಕ್ರಿಯೆಗಳ ರೋಚಕವಾದ ಚರಿತ್ರೆಯನ್ನು 18 ಹಾಗೂ 19ನೇ ಶತಮಾನಗಳಲ್ಲಿ ಕಾಣಬಹುದು. ಧಾರ್ಮಿಕ, ನೈತಿಕ, ರಾಜಕೀಯಾತ್ಮಕ ಮುಂತಾದ ತೀರಾ ವಿಭಿನ್ನ ನೆಲೆಗಳಲ್ಲಿ ಈ ಕ್ರಿಯೆಗಳು ನಡೆದವು. ಆ ಶತಮಾನಗಳ ಸಾಹಿತ್ಯವು ಈ ಕ್ರಿಯೆಗಳಲ್ಲಿ ಪ್ರಮುಖವಾಗಿ ಭಾಗಿಯಾಗಿತ್ತು. ಈ ಕ್ರಿಯೆಗಳು ಹಾಗೂ ಚಿಂತನೆಗಳು ಕೆಲವು ಮೂಲಭೂತ ನಂಬಿಕೆಗಳಿಂದಾಗಿ ಸಮಾಜವಾದವೆನ್ನುವ ಹೆಸರನ್ನು ಪಡೆದವು. ಮಾರ್ಕ್ಸ್‌ವಾದವು ಕೂಡ ಇದೇ ಚಾರಿತ್ರಿಕ

ವಿದ್ಯಮಾನದ ಒಂದು ಭಾಗವಾಗಿತ್ತು. ಮಾರ್ಕ್ಸ್‌ನ ಚಿಂತನೆಯು ಮೂಲತಃ ಬಂಡವಾಳವನ್ನು ಒಂದು ನಿರ್ದಿಷ್ಟ ಚಾರಿತ್ರಿಕ ಬೆಳವಣಿಗೆಯಾಗಿ ವಿವರಿಸುವ ಚಿಂತನೆಯಾಗಿತ್ತು ಮಾತ್ರವಲ್ಲ ಅದು ಬಂಡವಾಳದ ಅತ್ಯಂತ ಸಮಗ್ರವಾದ critique ಆಗಿತ್ತು. ಅದನ್ನು ವಿವರಿಸುವಾಗ ಮಾರ್ಕ್ಸ್‌ನು ಬಳಸುವ ರೂಪಕಗಳು ಅದೆಷ್ಟೇ ಪ್ರಭಾವಿಯಾಗಿದ್ದರೂ ಅವನ ವಿಶ್ಲೇಷಣೆಯು ತನ್ನ ಚಾರಿತ್ರಿಕ ನಿರ್ದಿಷ್ಟತೆಯಲ್ಲಿ ಖಚಿತವಾಗಿತ್ತು. ಹೀಗಾಗಿ ಅದು ಬಂಡವಾಳದ ವಿಜಯ ಅಥವಾ ವಿಜೃಂಭಣೆಯ ಸೋಂಕಿನಿಂದ ದೂರವಾಗಿತ್ತು. ಜಮೀನ್ದಾರಿ ಅಥವಾ ಊಳಿಗಮಾನ್ಯ ವ್ಯವಸ್ಥೆಯ ಜಡತೆಯನ್ನು ಭಗ್ನಗೊಳಿಸುವ ಚಾಲಕಶಕ್ತಿ ಬಂಡವಾಳಕ್ಕೆ ಇದೆಯೆಂದು ಅವನು ಗುರುತಿಸುತ್ತಾನೆಯೇ ಹೊರತು ಅದನ್ನು ಚರಿತ್ರೆಗೆ ಅತೀತವಾದ ಒಂದು ಶಕ್ತಿಯೆಂದು ಗುರುತಿಸುವುದಿಲ್ಲ. ಮುಖ್ಯವಾಗಿ ಅದರ ಮೂಲದಲ್ಲಿಯೇ ವೈರುಧ್ಯಗಳಿರುವುದರಿಂದ ಈ ವೈರುಧ್ಯಗಳೂ ಮುಂದೆ ಅದರ ವಿನಾಶಕ್ಕೆ ಕಾರಣವಾಗುತ್ತದೆ ಎಂದು ಅವನು ನಂಬಿದ್ದ. ಈ ನಂಬಿಕೆಯು ಸಮಾಜವಾದದ ಮೂಲಸತ್ವವಾಗಿದೆ. ರಶಿಯಾದ ಕ್ರಾಂತಿಯ ನಂತರ ಹುಟ್ಟಿಕೊಂಡ ಒಂದು ಬಗೆಯ ಮಾರ್ಕ್ಸ್‌ವಾದಿ ಚಿಂತನೆ ಹಾಗೂ ರಾಜಕೀಯದಿಂದಾಗಿ ಆವರೆಗೆ ಕೇವಲ ಸಮಾಜವಾದವೆಂದು ಕರೆಯಲಾಗುತ್ತಿದ್ದ ಚಿಂತನೆಯು ತನ್ನನ್ನು ತಾತ್ವಿಕವಾಗಿ ಪ್ರತ್ಯೇಕಿಸಿಕೊಳ್ಳತೊಡಗಿತು. ಅಲ್ಲದೇ ಮಾರ್ಕ್ಸ್‌ವಾದಕ್ಕಿಂತ ಭಿನ್ನವಾದ ಬಂಡವಾಳಶಾಹಿಯ ವಿಶ್ಲೇಷಣೆಗೆ ಪ್ರಯತ್ನಿಸಿತು. ಇಲ್ಲಿಯೂ ಕೂಡ ಬಂಡವಾಳದ ಮೂಲಸ್ವರೂಪದ ಬಗೆಗಿನ ಭಿನ್ನಾಭಿಪ್ರಾಯಕ್ಕಿಂತ ಅದರ ವಿರುದ್ಧದ ಹೋರಾಟದ ಸ್ವರೂಪದ ಬಗ್ಗೆ ಹೆಚ್ಚು ಭಿನ್ನಾಭಿಪ್ರಾಯವಿದ್ದಂತೆ ತೋರುತ್ತದೆ. ಇಷ್ಟು ಸುದೀರ್ಘವಾದ ಸಮಾಜವಾದಿ ಪರಂಪರೆಯಲ್ಲಿ ನಂತರ ಸಧ್ಯದ ಸನ್ನಿವೇಶದಲ್ಲಿ ಬಂಡವಾಳದ ಸಮಗ್ರವಾದ cirique ಯಾಕೆ ಆಗುತ್ತಿಲ್ಲವೆನ್ನುವುದು ಚಿಂತಿಸಬೇಕಾದ ವಿಷಯವಾಗಿದೆ. ಇದಕ್ಕೆ ಕೆಲವು ಕಾರಣಗಳನ್ನು ಹೀಗೆ ಗುರುತಿಸಬಹುದು.

ಮಾರ್ಕ್ಸ್ ಮತ್ತು ನಂತರ ಇಪ್ಪತ್ತನೆಯ ಶತಮಾನದ ಮೊದಲ ಅರ್ಧಭಾಗದಲ್ಲಿ ಸಮಾಜವಾದವು ವಿವರಿಸುತ್ತಿದ್ದ ಹಾಗೂ ವಿರೋಧಿಸುತ್ತಿದ್ದ ಬಂಡವಾಳವು ಆನಂತರ ಸಂಪೂರ್ಣವಾಗಿ ಪರಿವರ್ತನೆ ಹೊಂದಿದೆ; ಹೀಗಾಗಿ ಆ ತಾತ್ವಿಕ ಪರಿಭಾಷೆ ಕೂಡ ಬದಲಾದ ಬಂಡವಾಳಶಾಹಿಯ ವಿವರಣೆಗೆ, ಗ್ರಹಿಕೆಗೆ ಅಸಮರ್ಪಕವಾಗಿದೆ ಎನ್ನುವ ವಾದವು ಬಹಳ ಚರ್ಚೆಗೆ ಈಡಾಗಿದೆ. 1989ರಲ್ಲಿ ಇಂಗ್ಲೆಂಡ್‌ನ ಎಡಪಂಥೀಯ ಚಿಂತಕರು ಈ ಬಗ್ಗೆ ಚರ್ಚಿಸಿದ್ದನ್ನು ಮತ್ತೊಮ್ಮೆ ಓದಿದಾಗ ಈ ಮುಖ್ಯವಾದ ಚರ್ಚೆಯ ಒಂದು ಹಂತವನ್ನು ಕಂಡಂತೆ ನನಗೆ ಅನ್ನಿಸಿತು. ಅಷ್ಟು ಮಾತ್ರವಲ್ಲ ಎರಡು ದಶಕಗಳ ನಂತರ ಜಾಗತೀಕರಣದ ಸಂದರ್ಭದಲ್ಲಿ ನಡೆಯುತ್ತಿರುವ ಚರ್ಚೆಗಳ ಅನೇಕ ಪ್ರಮುಖ ಅಂಶಗಳನ್ನು ಅವರು ಗುರುತಿಸಿ ಈಗಲೂ ಪ್ರಸ್ತುತವೆನಿಸುವ ರೀತಿಯಲ್ಲಿ ಅವುಗಳನ್ನು ಮಂಡಿಸಿದ್ದರು ಎನಿಸಿತು. Out of Apathy ಮತ್ತು New Times: The Changing Face of Politics in the 1990s ಈ ಎರಡು ಕೃತಿಗಳಲ್ಲಿ ಸಂಗ್ರಹಿತವಾದ ಬರಹಗಳನ್ನು ಆಧಾರವಾಗಿಟ್ಟುಕೊಂಡು ಈ ಚರ್ಚೆಯನ್ನು ಗಮನಿಸಬಹುದಾಗಿದೆ.

## ಬಂಡವಾಳದ ಆಧುನಿಕ ಅವತಾರಗಳು

1950 ರಿಂದ ಸಕ್ರಿಯವಾಗಿದ್ದ The New Left ಎಂದು ಕರೆಯಲಾಗುತ್ತಿದ್ದ

ಹಾಗೂ ಸಂಕಥನಗಳು ಬಂಡವಾಳಶಾಹಿಯ ಪರವಾಗಿರುವುದರಿಂದ 'ರಾಷ್ಟ್ರ'ವೆನ್ನುವುದು ಅದಕ್ಕೆ ಸಮಸ್ಯೆಯಾಗಿ ಕಂಡಿಲ್ಲ. ಭಾರತವನ್ನೇ ಉದಾಹರಣೆಯಾಗಿಟ್ಟುಕೊಳ್ಳುವುದಾದರೆ ಇಲ್ಲಿಯ ರಾಷ್ಟ್ರೀಯ ಸರಕಾರಗಳು ಆದಿವಾಸಿಗಳಿಗೆ, ಜನರಿಗೆ ಸೇರಿದ ನೆಲ, ಜಲ ಹಾಗೂ ಅರಣ್ಯಗಳನ್ನು ಒತ್ತಾಯ ಹಾಗೂ ಹಿಂಸೆಯ ಮೂಲಕ ಬಂಡವಾಳಶಾಹಿ ಶಕ್ತಿಗಳಿಗಾಗಿ ಕಸಿದುಕೊಳ್ಳುತ್ತಿವೆ. 1989ರ ಹೊತ್ತಿಗೆ ಮುಂದಿನ ದಶಕಗಳಲ್ಲಿ ಬಂಡವಾಳವು ಪಡೆಯುವ ಸ್ವರೂಪವನ್ನು ಸರಿಯಾಗಿ ಗುರುತಿಸಿದ New Leftನ ವಿದ್ವಾಂಸರು ಮೂರನೇ ಜಗತ್ತಿನ ದೇಶಗಳಲ್ಲಿ ಅದು ಪಡೆಯುವ ವಿಶಿಷ್ಟ ಸ್ವರೂಪವನ್ನು ಹಾಗೂ ಅದರ ನವ-ವಸಾಹತುಶಾಹಿ ಸ್ವಭಾವವನ್ನು ಅಷ್ಟು ಖಚಿತವಾಗಿ ಗ್ರಹಿಸಲಿಲ್ಲ. New Leftನ 1989ರಲ್ಲಿ ಪ್ರಕಟವಾದ ಬರಹಗಳು ಭಾರತವು ಕಳೆದ ಎರಡು ದಶಕಗಳಲ್ಲಿ ಅನುಭವಿಸಿದ ವಿದ್ಯಮಾನಗಳನ್ನು ವಿವರಿಸುವಂತೆ ಕಾಣುತ್ತದೆ. ಬಂಡವಾಳದ ಆಧುನಿಕ ಅವತಾರ, ರಾಷ್ಟ್ರಪ್ರಭುತ್ವದೊಂದಿಗೆ ಅದರ ಸಂಬಂಧಗಳು ಹಾಗೂ ಪ್ರಜಾಪ್ರಭುತ್ವದ ಬಿಕ್ಕಟ್ಟುಗಳ ನಮ್ಮ ಪ್ರಶ್ನೆಗಳು ಅವರಿಗೂ ಎದುರಾಗಿದ್ದವು.

## 'ಅಗೋಚರ' ಬದುಕಿನ ಶ್ರಮಿಕವರ್ಗ

ಅಂದಿನ ಚರ್ಚೆಗಳು ಹಾಗೂ ಇಂದಿನ ವಾಸ್ತವಗಳನ್ನು ಜೊತೆಗಿಟ್ಟು ನೋಡಿದಾಗ ಒಂದು ವಿಷಯವು ಪ್ರಮುಖವೆಂದು ಅನ್ನಿಸುತ್ತದೆ. ಸಮಾಜವಾದ ಹಾಗೂ ಮಾರ್ಕ್ಸ್‌ವಾದಗಳು ಪ್ರತಿರೋಧಿಸುತ್ತ ಬಂದ ಬಂಡವಾಳಶಾಹಿಯ ಸ್ವರೂಪ ಇಂದು ಅಮೂಲಾಗ್ರವಾಗಿ ಬದಲಾಗಿದ್ದರೂ ಕೂಡ ಬಂಡವಾಳದ ಮೂಲ ಸ್ವಭಾವದ ಬಗ್ಗೆ ಅವರು ಕೊಟ್ಟ ಒಳನೋಟಗಳನ್ನು ಇಂದಿನ ಬಂಡವಾಳದ ವಿಶ್ಲೇಷಣೆಗೆ ಬಳಸುವ ಅಗತ್ಯವಿದೆ. ಅಂದರೆ ಹಳೆಯ ಪಾರಿಭಾಷಿಕಗಳು ಮತ್ತು ಅವುಗಳ ಹಿಂದಿರುವ ನಿರ್ದಿಷ್ಟ ಚಾರಿತ್ರಿಕ ಹಂತದಲ್ಲಿ ಬೆಳೆದು ಬಂದ ಬಂಡವಾಳವನ್ನು ಆ ಚೌಕಟ್ಟಿನಲ್ಲಿಯೇ ವಿಶ್ಲೇಷಿಸಿ, ಅದರ ಸಾಧ್ಯತೆಗಳನ್ನು ಶೋಧಿಸಿದ್ದು ಮಾರ್ಕ್ಸ್‌ನ ಕೊಡುಗೆಯಾಗಿತ್ತು. ಈಗಲೂ ಅದೇ ರೀತಿಯಲ್ಲಿ ಬಂಡವಾಳಶಾಹಿಯನ್ನು ಅದರ ಇಂದಿನ ಚಾರಿತ್ರಿಕ ಸಂದರ್ಭದಲ್ಲಿಟ್ಟು ವಿಶ್ಲೇಷಿಸಿದಾಗ ಮಾತ್ರ ಅದರ ಅಸಾಮಾನ್ಯ ಪ್ರಾಬಲ್ಯದ ಜೊತೆಗೆ ಅದರ ಆಂತರ್ಯದಲ್ಲೇ ಇರುವ ಬಿಕ್ಕಟ್ಟು ಹಾಗೂ ವೈರುಧ್ಯಗಳನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಇಂಥ ಸುಸಂಬದ್ಧ ವಿಶ್ಲೇಷಣೆಯನ್ನೆ ನಾನು critique ಎಂದು ಕರೆದಿದ್ದೇನೆ. ಈ ಹಿಂದೆ ಇಂಥ critiqueಗೆ ಹಿನ್ನಡೆಯಾಗಲು ಕಾರಣವೆಂದರೆ ಬಂಡವಾಳಶಾಹಿಯ ತನ್ನ ವೈರುಧ್ಯಗಳಿಂದ ತಾನೇ ಪತನಗೊಳ್ಳುತ್ತದೆಯೆನ್ನುವ ನಿರುಮ್ಮಳತೆ. ಇದರಿಂದಾಗಿ ತನಗೆ ಎದುರಾದ ಬಿಕ್ಕಟ್ಟನ್ನು ಬಂಡವಾಳಶಾಹಿ ಜಾಗತೀಕರಣದ ಮೂಲಕ ಪರಿಹರಿಸಿಕೊಳ್ಳುತ್ತದೆ ಎನ್ನುವುದನ್ನು, ಅಥವಾ ಅದು ಅನೇಕ 'ಅಗೋಚರ' ರೂಪಗಳನ್ನು ಪಡೆಯುತ್ತದೆ ಎನ್ನುವುದನ್ನು ಗ್ರಹಿಸಲು ಸಾಧ್ಯವಾಗಿರಲಿಲ್ಲ. ಒಂದು ಸರಳ ಹಾಗೂ ಆಂಶಿಕವಾದ ಉದಾಹರಣೆಯನ್ನು ತೆಗೆದುಕೊಳ್ಳುವುದಾದರೆ ಸೇವಾ ಕ್ಷೇತ್ರ (sevices sector) ಎಂದು ಕರೆಯಲಾಗುವ ಕ್ಷೇತ್ರದಲ್ಲಿ ಅಂತರ್‌ರಾಷ್ಟ್ರೀಯ ಬಂಡವಾಳಶಾಹಿ ಕಂಪನಿಗಳಿಗಾಗಿ ದುಡಿಯುವ ಸಹಸ್ರಾರು ಜನರು ತಮ್ಮನ್ನು ಕಾರ್ಮಿಕರೆಂದು ಗುರುತಿಸಿಕೊಳ್ಳುವುದಿಲ್ಲ. ಉತ್ಪಾದನಾ ಸಂಬಂಧಗಳ ಪರಿಭಾಷೆಯಲ್ಲಿ ವಿವರಿಸುವುದಾದರೆ ಇವರು ಮಾಹಿತಿ ತಂತ್ರಜ್ಞಾನ ಶ್ರಮಿಕರೇ ಹೌದು. ಪ್ರಸಿದ್ಧ ಸಾಹಿತ್ಯ ವಿಮರ್ಶಕರಾದ ಹರೀಶ್ ತ್ರಿವೇದಿಯವರು IT ಶ್ರಮಜೀವಿಗಳನ್ನು 'ಸೈಬರ್

ಕೂಲಿಗಳು' ಎಂದು ಕರೆದಾಗ ಉಂಟಾದ ಬಿರುಗಾಳಿಯನ್ನು ನೆನಪಿಸಿಕೊಳ್ಳಬಹುದು. ಹಳೆಯ ಸಾಮ್ರಾಜ್ಯಶಾಹಿಯು ವಸಾಹತುಗಳಿಂದ ಕೂಲಿಗಳನ್ನು ಕರೆದೊಯ್ದಿದ್ದರೆ, ಇಂದಿನ ಸಾಮ್ರಾಜ್ಯಶಾಹಿಯು ತನ್ನ ಆರ್ಥಿಕ ವಸಾಹತುಗಳಾಗಿರುವ ಇಂಡಿಯಾದಂಥ ದೇಶಗಳಲ್ಲಿರುವ ಪ್ರಜೆಗಳನ್ನು ಅವರಿದ್ದಲ್ಲಿಯೆ ಸೈಬರ್‌ಕೂಲಿಗಳನ್ನಾಗಿಸಿದೆ. ಪ್ರಾಮಾಣಿಕವಾಗಿ ಯೋಚಿಸಿದರೆ ಅವರು ಕುಶಲಕಾರ್ಮಿಕರೇ ಹೌದು ಮತ್ತು ಇಂಡಿಯಾದ ಮಧ್ಯಮ ವರ್ಗವು ಈ ಉದ್ಯೋಗಗಳಿಂದ ಅಪಾರ ಶ್ರೀಮಂತಿಕೆ ಬರುತ್ತದೆಯೆಂದು ಭಾವಿಸಿದ್ದರೂ ಈ ಕುಶಲಕರ್ಮಿಗಳೂ ಶೋಷಣೆಗೆ ಒಳಗಾಗಿದ್ದಾರೆ. ವಿಪರ್ಯಾಸವೆಂದರೆ ಅವರು ತಮ್ಮನ್ನು ಕಾರ್ಮಿಕರು ಅಥವಾ ಶ್ರಮಜೀವಿಗಳೆಂದು ಗುರುತಿಸಿಕೊಳ್ಳಲು ವಿರೋಧ ವ್ಯಕ್ತಪಡಿಸುತ್ತಾರೆ. ಹೀಗಾಗಿ ಇಂದಿನ ಬಂಡವಾಳಶಾಹಿಯು ಶ್ರಮಿಕವರ್ಗವನ್ನು ಇಲ್ಲವಾಗಿಸಿದೆಯೆಂದು ಅಥವಾ ಕಾರಖಾನೆ, ಬೃಹತ್ ಉದ್ದಿಮೆ ಮತ್ತು ಅಲ್ಲಿಯ ಸಂಘಟಿತ ಕಾರ್ಮಿಕರ ಚಿತ್ರಣವು ಬಂಡವಾಳಶಾಹಿಯ ಹಳೆಯ ಅವತಾರಕ್ಕೆ ಸಂಬಂಧಿಸಿದ್ದು, ಈಗ ಬಂಡವಾಳ ಹಾಗೂ ಶ್ರಮಿಕವರ್ಗವೆನ್ನುವ ಪರಿಕಲ್ಪನೆಗಳೇ ಅಪ್ರಸ್ತುತವೆಂದು ವಾದಿಸಲಾಗುತ್ತದೆ. ಇದು ಸಂಪೂರ್ಣವಾಗಿ ಭ್ರಮಾತ್ಮಕವಾದುದು. ಆಗುತ್ತಿರುವುದೇನೆಂದರೆ, ಭಾರತದ ಹಳ್ಳಿ, ಸಣ್ಣ ಊರುಗಳಿಂದ ನೆಲ ಅಥವಾ ಉದ್ಯೋಗ ಕಳೆದುಕೊಂಡು ಅಪಾರವಾದ ಶ್ರಮಿಕವರ್ಗವು ಮಹಾನಗರಗಳ ಕೊಳೆಗೇರಿಗೆ ನಿರಂತರವಾಗಿ ಗುಳೇ ಹೋಗಿ ಅಲ್ಲಿಯ ಅಸಂಘಟಿತ ಕಾರ್ಮಿಕವರ್ಗವಾಗಿ 'ಅಗೋಚರ'ವಾಗಿ ಬದುಕುತ್ತಿದೆ. ಕಾರ್ಪೊರೇಟ್ ಬಂಡವಾಳಶಾಹಿಯು ಅತ್ಯಂತ ಎಚ್ಚರದಿಂದ ಈ ಅಸಂಘಟಿತ ಶ್ರಮಿಕವರ್ಗವು ಸಂಘಟಿತವಾಗದಂತೆ contract labour, casual labour ಮುಂತಾದ ತಂತ್ರಗಳನ್ನು ಬಳಸುತ್ತದೆ. ಸರಿಯಾಗಿ ಲೆಕ್ಕ ಹಾಕಿದರೆ ಭಾರತದ ಶ್ರಮಿಕ ವರ್ಗದ ಸಂಖ್ಯೆಯು ಇತ್ತೀಚಿನ ದಶಕಗಳಲ್ಲಿ ಅಪಾರ ಸಂಖ್ಯೆಯಲ್ಲಿ ಬೆಳೆದಿದೆ. ಆದರೆ ಅದು 'ಅಗೋಚರ'ವಾಗಿ ಉಳಿಯುತ್ತಿದೆ. ಪ್ರತಿದಿನವೂ ಸಾವಿರಾರು ರೈತರು ತಮ್ಮ ಭೂಮಿಯನ್ನು ಕಳೆದುಕೊಂಡು ಆದಿವಾಸಿಗಳು ಕಾಡುಗಳನ್ನು ಕಳೆದುಕೊಂಡು ನಗರಗಳಿಗೆ ವಲಸೆ ಹೋಗಿ ಅಸಂಘಟಿತ ಕಾರ್ಮಿಕರಾಗುತ್ತಿದ್ದಾರೆ. ಇದೇ ಹೊತ್ತಿಗೆ ಶಿಕ್ಷಿತ, ಸಂಘಟಿತ ಹಾಗೂ ಸ್ವಲ್ಪಮಟ್ಟಿಗಿನ ಆರ್ಥಿಕ ಭದ್ರತೆಯಿದ್ದ ಕಾರ್ಮಿಕರು ಹಾಗೂ ಸೇವಾವಲಯದವರು ಈ ಹೊಸ ಉದಾರವಾದಿ ನೀತಿಗಳಿಂದಾಗಿ ಕ್ರಮೇಣವಾಗಿ ದುರ್ಬಲವಾಗಿ ಖಾಸಗೀಕರಣಕ್ಕೆ ಬಲಿಯಾದ/ ಬಲಿಯಾಗುತ್ತಿರುವ ಸಾರ್ವಜನಿಕ ಸಂಸ್ಥೆಗಳಲ್ಲಿ ಹೋರಾಡುತ್ತಿದ್ದಾರೆ. (ಉದಾಹರಣೆಗೆ ಅಂಚೆ, ವಿಮೆ, ಸಾರ್ವಜನಿಕ ವಲಯದ ಉದ್ದಿಮೆಗಳು ಮುಂತಾದವುಗಳ ಕೆಲಸಗಾರರು). ಗಾರ್ಮೆಂಟ್ ಫ್ಯಾಕ್ಟರಿಗಳ ಅಸಂಘಟಿತ ಮಹಿಳಾ ಕಾರ್ಮಿಕರು, ಅಂಗನವಾಡಿ ಕಾರ್ಯಕರ್ತೆಯರು, ಬಿಸಿಯೂಟ ಯೋಜನೆಯ ಕೆಲಸಗಾರರು ಇವರೆಲ್ಲರನ್ನು ಸೇರಿಸಿದರೆ ನಮಗೆ ನಿಜವಾದ ಚಿತ್ರವು ದೊರೆಯುತ್ತದೆ. ಹೀಗಾಗಿ ಇಂದಿನ ಸ್ವರೂಪವನ್ನು ಮೂರ್ತವಾಗಿ ಮರುಚಿತ್ರಿಸಿಕೊಳ್ಳಬೇಕಾಗಿದೆ. ಏಕೆಂದರೆ ಅವೆರಡೂ ಬಹಳ ಗಟ್ಟಿಯಾಗಿ ಇವೆ.

## ಅಭಿವೃದ್ಧಿ ಎಂಬ ಆಕರ್ಷಕ ಸಂಕಥನ

ಇದನ್ನು ಸಾಧ್ಯವಾಗಿಸಲು ಮಾರ್ಕ್ಸ್‌ವಾದದ ಮುಖ್ಯ ಒಳನೋಟವನ್ನು ಬಳಸಿಕೊಳ್ಳಬೇಕಾಗಿದೆ. ಅದೇನೆಂದರೆ ಬಂಡವಾಳಶಾಹಿಯ ಯಾವುದೇ ರೂಪವನ್ನು ಪಡೆದುಕೊಂಡರೂ ಅದು ಅನಿವಾರ್ಯವಾಗಿಯೇ ಅಸಮಾನತೆಯನ್ನು ಹೆಚ್ಚಿಸಲೇಬೇಕು,

ಅನೇಕ ಜನಸಮುದಾಯಗಳನ್ನು ತಬ್ಬಲಿ ಮಾಡಲೇಬೇಕು. ಇದನ್ನು ತಪ್ಪಿಸಲಾಗದು. ಸಮಕಾಲೀನ ಬಂಡವಾಳವು ಇಂದಿನ ರೂಪದಲ್ಲಿ 'ಸಾಮಾಜಿಕ ಕಲ್ಯಾಣ'ದ ಗುಣವನ್ನು ಹೊಂದಿರುತ್ತದೆಯೆನ್ನುವುದು ಒಪ್ಪಲೂ ಸಾಧ್ಯವಿಲ್ಲ. ಹೀಗೆ ಹೇಳುತ್ತಿರುವುದು ಒಂದು ನೈತಿಕ ನಿಲುವಿನಿಂದಲ್ಲ. ಒಂದು ವ್ಯವಸ್ಥೆಯಾಗಿ ಬಂಡವಾಳಶಾಹಿಯಲ್ಲಿರುವ ಆಂತರಿಕ ತರ್ಕವೇ ಇದನ್ನು ಅನಿವಾರ್ಯವಾಗಿಸುತ್ತದೆ. ಇದಕ್ಕೆ ಪೂರಕವಾದ ವಸ್ತುಸಂಗತಿಗಳ (facts) ಕೊರತೆ ಏನು ಇಲ್ಲ. ಉದಾಹರಣೆಗೆ ಭಾರತದ ಬಗ್ಗೆ ಲಭ್ಯವಿರುವ ಯಾವುದೇ ಅಂಕಿಸಂಖ್ಯೆಗಳನ್ನು (ಉದಾ hunger index) ನೋಡಿದರೂ ಜಾಗತೀಕರಣದ ಹಂತದ ಬಂಡವಾಳಶಾಹಿಯು ತಂದಿರುವ ಹಸಿವು ಬಡತನಗಳ ಹೆಚ್ಚಳದ ಬಗ್ಗೆ ಯಾರಿಗೂ ಸಂಶಯವಿರಲಾರದು. ಆದರೆ ಬಂಡವಾಳವು 'ಅಭಿವೃದ್ಧಿ' ಎನ್ನುವ ಆಕರ್ಷಕವಾದ ಸಂಕಥನವನ್ನು ಅದೆಷ್ಟು ಪ್ರಬಲವಾಗಿ ಪ್ರಚಾರ ಮಾಡಿದೆಯೆಂದರೆ ಯಾವ ವಸ್ತುಸಂಗತಿಗಳಿಂದಲೂ ಜಾಗತೀಕರಣದ ಆರಾಧಕರು ವಿಚಲಿತರಾಗುವುದಿಲ್ಲ.

### ತೆನೆಗಳಲ್ಲಿ ಮೂಡಿದ ಕಾಳುಗಳಂತೆ....

ಮೇಲೆ ಚರ್ಚಿಸಿದ ವಿವರಗಳನ್ನು ಸಂಗ್ರಹವಾಗಿದ್ದು ನೋಡಿದರೆ ನಿಚ್ಚಳವಾಗಿ ಕಾಣುವ ಅಂಶಗಳು ಹೀಗಿವೆ:

1) ಮೊದಲಿನಂತೆ ಈಗಲೂ ಕೂಡ ಬಂಡವಾಳವು ವಸಾಹತುಶಾಹಿಯ (ನವ ವಸಾಹತುಶಾಹಿಯ) ಬೆಂಬಲದಿಂದಲೇ ತನ್ನ ಆಂತರಿಕ ಬಿಕ್ಕಟ್ಟುಗಳನ್ನು ಪರಿಹರಿಸಿಕೊಳ್ಳುತ್ತಿದೆ. ಆದರೆ ಅದರ ಆಂತರಿಕ ಬಿಕ್ಕಟ್ಟುಗಳು ಇನ್ನೂ ಆಳವಾಗುತ್ತಿವೆ. ಜಾಗತೀಕರಣದ ವಿಜೃಂಭಣೆ ಏನೇ ಇದ್ದರೂ, ಸಮಕಾಲೀನ ಬಂಡವಾಳ ಅಸ್ವಸ್ಥ ಸ್ಥಿತಿಯಲ್ಲಿದೆ. ಅದು ಸೃಷ್ಟಿಸಿರುವ ಜಾಗತಿಕ ವ್ಯವಸ್ಥೆಯು ಅದೆಷ್ಟು ಪ್ರಬಲವಾಗಿ ಕಂಡರೂ ಅದು ಸರಣಿರೂಪದ ಬಿಕ್ಕಟ್ಟುಗಳಿಂದಾಗಿ ಕುಸಿಯುತ್ತಲೇ ಇರುತ್ತದೆ.

2) ಖಂಡಿತವಾಗಿಯೂ ಇಂದಿನ ಬಂಡವಾಳದ ರೂಪ ಬದಲಾಗಿದೆ. post-fordist ಎಂದು ಕರೆಯಲಾಗುವ ಇಂದಿನ ಹಂತದಲ್ಲಿ ಅದು ವಿಘಟಿತವಾದ, ಹರಡಿಕೊಂಡ ಮತ್ತು ಆಂಶಿಕವಾಗಿ ಅಗೋಚರವೂ ಆದಂತೆ ಕಾಣುವ ರೂಪದಲ್ಲಿದೆ. ಆದರೆ ಸ್ವರೂಪದಲ್ಲಿ ಬದಲಾಗಿದ್ದರೂ ಮೂಲಸ್ವಭಾವದಲ್ಲಿ ಬದಲಾಗಿಲ್ಲ. ಹೀಗಾಗಿ ಬಂಡವಾಳದ ಸಮಾಜವಾದಿ ವಿಮರ್ಶೆಯು ಅಪ್ರಸ್ತುತವಾಗಿಲ್ಲ. ಈ ವಿಮರ್ಶೆ ನಾವು ನಿರೀಕ್ಷಿಸುವಷ್ಟು ಸಮಗ್ರವಾಗಿ ಬಂದಿಲ್ಲವೆಂದು ಈ ಲೇಖನದಲ್ಲಿ ವಾದಿಸಲಾಗಿದೆ.

3) ಬಂಡವಾಳ ಹಾಗೂ ಅದರ ವಿರೋಧಿಗಳ ಪ್ರಸ್ತುತ ಸ್ವರೂಪವನ್ನು ಹೆಚ್ಚು ಖಚಿತವಾಗಿ ಅರ್ಥಮಾಡಿಕೊಳ್ಳಬೇಕಾಗಿದೆ. ಇದರ ಮೂಲಕ ಬಂಡವಾಳದ ವಿಮರ್ಶೆಯನ್ನು ಹೆಚ್ಚು ಗಟ್ಟಿಯಾದ ನೆಲೆಗಳಲ್ಲಿ ನಿಲ್ಲಿಸಬಹುದಾಗಿದೆ.

4) ಸಮಾಜವಾದವು ತನ್ನ ಹುಟ್ಟಿನಿಂದ ಹಾಗೂ ಬಂಡವಾಳದ ಹುಟ್ಟಿನ ಕಾಲದಿಂದಲೇ ಅತ್ಯಂತ ಪ್ರಬಲವಾದ ಬಂಡವಾಳ ವಿರೋಧಿ ನೈತಿಕ ವಿಮರ್ಶೆಯನ್ನು ಕಟ್ಟಿಕೊಂಡು ಬಂದಿದೆ. ಇತ್ತೀಚೆಗೆ ಈ ನೈತಿಕ ವಿಮರ್ಶೆಯನ್ನು ಅಪ್ರಸ್ತುತ, ಅತಿ, ಆದರ್ಶವಾದಿ ಹೀಗೆಂದು ವರ್ಣಿಸಿ ದುರ್ಬಲಗೊಳಿಸುವ ಪ್ರಯತ್ನವನ್ನು ಮಾಡಲಾಗುತ್ತಿದೆ.

ನಿಜವೇನೆಂದರೆ ಈ ನೈತಿಕ ವಿಮರ್ಶೆಯು ಇಂದು ಎಂದಿಗಿಂತಲೂ ಹೆಚ್ಚು ಪ್ರಸ್ತುತವಾಗಿದೆ. ಜಾಗತೀಕರಣದ ಹಂತದಲ್ಲಿ ಬಂಡವಾಳಶಾಹಿಯು ಮನುಷ್ಯ ಸಂವೇದನೆಯನ್ನು ಬರಡುಗೊಳಿಸಿರುವ ರೀತಿ ಮನುಷ್ಯ ಇತಿಹಾಸದಲ್ಲಿಯೇ ಹೋಲಿಕೆ ಇಲ್ಲದಂಥದು. ಸಮಾಜವಾದವು ಅಪೇಕ್ಷಿಸುವ ಸಾಮುದಾಯಿಕ ಸಂವೇದನೆಯನ್ನು ನಾಶ ಮಾಡಿ ಅದರ ಬದಲಾಗಿ ತೀರಾ ವ್ಯಕ್ತಿನಿಷ್ಠ ಸ್ವಾರ್ಥಕೇಂದ್ರಿತ atmostic ಆದ ಸಂವೇದನೆಯನ್ನು ಅದು ಸೃಷ್ಟಿಸಿದೆ. ಇಂಥ ಸನ್ನಿವೇಶದಲ್ಲಿ ಕಾರ್ಲ್‌ಮಾರ್ಕ್ಸ್‌ನ ಬರಹದ, ಕಮ್ಯೂನಿಸ್ಟ್ ಮ್ಯಾನಿಫೆಸ್ಟೋ ಬರೆಹದ ಹಾಗೂ ಅಸಂಖ್ಯಾತ ಸಮಾಜವಾದಿಗಳ ಬರೆಹದ ನೈತಿಕ ಆಕ್ರೋಶವು ಇಂದಿನ ಸಂದರ್ಭದಲ್ಲಿ ಅತ್ಯಂತ ಅವಶ್ಯಕವಾಗಿ ಕಾಣುತ್ತದೆ.

ಪ್ರಸ್ತುತ ಲೇಖನದ ಈ ಭಾಗವನ್ನು Michael Hardt ಹಾಗೂ Antanio Nesri ಅವರು ಬರೆದ ಕುತೂಹಲಕಾರಿ ಕೃತಿಯಾದ Empireನ ಪ್ರಸ್ತಾಪದೊಂದಿಗೆ ಮುಗಿಸುತ್ತಿದ್ದೇನೆ. ಈ ಕೃತಿಯ ಮುಖ್ಯವಾದವೆಂದರೆ ಇಂದಿನ ಹಂತದಲ್ಲಿ ಬಂಡವಾಳವು ತನ್ನ ನವವಸಾಹತುಶಾಹಿ ಹಂತವನ್ನೂ ದಾಟಿ ಬಂದಿದೆ. ಏಕೆಂದರೆ ವಸಾಹತುಶಾಹಿಯು ವಸಾಹತುದೇಶಗಳ ರಾಷ್ಟ್ರಪ್ರಭುತ್ವಗಳನ್ನು, ಅವುಗಳ ಭೂಪ್ರದೇಶದ ಸ್ವಾಯತ್ತತೆಯನ್ನು ಅನಿವಾರ್ಯವಾಗಿ ಗುರುತಿಸಿ ಮಾನ್ಯತೆಯನ್ನು ಕೊಡಲೇಬೇಕಾಗುತ್ತದೆ. ಅಂದರೆ ವಸಾಹತುಶಾಹಿಯ ಮೂಲ ರಾಷ್ಟ್ರವು ಇತರ ರಾಷ್ಟ್ರಗಳ ಮೇಲೆ ತನ್ನ ಅಧಿಕಾರವನ್ನು ಚಲಾಯಿಸಬೇಕಾಗುತ್ತದೆ. ಅಷ್ಟರಮಟ್ಟಿಗೆ ಒಳಗೂ–ಹೊರಗೂ, ಮೂಲರಾಷ್ಟ್ರ–ವಸಾಹತು ಇವುಗಳ ಪರಿಕಲ್ಪನೆಯು ಅನಿವಾರ್ಯವಾಗಿರುತ್ತದೆ. ಆದರೆ ಇವೆಲ್ಲವನ್ನು ದಾಟಿಕೊಂಡು ಬಂದಿರುವ ಇಂದಿನ ಬಂಡವಾಳವು ಈಗ ದೇಶ ಪ್ರಭುತ್ವಗಳು, ರಾಷ್ಟ್ರದ ಸೀಮೆಗಳು ಇದಾವುದನ್ನೂ ಮಾನ್ಯಮಾಡದ ಮಾರುಕಟ್ಟೆಯನ್ನು ಅನುಷ್ಠಾನಕ್ಕೆ ತಂದಿದೆ. ಇದನ್ನು ಕೃತಿಕಾರರು Empire ಎಂದು ಕರೆಯುತ್ತಾರೆ. ಇದು ಸಾಮ್ರಾಜ್ಯಶಾಹಿಯ ಸಾಮ್ರಾಜ್ಯವಲ್ಲ, ಸಾಮಕಾಲೀನ ಕಾರ್ಪೋರೇಟ್ ಬಂಡವಾಳದ ಹೊಸ ವ್ಯವಸ್ಥೆಯಾದ ಸಾಮ್ರಾಜ್ಯ. ಇಂದಿನ ಅವಶ್ಯಕತೆಯೆಂದರೆ ಈ ಸಾಮ್ರಾಜ್ಯದ ವಿಮರ್ಶೆ.

*

---

ರಾಜೇಂದ್ರ ಚೆನ್ನಿ, ಮುಖ್ಯಸ್ಥರು, ಇಂಗ್ಲೀಷ್ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ



# ಅಭಿವೃದ್ಧಿ ಮತ್ತು ಸಮಾನತೆ

–ಟಿ.ಆರ್. ಚಂದ್ರಶೇಖರ್

'ಭಾರತದಲ್ಲಿ ಹೊಚ್ಚಹೊಸ ಜನತಾಂತಿಕ ರಾಜಕಾರಣ ಬೇಕು ಎಂದಾದರೆ ಅದು ಸಮಾಜದಲ್ಲಿ ತೀವ್ರ ದುಸ್ಥಿತಿ ಅನುಭವಿಸುತ್ತಿರುವ ಜನರ ಹಿತಾಸಕ್ತಿಗಳು, ಹಕ್ಕೊತ್ತಾಯಗಳು ಮತ್ತು ಹಕ್ಕುಗಳು ಆದ್ಯತೆಯ ಸಂಗತಿಗಳನ್ನಾಗಿ ಮಾಡುವುದರಿಂದ ಮಾತ್ರ ಸಾಧ್ಯ'.

– ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್. 2013.

## ಪ್ರಸ್ತಾವನೆ

ಇಂದು ಎಲ್ಲ ದೇಶಗಳು ಜಿಡಿಪಿಯ ಅಂದರೆ ವರಮಾನದ ಬೆಳವಣಿಗೆ ಬಗ್ಗೆ ತುಂಬಾ ಜಾಗೃತವಾಗಿವೆ. ವರಮಾನದಲ್ಲಿನ ಏರಿಕೆಯನ್ನೇ ಅಭಿವೃದ್ಧಿಯೆಂದು ಸೈದ್ಧಾಂತಿಕವಾಗಿ ಮತ್ತು ಕಾರ್ಯನೀತಿ ಮಟ್ಟದಲ್ಲಿ ಪರಿಭಾವಿಸಿಕೊಂಡು ಬರಲಾಗಿದೆ. ನಮ್ಮವರೇ ಆದ ಸರ್. ಎಂ.ವಿಶ್ವೇಶ್ವರಯ್ಯ ಅವರು 'ಕೈಗಾರಕೀಕರಣ ಅಥವಾ ವಿನಾಶ' ಎಂಬ ಘೋಷಣೆಯನ್ನೇ ನೀಡಿದ್ದರು. ಹದಿನೆಂಟು-ಹತ್ತೊಂಬತ್ತನೇ ಶತಮಾನಗಳಲ್ಲಿ ಅಭಿವೃದ್ಧಿಯನ್ನು ಇಂಗ್ಲೆಂಡ್, ಜರ್ಮನಿ, ಜಪಾನ್ ಮುಂತಾದ ದೇಶಗಳೆಲ್ಲ ಕೈಗಾರಿಕಾ ಕ್ರಾಂತಿ ಮೂಲಕ

ಇತ್ತೀಚಿಗೆ ಅಭಿವೃದ್ಧಿಯನ್ನು ಹಕ್ಕುಗಳ ಪರಿಭಾಷೆಯಲ್ಲಿ ಪರಿಭಾವಿಸಿಕೊಳ್ಳುವ ಕ್ರಮವೂ ಆರಂಭವಾಗಿದೆ. ಅಭಿವೃದ್ಧಿ ಅನ್ನುವುದು ಹಕ್ಕಿನ ಸಂಗತಿಯೇ ವಿನಾ ಹಂಗಿನ ಸಂಗತಿಯಲ್ಲ. ನಾವು ಮನುಷ್ಯರು ಎಂಬ ಕಾರಣಕ್ಕೆ ಸಮಾಜದಲ್ಲಿ ಯಾರೂ ಕೂಡ ಬಡತನಕ್ಕೆ, ಹಸಿವಿಗೆ ಒಳಗಾಗಬಾರದು. ಅಭಿವೃದ್ಧಿಯಲ್ಲಿ ಜನರು ಕೇವಲ ಸಂಪನ್ಮೂಲ ಮಾತ್ರ ಅಲ್ಲ. ಅವರು ಅಭಿವೃದ್ಧಿಯ ಹರಿಕಾರರು ಹೇಗೋ ಅದೇ ರೀತಿಯಲ್ಲಿ ಅವರು ಅಭಿವೃದ್ಧಿಯನ್ನು ಅನುಭವಿಸುವವರೂ ಆಗಿದ್ದಾರೆ. 'ಜನರಿಗಾಗಿ ಅಭಿವೃದ್ಧಿಯೇ ವಿನಾ ಅಭಿವೃದ್ಧಿಗಾಗಿ ಜನರಲ್ಲ' ಎಂಬ ಸಂದೇಶವನ್ನು ಪ್ರಬಂಧ ನೀಡುತ್ತದೆ. ಬಹುಮುಖಿ ನೆಲೆಯಲ್ಲಿ ಸಮಾನತೆಯನ್ನು ಪರಿಗಣಿಸದೆ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವುದು ಸಾಧ್ಯವಿಲ್ಲ. ಸಮಾನತೆಯು ಅಭಿವೃದ್ಧಿಯ ಜೀವದ್ರವ. 'ಅಭಿವೃದ್ಧಿಯ ನಂತರ ಸಮಾನತೆ' ಎಂಬ ಮಾತನ್ನು ಒಪ್ಪುವುದು ಅಸಾಧ್ಯ. ಸಮಾನತೆಯೇ ಅಭಿವೃದ್ಧಿ ಎಂಬ ತತ್ವವು ಇಲ್ಲಿ ಮಾರ್ಗದರ್ಶಿ ಸೂತ್ರವಾಗಿದೆ.

ಸಮಾನತೆ ಅನ್ನುವುದು ಕೇವಲ ವರಮಾನದಲ್ಲಿನ ವರ್ಗ ಸಂಬಂಧದ ಸಂಗತಿ ಮಾತ್ರವಲ್ಲ. ಅಲ್ಲಿ ಲಿಂಗ ಸಮಾನತೆಯ ಪ್ರಶ್ನೆಯಿದೆ. ಅವಕಾಶಗಳಲ್ಲಿ ಸಮಾನತೆ, ಸ್ವಾತಂತ್ರ್ಯದಲ್ಲಿ ಸಮಾನತೆ, ಜಾತಿ ಸಮಾನತೆ, ಪ್ರಾದೇಶಿಕ ಸಮಾನತೆ, ಅಂತರ-ತಲೆಮಾರು ಸಮಾನತೆ ಮುಂತಾದ ಸಂಗತಿಗಳನ್ನು ಅದು ಒಳಗೊಂಡಿದೆ. ಸಾಮಾಜಿಕ ನ್ಯಾಯವನ್ನು ಬಿಟ್ಟು ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವುದು ಮರಗಳಿಲ್ಲದೆ ಕಾಡನ್ನು ಪರಿಭಾವಿಸಿಕೊಂಡಂತೆ. ಅಭಿವೃದ್ಧಿಯ ಮೂಲ ಗುರಿ ನ್ಯಾಯಬದ್ದ ಸಮಾಜವನ್ನು ಸ್ಥಾಪಿಸುವುದು. ನಮ್ಮ ಸಂದರ್ಭದಲ್ಲಿ ಅಂದರೆ ಅಸಮಾನತೆ, ಶ್ರೇಣೀಕರಣ, ಪುರುಷಶಾಹಿತ್ವ, ಯಾಜಮಾನಿಕೆಯಿಂದ ಕೂಡಿರುವ ಸಮಾಜದಲ್ಲಿ ಸಾಮಾಜಿಕ ನ್ಯಾಯವನ್ನು ಅನುಸರಿಸದೆ ಅಭಿವೃದ್ಧಿಯನ್ನು ಸಾಧಿಸಿಕೊಳ್ಳಲು ಬರುವುದಿಲ್ಲ.

## 1. ವರಮಾನದ (ಜಿಡಿಪಿ) ಏರಿಕೆಯು ಏಕೆ ಅಭಿವೃದ್ಧಿಯಲ್ಲ?

ಅಭಿವೃದ್ಧಿಗೆ ವರಮಾನದಲ್ಲಿನ ಏರಿಕೆ ಅಗತ್ಯ. ಅದಿಲ್ಲದೆ ಅಭಿವೃದ್ಧಿಯನ್ನು ಸಾದಿಸಿಕೊಳ್ಳಲು ಬರುವುದಿಲ್ಲ. ಆದರೆ ವರಮಾನದಲ್ಲಿನ ಬೆಳವಣಿಗೆಯೇ ಅಭಿವೃದ್ಧಿಯಲ್ಲ. ಅದು ಅಭಿವೃದ್ಧಿಯ ಸಾಧನ. ವರಮಾನಕ್ಕೆ ತನ್ನದೇ ಆದ ಉಪಯುಕ್ತತೆ ಎನ್ನುವುದಿಲ್ಲ. ವರಮಾನದಲ್ಲಿ ಅತ್ಯುನ್ನತ ಸ್ಥಾನ ಸಾಧಿಸಿಕೊಂಡ ದೇಶಗಳಲ್ಲಿ ಜನರ ಬದುಕು ದುಸ್ಥಿತಿಯಲ್ಲಿರುವುದನ್ನು ಗುರುತಿಸಬಹುದು. ವರಮಾನದಲ್ಲಿ ಕೆಳಮಟ್ಟದಲ್ಲಿದ್ದರೂ ಜನರ ಬದುಕನ್ನು ಸಮೃದ್ಧಗೊಳಿಸಿಕೊಂಡಿರುವ ದೇಶಗಳನ್ನು ನಾವು ನೋಡಬಹುದಾಗಿದೆ. ನಮ್ಮ ದೇಶದಲ್ಲಿ ಇದಕ್ಕೆ ಹರಿಯಾಣ ಮತ್ತು ಕೇರಳ ರಾಜ್ಯಗಳು ಉತ್ತಮ ಉದಾಹರಣೆಗಳು. ಅದೇ ರೀತಿಯಲ್ಲಿ ನಮ್ಮ ರಾಜ್ಯದಲ್ಲೇ ಹಾಸನ ಮತ್ತು ಬಳ್ಳಾರಿ ಜಿಲ್ಲೆಗಳು ಇದಕ್ಕೆ ನಿದರ್ಶನವಾಗಿವೆ. ಹರಿಯಾಣ ಮತ್ತು ನಮ್ಮ ರಾಜ್ಯದಲ್ಲಿನ ಬಳ್ಳಾರಿ ವರಮಾನದಲ್ಲಿ ಶ್ರೀಮಂತವಾಗಿವೆ. ವರಮಾನದಲ್ಲಿ ಅತ್ಯುತ್ತಮ ಮಟ್ಟವನ್ನು ಸಾಧಿಸಿಕೊಂಡಿವೆ. ಆದರೆ ವರಮಾನದಲ್ಲಿ ಕೆಳಮಟ್ಟದಲ್ಲಿದ್ದರೂ ಕೇರಳ ಮತ್ತು ಹಾಸನ ಜಿಲ್ಲೆಯಲ್ಲಿ ಜನರ ಬದುಕು ಹರಿಯಾಣ ಮತ್ತು ಬಳ್ಳಾರಿಗಳಲ್ಲಿರುವುದಕ್ಕಿಂತ ಉತ್ತಮವಾಗಿದೆ.

**ಕೋಷ್ಟಕ–1**

ವರಮಾನ ಅಭಿವೃದ್ಧಿ ಮತ್ತು ಮಾನವ ಅಭಿವೃದ್ಧಿ: ಕೆಲವು ನಿದರ್ಶನಗಳು

| ವಿವರಗಳು | ಹರಿಯಾಣ | ಕೇರಳ | ಬಳ್ಳಾರಿ | ಹಾಸನ |
|---|---|---|---|---|
| ತಲಾ ವರಮಾನ: 2010–2011 | ರೂ.94,464 | ರೂ.7,1434 | ರೂ.74,442 | ರೂ.46,064 |
| ಸಾಕ್ಷರತೆ: 2011 | ಶೇ.76.64 | ಶೇ93.91 | ಶೇ.67.43 | ಶೇ.76.04 |
| ಮಹಿಳಾ ಸಾಕ್ಷರತೆ: 2011 | ಶೇ.70.73 | ಶೇ91.98 | ಶೇ.58.09 | ಶೇ.68.60 |
| ಜೀವನಾಯುಷ್ಯ. | 67 ವರ್ಷಗಳು | 73.4 ವರ್ಷಗಳು | 66.1 ವರ್ಷಗಳು | 65.2 ವರ್ಷಗಳು |
| ಜನಸಂಖ್ಯೆಯ ಬೆಳವಣಿಗೆ ಪ್ರಮಾಣ (ಶೇ.) | ಶೇ.19.9 | ಶೇ.4.86 | ಶೇ.20.99 | ಶೇ.3.18 |
| ಮಾನವ ಅಭಿವೃದ್ಧಿ ಸೂಚ್ಯಂಕ | 0.644 (2005) | 0.920 (2005) | 0.617 (2001) | 0.639 (2001) |
| ಸಮಗ್ರ ದುಸ್ಥಿತಿ ಸೂಚ್ಯಂಕ. 2012 | 0.395 | 0.095 | ರಾಜ್ಯ ಸಮಗ್ರ ದುಸ್ಥಿತಿಯಲ್ಲಿ ಜಿಲ್ಲೆಯ ಪಾಲು ಶೇ4.94 | ರಾಜ್ಯದ ಸಮಗ್ರ ದುಸ್ಥಿತಿಯಲ್ಲಿ ಜಿಲ್ಲೆಯ ಪಾಲು. ಶೇ2.07 |
| ಲಿಂಗ ಅನುಪಾತ | 877 | 1084 | 983 | 1010 |
| ಕಾಣೆಯಾದ ಮಹಿಳೆಯರು | ಇದ್ದಾರೆ | ಇಲ್ಲ | ಇದ್ದಾರೆ | ಇಲ್ಲ |
| ಒಟ್ಟು ದುಡಿಮೆಗಾರರಲ್ಲಿ ದಿನಗೂಲಿ ಕೃಷಿ ದುಡಿಮೆಗಾರರ ಪ್ರಮಾಣ:2011 | ಶೇ51.56 | ಶೇ23.26 | ಶೇ36.36 | ಶೇ18.36 |

ಅನೇಕ ದೃಷ್ಟಿಯಿಂದ ಮೇಲಿನ ಮಾಹಿತಿಯು ಕಣ್ಣು ತೆರೆಸುವಂತಿದೆ. ವರಮಾನದಲ್ಲಿ ಹರಿಯಾಣ ರಾಜ್ಯ ಮತ್ತು ಬಳ್ಳಾರಿ ಜಿಲ್ಲೆ ಮುಂದಿವೆ. ಆದರೆ ಉಳಿದ ಸೂಚಿಗಳಲ್ಲಿ ಅವುಗಳ ಸ್ಥಿತಿಯು ಕೇರಳ ರಾಜ್ಯ ಮತ್ತು ಹಾಸನ ಜಿಲ್ಲೆಗಳಿಗಿಂತ ಕೆಳಮಟ್ಟದಲ್ಲಿದೆ. ಹರಿಯಾಣ ರಾಜ್ಯ ಮತ್ತು ಬಳ್ಳಾರಿ ಜಿಲ್ಲೆ ಜನಸಂಖ್ಯಾ ಬೆಳವಣಿಗೆಯಲ್ಲಿ ಕೇರಳ ಮತ್ತು ಹಾಸನಗಳಿಗಿಂತ ಬಹಳ ಹಿಂದುಳಿದಿವೆ. ಹರಿಯಾಣ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಜನರ ಬದುಕು ಉತ್ತಮವಾಗುತ್ತಿಲ್ಲ ಎಂಬುದಕ್ಕೆ ದಿನಗೂಲಿ ದುಡಿಮೆಗಾರರ ಪ್ರಮಾಣವನ್ನು ನೋಡಬಹುದು. ಸಮಗ್ರ

ದುಸ್ಥಿತಿ ಸೂಚ್ಯಂಕದಲ್ಲಿ ಕೇರಳ ಮತ್ತು ಹಾಸನಗಳಿಗಿಂತ ಹರಿಯಾಣ ಮತ್ತು ಬಳ್ಳಾರಿ ಕೆಳಮಟ್ಟದಲ್ಲಿವೆ. ವರಮಾನವೇ ಜನರ ಬದುಕಿನ ಮೊತ್ತವಲ್ಲ ಎಂಬ ಮೆಹಬೂಬ್ ಉಲ್ ಹಕ್‌ನ ಮಾತುಗಳಿಗೆ ಇಲ್ಲಿದೆ ನೋಡಿ ನಿದರ್ಶನ! ಈ ಹಿನ್ನೆಲೆಯಲ್ಲಿ ಅಮರ್ತ್ಯಸೇನ್‌ನ ಅಭಿವೃದ್ಧಿ ಕುರಿತ ಮಾತುಗಳನ್ನು ಗಮನಿಸಬೇಕು. ಅವನು ಹೇಳುವುದೇನೆಂದರೆ 'ಅಭಿವೃದ್ಧಿಯು ಯಾವಾಗಲೂ ಜನರ ಬದುಕನ್ನು ಸಮೃದ್ಧಗೊಳಿಸುವುದರ ಬಗ್ಗೆ ಕ್ರಿಯಾಶೀಲವಾಗಿರಬೇಕೇ ವಿನಾ ಆರ್ಥಿಕತೆಯ ಸಮೃದ್ಧತೆಯ ಬಗ್ಗೆ ಅಲ್ಲ'. ಅಭಿವೃದ್ಧಿಯಲ್ಲಿ ಜನರ ಆಹಾರ ಭದ್ರತೆಯು ಮುಖ್ಯವಾಗಿರಬೇಕೆ ವಿನಾ ದೇಶದ ಆಹಾರ ಭದ್ರತೆಯಲ್ಲ.

## 2. ಅಭಿವೃದ್ಧಿಯಲ್ಲಿ ಸಮಾನತೆ ಮೌಲ್ಯ ಏಕೆ ಮುಖ್ಯ?

ಈಗಾಗಲೆ ಹೇಳಿರುವಂತೆ ಸಮಾನತೆಯು ಅಭಿವೃದ್ಧಿಯ ಜೀವದ್ರವ. ಅಭಿವೃದ್ಧಿಯು ಎಲ್ಲ ಜನರನ್ನು ಒಳಗೊಳ್ಳದಿದ್ದರೆ ಅದು ಅಭಿವೃದ್ಧಿಯೇ ಅಲ್ಲ. ಯುಎನ್‌ಡಿಪಿಯು ತನ್ನ 1995ರ ಮಾನವ ಅಭಿವೃದ್ಧಿ ವರದಿಯಲ್ಲಿ 'ಅಭಿವೃದ್ಧಿಯು ಮಹಿಳೀಕರಣಗೊಳ್ಳದಿದ್ದರೆ ಅದಕ್ಕೆ ಅಪಾಯ ತಪ್ಪಿದ್ದಲ್ಲ' ಎಂದು ಹೇಳಿದಾಗ ಅಲ್ಲಿ ಒತ್ತು ಎಲ್ಲ ಜನರನ್ನು, ಮಹಿಳೆಯರನ್ನು ಸೇರಿಸಿಕೊಂಡು, ಒಳಗೊಳ್ಳುವುದರ ಬಗ್ಗೆ ಇತ್ತು ಎಂಬುದನ್ನು ವಿವರಿಸುವ ಅಗತ್ಯವಿಲ್ಲ. ಲಿಂಗ ಸಮಾನತೆ ಅನ್ನುವುದು ಒಂದು ಕಾಲಕ್ಕೆ ಮಹಿಳೆಯರಿಗೆ ಸಂಬಂಧಿಸಿದ ಸಂಗತಿಯಾಗಿತ್ತು. ಆದರೆ ಇಂದು ಅದರ ಬಗೆಗಿನ ನಮ್ಮ ದೃಷ್ಟಿ ಬದಲಾಗಿದೆ. ವಿಶ್ವ ಬ್ಯಾಂಕು ತನ್ನ 2012ರ ವಿಶ್ವ ಅಭಿವೃದ್ಧಿ ವರದಿಯಲ್ಲಿ ಲಿಂಗ ಸಮಾನತೆಯನ್ನು 'ಸ್ಮಾರ್ಟ್ ಎಕನಾಮಿಕ್ಸ್' ಎಂದು ಕರೆದಿದೆ. ಅಂದರೆ ಅದು ಅಭಿವೃದ್ಧಿಗೆ, ಆರ್ಥಿಕತೆಗೆ ಸಂಬಂಧಿಸಿದ ಸಂಗತಿ ಎಂಬುದನ್ನು ಅಲ್ಲಿ ಪ್ರತಿಪಾದಿಸಲಾಗುತ್ತಿದೆ. ಇಂದು ಮಹಿಳೆಯರು ಸಾಂಪ್ರದಾಯಿಕ, ಕೌಟುಂಬಿಕ, ವರ್ಗ ಸಂಬಂಧಿ, ಲಿಂಗ ಸಂಬಂಧಿ ತಾರತಮ್ಯಕ್ಕೆ, ಶೋಷಣೆಗೆ, ಹಿಂಸೆಗೆ ತುತ್ತಾಗುತ್ತಿದ್ದಾರೆ. ಲಿಂಗ ಸಮಾನತೆ ಅನ್ನುವುದು ಶ್ರೀಮಂತಿಕೆ ಅಥವಾ ಬಡತನಕ್ಕೆ ಸಂಬಂಧಿಸಿದ ಸಂಗತಿಯಲ್ಲ. ಮಹಿಳೆಯರಿಗೆ ಗೌರವ ನೀಡಬೇಕು ಎಂಬುದಕ್ಕೆ ಆರ್ಥಿಕತೆಯು ಶ್ರೀಮಂತವಾಗಬೇಕಾಗಿಲ್ಲ. ಆಕೆಯನ್ನು 'ತಾಯಿ' ಅಥವಾ 'ಹೆಂಡತಿ' ಎಂದು ಪರಿಗಣಿಸುವುದಕ್ಕೆ ಪ್ರತಿಯಾಗಿ 'ಒಬ್ಬ ವ್ಯಕ್ತಿ' ಎಂಬುದಾಗಿ ಪರಿಭಾವಿಸಿಕೊಳ್ಳುವುದರ ಮೂಲಕ ಲಿಂಗ ಸಮಾನತೆಯತ್ತ ಒಂದು ಹೆಜ್ಜೆ ಸಾಗಬಹುದು. ಮಹಿಳೆಯ ಜವಾಬುದಾರಿ ಕೇವಲ ಗಂಡ, ಮಕ್ಕಳು, ಕುಟುಂಬ ಮಾತ್ರವಲ್ಲ ಅನ್ನುವುದನ್ನು ಒಪ್ಪಿಕೊಳ್ಳುವುದು ಲಿಂಗ ಸಮಾನತೆಯತ್ತ ಮತ್ತೊಂದು ಹೆಜ್ಜೆಯಾದೀತು. ಲಿಂಗ ಸಂಬಂಧಿ ಶ್ರಮ ವಿಭಜನೆಯನ್ನು ತಿರಸ್ಕರಿಸುವುದು ಅದರ ಇನ್ನೊಂದು ಹೆಜ್ಜೆಯಾಗುತ್ತದೆ. ಲಿಂಗ ಸಮಾನತೆಯಿಲ್ಲದ ಅಭಿವೃದ್ಧಿಯು ಕೇವಲ ಅಪೂರ್ಣವಷ್ಟೇ ಅಲ್ಲ, ಅದು ಅಭಿವೃದ್ಧಿಯೇ ಅಲ್ಲ.

## 3. ಸಾಮಾಜಿಕ ನ್ಯಾಯ ಸಿದ್ಧಾಂತ

ಸಾಮಾನ್ಯವಾಗಿ ಜನರು ವರಮಾನದ, ಉತ್ಪಾದನೆಯ, ಅನುಭೋಗದ, ಬಂಡವಾಳ ಹೂಡಿಕೆಯ 'ವೃದ್ಧಿ'ಯ ಬಗ್ಗೆ ಹೆಚ್ಚು ಗಮನ ನೀಡುತ್ತಿರುತ್ತಾರೆ ವಿನಾ ಬಡತನದ–ದುಸ್ಥಿತಿಯ ಬವಣೆಯನ್ನು ನಿವಾರಣೆ ಮಾಡುವ ಬಗ್ಗೆ ಅಲ್ಲ. ಮೊದಲನೆಯದು ಉಳ್ಳವರ ಸಂಗತಿಯಾದರೆ ಎರಡನೆಯದು ಉಳಿದವರ ಸಂಗತಿಯಾಗಿದೆ. ಉಳ್ಳವರು ಮತ್ತು

ಉಳಿದವರ ನಡುವಿನ ಅಂತರ–ಅಸಮಾನತೆಯ ಬಗ್ಗೆ ಬಹಳ ಹಿಂದಿನಿಂದಲೂ ಚಿಂತಕರು–ದಾರ್ಶನಿಕರು ಚರ್ಚೆ ಮಾಡುತ್ತಾ ಬಂದಿದ್ದಾರೆ. ಇದನ್ನು 12ನೆಯ ಶತಮಾನದಲ್ಲಿ ಬಸವಣ್ಣ ತನ್ನ ವಚನವೊಂದರಲ್ಲಿ ಹೀಗೆ ಹಿಡಿದಿಟ್ಟಿದ್ದಾನೆ :

ಹಾಲ ನೇಮ, ಹಾಲ ಕೆನೆಯ ನೇಮ
ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ
ಬೆಣ್ಣೆಯ ನೇಮ, ಬೆಲ್ಲದ ನೇಮ
ಅಂಬಲಿಯ ನೇಮದವರಾರನೂ ಕಾಣೆ.
ಕೂಡಲಸಂಗನ ಶರಣರಲ್ಲಿ
ಅಂಬಲಿಯ ನೇಮದಾತ ನಮ್ಮ ಮಾದಾರ ಚನ್ನಯ್ಯ

ಹಾಲು, ಹಾಲ ಕೆನೆ, ಕಿಚ್ಚಡಿ, ಬೆಲ್ಲ ಮತ್ತು ಬೆಣ್ಣೆಗಳು ಉಳ್ಳವರ ಸಂಗತಿಯಾದರೆ ಅಂಬಲಿಯು ಉಳಿದವರ ಸಂಗತಿಯಾಗಿದೆ. ಬಸವಣ್ಣ ತಾನು ಅಂಬಲಿಯ ಪರ ಎಂಬುದನ್ನು ಮಾದಾರ ಚನ್ನಯ್ಯನ ಮೂಲಕ ಪ್ರತಿಪಾದಿಸುತ್ತಿದ್ದಾನೆ. ಇದು ಸಾಮಾಜಿಕ ನ್ಯಾಯದ ಬಗೆಗಿನ ವ್ಯಾಖ್ಯೆಯಾಗಿದೆ. ಮುಂದೆ ನಾನು ಚರ್ಚಿಸಲಿರುವ ಜಾನ್ ರಾಲ್ಸ್‌ನ ಸಾಮಾಜಿಕ ನ್ಯಾಯ ಸಿದ್ಧಾಂತಕ್ಕೆ ಬಸವಣ್ಣನ ಮೇಲಿನ ವಚನವು ಸೂಕ್ತವಾದ ಹಿನ್ನೆಲೆಯನ್ನು ಒದಗಿಸುತ್ತದೆ.

ಸಾಮಾಜಿಕ ನ್ಯಾಯಕ್ಕೆ ಸಂಬಂಧಿಸಿದಂತೆ ಜಾನ್ ರಾಲ್ಸ್ ಎರಡು ನಿಯಮಗಳನ್ನು ಮಂಡಿಸಿದ್ದಾನೆ. ಮೊದಲನೆಯದು ಸ್ವಾತಂತ್ರ್ಯದ ನಿಯಮ ಮತ್ತು ಎರಡನೆಯದು ಭಿನ್ನತೆಯ ನಿಯಮ.

## ಸ್ವಾತಂತ್ರ್ಯದ ನಿಯಮ

1. ಸಮಾಜದಲ್ಲಿ ಎಲ್ಲರೂ ಅನುಭವಿಸುತ್ತಿರುವ ಸ್ವಾತಂತ್ರ್ಯಗಳಿಗೆ ಸಮನಾಗಿ ಅಲ್ಲಿ ಪ್ರತಿಯೊಬ್ಬರೂ ವಿಸ್ತೃತವಾದ ಸ್ವಾತಂತ್ರ್ಯಗಳಿಗೆ ಸಮಾನ ಹಕ್ಕುದಾರರಾಗಿರುತ್ತಾರೆ.

## ಭಿನ್ನತೆಯ ನಿಯಮ

2. ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಗಳನ್ನು ಕೆಳಕಂಡ ಎರಡು ಸಂದರ್ಭಗಳಲ್ಲಿ ಒಪ್ಪಿಕೊಳ್ಳಬಹುದು.

ಅ). ಯೋಗ್ಯ–ಸಮಾನ ಅವಕಾಶ ಒದಗಿಸುವ ಷರತ್ತಿನೊಂದಿಗೆ ಎಲ್ಲರಿಗೂ ಅಧಿಕಾರ ಮತ್ತು ಹುದ್ದೆಗಳಿಗೆ ಪ್ರವೇಶ ತೆರೆದಿರಬೇಕು.

ಆ). ಸಮಾಜದಲ್ಲಿ ಅತ್ಯಂತ ಕನಿಷ್ಠ ಸವಲತ್ತು ಅನುಭವಿಸುತ್ತಿರುವ ವರ್ಗಕ್ಕೆ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಅನುಕೂಲಗಳು ದೊರೆಯಬೇಕು.

(ಈ ಬಗ್ಗೆ ವಿವರಗಳಿಗೆ ನೋಡಿ: ಅಮರ್ತ್ಯಸೇನ್, 2009. 'ರಾಲ್ಸ್ ಆಂಡ್ ಬಿಯಾಂಡ್'. ದಿ ಐಡಿಯಾ ಆಫ್ ಜಸ್ಟೀಸ್. ಪುಟಗಳು: 52–74. ಪೆನ್‌ಗ್ವಿನ್ ಬುಕ್ಸ್, ಲಂಡನ್)

ಜಾನ್ ರಾಲ್ಸ್‌ನ ಮೊದಲನೆಯ ನಿಯಮವು ಸ್ವಾತಂತ್ರ್ಯಗಳ ಸಮಾನ ವಿತರಣೆಗೆ ಸಂಬಂಧಿಸಿದ್ದರೆ ಎರಡನೆಯ ನಿಯಮವು ಅಧಿಕಾರ-ಹುದ್ದೆಗಳಿಗೆ ಸಂಬಂಧಿಸಿದ ಅವಕಾಶಗಳ ಸಮಾನ ವಿತರಣೆಗೆ ಮತ್ತು ಸಂಪತ್ತು ಹಾಗೂ ವರಮಾನಗಳ ಸಮಾನ ವಿತರಣೆಗೆ ಸಂಬಂಧಿಸಿದೆ.

ಇವು ಸಾಮಾಜಿಕ ನ್ಯಾಯದ ಸೂತ್ರಗಳು. ಎರಡನೆಯ ನಿಯಮದ ಎರಡನೆಯ ಷರತ್ತು ಬಹಳ ಮುಖ್ಯ. ಸಮಾಜದಲ್ಲಿ ತಮ್ಮದಲ್ಲದ ತಪ್ಪಿಗೆ ಎಲ್ಲದರಿಂದ ಯಾರು ವಂಚಿತರಾಗಿರುತ್ತಾರೋ, ಸಾಮಾಜಿಕವಾಗಿ ಅಂಚಿಗೆ ತಳ್ಳಲ್ಪಟ್ಟಿರುತ್ತಾರೋ ಅವರಿಗೆ ಸಮಾಜದಲ್ಲಿ ಈಗಾಗಲೆ ಪ್ರತಿಷ್ಠಿತ ಸ್ಥಾನಮಾನ ಪಡೆದವರಿಗಿಂತ ಹೆಚ್ಚಿನ ಸವಲತ್ತುಗಳನ್ನು, ಸದವಕಾಶಗಳನ್ನು ನೀಡಬೇಕಾಗುತ್ತದೆ. ಆಗ ಮಾತ್ರ ಅಲ್ಲಿ ಸಮಾನತೆಯನ್ನು, ಸಾಮಾಜಿಕ ನ್ಯಾಯವನ್ನು ಸಾಧಿಸಿಕೊಳ್ಳುವುದು ಸಾಧ್ಯ. 'ಅಸಮಾನತೆ'ಯಿಂದ ಕೂಡಿರುವ ಸಮಾಜದಲ್ಲಿ ಸರ್ಕಾರದ ನೀತಿಗಳು 'ಸಮಾನತೆ'ಯನ್ನು ಆಧರಿಸಿದ್ದರೆ ಅದರಿಂದ ಅಸಮಾನತೆಯನ್ನು ತೊಡೆದುಹಾಕುವುದು ಸಾಧ್ಯವಾಗುವುದಿಲ್ಲ. ಇದನ್ನು ಒಂದು ನಿದರ್ಶನದ ಮೂಲಕ ವಿವರಿಸಬಹುದು. ನಮ್ಮ ಸಮಾಜದಲ್ಲಿ ಮೇಲಿನ ಶ್ರೇಣಿಯಲ್ಲಿರುವವರ ವರಮಾನ ರೂ.1,00,000 ಎಂದು ಇಟ್ಟುಕೊಳ್ಳೋಣ. ಮಧ್ಯಮ ಹಂತದಲ್ಲಿರುವವರ ವರಮಾನ ರೂ.50,000 ಇರಲಿ. ಕೆಳಮಟ್ಟದಲ್ಲಿರುವವರ ವರಮಾನ ರೂ.25,000 ಇದೆ ಎಂದು ಭಾವಿಸೋಣ. ಇದು ಅಸಮಾನತೆಯ ಮತ್ತು ಶ್ರೇಣೀಕರಣದ ಸ್ವರೂಪ. ಇಲ್ಲಿ ಸಮಾನತೆಯನ್ನು ಸಾಧಿಸುವ ಉದ್ದೇಶದಿಂದ ಪ್ರತಿ ಹಂತಕ್ಕೂ ತಲಾ ರೂ.25000 ಮೌಲ್ಯದ ಸಂಪನ್ಮೂಲವನ್ನು ಸಮನಾಗಿ ಮೂರು ವರ್ಗಗಳಲ್ಲಿ ಹಂಚಿದರೆ ಏನಾಗುತ್ತದೆ? ಮೇಲಿರುವವರ ವರಮಾನ ಈಗ ರೂ.1,25,000ವಾದರೆ ಮಧ್ಯಮವರ್ಗದವರ ವರಮಾನ ರೂ.75,000ವಾಗುತ್ತದೆ. ಕೆಳವರ್ಗದ ವರಮಾನ ರೂ.50,000ವಾಗುತ್ತದೆ. ಸಮಾನತೆಯನ್ನು ತರುವ ಉದ್ದೇಶದಿಂದ ಒಂದಿಷ್ಟು ವರಮಾನವನ್ನು ಎಲ್ಲರಲ್ಲೂ ಸಮಾನವಾಗಿ ಹಂಚಿದರೂ ಅಲ್ಲಿ ಅಸಮಾನತೆಯು ಕಡಿಮೆಯಾಗಲಿಲ್ಲ. ಆದ್ದರಿಂದ ಅಸಮಾನ ಸಮಾಜದಲ್ಲಿ ಸಮಾನತೆಯನ್ನು ತರಬೇಕಾದರೆ ಸಂಪನ್ಮೂಲವನ್ನು, ಅವಕಾಶಗಳನ್ನು, ಅಧಿಕಾರವನ್ನು ಅಸಮಾನವಾಗಿ ಹಂಚಬೇಕಾಗುತ್ತದೆ (ಡಾ. ಎಂ. ಚಂದ್ರಪೂಜಾರಿ, ವಿಜಯ ಕರ್ನಾಟಕ, 09.03.2013). ಈ ಬಗೆಯ ಉದ್ದೇಶಪೂರಿತ ತಾರತಮ್ಯ ನೀತಿಯಿಂದ ಸಮಾಜದಲ್ಲಿ ಅನೂಚಾನವಾಗಿ ಹರಿದುಕೊಂಡು ಬರುತ್ತಿರುವ ಅಸಮಾನತೆಗಳನ್ನು ನಿವಾರಿಸಬಹುದು. ಸಮಾಜದಲ್ಲಿ ವಂಚಿತರಿಗೆ, ಬಡವರಿಗೆ ಅಲ್ಪಸಂಖ್ಯಾತರಿಗೆ ಹೆಚ್ಚು ಹೆಚ್ಚು ಸವಲತ್ತುಗಳನ್ನು ನೀಡುವುದಕ್ಕೆ ಒತ್ತು ಕೊಡುವುದಾದರೆ ಅಂತಹ ಅಸಮ ವಿತರಣೆಯ ಸಾಮಾಜಿಕ ನೀತಿಗಳನ್ನು ರಾಲ್ಸ್‌ನ ಪ್ರಣಾಳಿಕೆಯ ಪ್ರಕಾರ ಸಮರ್ಥಿಸಬೇಕಾಗುತ್ತದೆ. ಮೂಲದಲ್ಲಿ ಸಾಮಾಜಿಕ ನ್ಯಾಯಕ್ಕೆ ಅವಕಾಶ ಇಲ್ಲದಿರುವಾಗ ಅಸಮ ನೀತಿಗಳನ್ನು ಅನುಸರಿಸಬೇಕಾಗುತ್ತದೆ. ಇದು ಸಾಮಾಜಿಕ ನ್ಯಾಯ ಸಿದ್ಧಾಂತ.

ಈ ಸೂತ್ರದ ಪ್ರಕಾರ ಸಮಾಜದಲ್ಲಿ ಸವಲತ್ತು-ಸೌಕರ್ಯಗಳು, ಸೌಲಭ್ಯಗಳು ಹೆಚ್ಚು ಹೆಚ್ಚಾಗಿ ದುರ್ಬಲರಿಗೆ, ಅಂಚಿನಲ್ಲಿರುವವರಿಗೆ, ವಂಚಿತರಿಗೆ, ಮಹಿಳೆಯರಿಗೆ, ದುಡಿಮೆಗಾರರಿಗೆ ದೊರೆಯಬೇಕು. ಅಂದಮೇಲೆ ದುಸ್ಥಿತಿಯನ್ನು ನಿವಾರಿಸುವುದು ಅಭಿವೃದ್ಧಿಯ ಮೂಲ ಸಂಗತಿಯಾಗಬೇಕು. ಈ ಬಗೆಯ ದುಸ್ಥಿತಿಗಳನ್ನು ತೊಡೆದು

ಹಾಕುವುದು ಅಭಿವೃದ್ಧಿಯ ಗುರಿಯಾಗಬೇಕೇ ವಿನಾ ಅವು ಕೇವಲ ಅಭಿವೃದ್ಧಿಯ ಸಾಧನಗಳಲ್ಲ. ಬಡತನ, ಅಜ್ಞಾನ, ಅಸ್ವಸ್ಥತೆ, ಅವಕಾಶಗಳಲ್ಲಿನ ಅಸಮಾನತೆಯನ್ನು ತೊಡೆದು ಹಾಕುವುದು ಮುಂತಾದವುಗಳನ್ನು ಅಭಿವೃದ್ಧಿಯ ಸಾಧನಗಳನ್ನಾಗಿ ಮಾತ್ರ ಪರಿಗಣಿಸುವುದು ಸೀಮಿತವಾದ ವಿಶ್ಲೇಷಣೆಯಾಗುತ್ತದೆ. ನಮಗೆ ಸ್ವಾತಂತ್ರ್ಯ ಬಂದ (1947) ಸಂದರ್ಭದಲ್ಲಿ ದೇಶದ ಮುಂದಿರುವ ಸವಾಲುಗಳು ಇವು ಎಂದು ಬಡತನ, ಅಜ್ಞಾನ, ಅಸ್ವಸ್ಥತೆ ಮತ್ತು ಅವಕಾಶಗಳಲ್ಲಿನ ಅಸಮಾನತೆಗಳನ್ನು ನೆಹರೂ ಪಟ್ಟಿ ಮಾಡಿದ್ದರು. ಇವು ನಾಲ್ಕು ದುಸ್ಥಿತಿಯ ಸಂಗತಿಗಳು. ದುಸ್ಥಿತಿಯ ನೆಲೆಯಿಂದ ಅಭಿವೃದ್ಧಿಯ ವಿಶ್ಲೇಷಣೆ ನಡೆಸುವುದು ಅನೇಕ ದೃಷ್ಟಿಯಿಂದ ಅಪೇಕ್ಷಣೀಯ. ಈ ದುಸ್ಥಿತಿಗಳ ನಿವಾರಣೆಯೇ ಅಭಿವೃದ್ಧಿ ಎಂಬುದು ಸೆನ್‌ನ ಪ್ರತಿಪಾದನೆಯಾಗಿದೆ.

`Development consists of the removal of various kinds of unfreedoms (illiteracy, illhealth, inequality, gender discrimination, lack of dignity and respect etc) that leave people with little choice and little opportunity of exercising their reasoned agency' (A.Sen.1999, ಅವರಣದಲ್ಲಿರುವ ಮಾತುಗಳು ಲೇಖಕನವು). ಮುಂದುವರಿದು ಅವನು ಹೇಳುತ್ತಾನೆ– `The removal of substantial unfreedoms is constitutive of development'. ದುಸ್ಥಿತಿಗಳ ನಿವಾರಣೆ ಎಂಬುದು ಸಾಮಾಜಿಕ ನ್ಯಾಯದ ಸಂಗತಿಯಾಗಿದೆ. ಇದು ಅಭಿವೃದ್ಧಿ.

## 4. ಅಭಿವೃದ್ಧಿಯಲ್ಲಿ ಅಕ್ಷರ, ಆರೋಗ್ಯ, ಆಹಾರ ಮುಂತಾದವುಗಳ ಪಾತ್ರ

ಈಗಾಗಲೆ ಹೇಳಿರುವಂತೆ ವರಮಾನಕ್ಕೆ ತನ್ನದೇ ಆದ ಉಪಯುಕ್ತತೆಯಿಲ್ಲ. ಅದಕ್ಕೆ ಸಾಧನದ ಪಾತ್ರ ಮಾತ್ರ ಸಾಧ್ಯ. ಆದರೆ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಸಮಾನತೆ ಮುಂತಾದವುಗಳಿಗೆ ಸಾಧನದ ಪಾತ್ರವೂ ಇದೆ ಮತ್ತು ಅವುಗಳು ತಮ್ಮಷ್ಟಕ್ಕೆ ತಾವು ಮಹತ್ವದ ಸಂಗತಿಗಳಾಗಿದ್ದಾವೆ. ಒಬ್ಬ ವ್ಯಕ್ತಿ ಏಕೆ ಅಕ್ಷರಸ್ಥನಾಗಬೇಕು ಅಂದರೆ ಅದರಿಂದ ಅವನ/ಳ ಉತ್ಪಾದನಾ ಶಕ್ತಿ ಉತ್ತಮವಾಗುತ್ತದೆ ಎಂಬುದಕ್ಕಲ್ಲ. ಉತ್ಪಾದನಾ ಶಕ್ತಿಯನ್ನು ಉತ್ತಮ ಪಡಿಸುವುದು ಅಗತ್ಯ. ಅದಕ್ಕಿಂತ ಮುಖ್ಯವಾಗಿ ನಾವೆಲ್ಲರೂ ಮನುಷ್ಯರು ಎಂಬ ಕಾರಣಕ್ಕೆ ನಾವು ಅಕ್ಷರಸ್ಥರಾಗಬೇಕು. ನಾವೆಲ್ಲರೂ ಮನುಷ್ಯರು ಎಂಬ ಕಾರಣಕ್ಕೆ ನಾವು ಹಸಿವಿನಿಂದ ಮುಕ್ತರಾಗಿರಬೇಕು. ಬಡತನದಿಂದ ಮುಕ್ತರಾಗಿರುವುದು, ಹಸಿವಿನಿಂದ ಮುಕ್ತರಾಗಿರುವುದು ಮಾನವ ಹಕ್ಕು. ಅಕ್ಷರಸ್ಥರಾಗುವುದರಿಂದ ನಮ್ಮ ಉತ್ಪಾದನಾ ಶಕ್ತಿ ಉತ್ತಮವಾಗುವುದರಿಂದ ನಮ್ಮ ಬಡತನವನ್ನು ನಿವಾರಿಸಿಕೊಳ್ಳಬಹುದು. ಇದು ಸರಿ. ಅದಕ್ಕಿಂತ ಮುಖ್ಯವಾಗಿ ನಾವೇಕೆ ಬಡರಾಗಿದ್ದೇವೆ, ನಾವೇಕೆ ಹಸಿವಿನಿಂದ ನರಳುತ್ತಿದ್ದೇವೆ ಎಂಬುದನ್ನು ಅರ್ಥ ಮಾಡಿಕೊಳ್ಳಲು, ಇವೆಲ್ಲ ಸಾಮಾಜಿಕ ಸಂಗತಿಗಳು, ಆದ್ದರಿಂದ ಅವುಗಳನ್ನು ಮನುಷ್ಯ ಪ್ರಯತ್ನದಿಂದ ನಿವಾರಿಸಿಕೊಳ್ಳಬಹುದು ಎಂಬುದನ್ನು ಅರಿತುಕೊಳ್ಳಲು ನಾವೆಲ್ಲ ಅಕ್ಷರಸ್ಥರಾಗಬೇಕು. ಜನಗಣತಿ 2011ರ ಪ್ರಕಾರ ಕರ್ನಾಟಕದಲ್ಲಿ 132 ಲಕ್ಷ ಅನಕ್ಷರಸ್ಥರಿದ್ದಾರೆ. ಇವರಲ್ಲಿ ಮಹಿಳೆಯರ ಪ್ರಮಾಣ ಅಧಿಕ. ಇವರಲ್ಲಿ ಪ.ಜಾ, ಪ.ಪಂ.

ಒಬಿಸಿ, ಅಲ್ಪಸಂಖ್ಯಾತರ ಪ್ರಮಾಣ ಅಧಿಕ. ಅಂದರೆ ಅಭಿವೃದ್ಧಿ ಅನ್ನುವುದು ತನ್ನಷ್ಟಕ್ಕೆ ತಾನು ಫಲಗಳನ್ನು ಎಲ್ಲರಿಗೂ ಸಮಾನವಾಗಿ ಒದಗಿಸುವುದಿಲ್ಲ. ಅದಕ್ಕೆ ಪ್ರಜ್ಞಾಪೂರ್ವಕ ಪ್ರಯತ್ನ ನಡೆಸಬೇಕಾಗುತ್ತದೆ. ವರಮಾನ ಏರಿದ ಹಾಗೆ, ಜನರು ಶಿಕ್ಷಿತರಾದ ಹಾಗೆ, ಉದ್ಯೋಗದ ಅವಕಾಶಗಳು ವಿಸ್ತೃತಗೊಂಡ ಹಾಗೆ ಅಸಮಾನತೆ, ತಾರತಮ್ಯ, ನಿವಾರಣೆಯಾಗಿ ಬಿಡುತ್ತವೆ ಎಂದು ಜನರು ನಂಬಿದ್ದಾರೆ. ಆದರೆ ಅದು ಹಾಗೆ ಸಂಭವಿಸುವುದಿಲ್ಲ. ಅಸಮಾನತೆ, ತಾರತಮ್ಯ ಮುಂತಾದ ಸಂಗತಿಗಳನ್ನು ಜನರು ಪ್ರಜ್ಞಾಪೂರ್ವಕವಾಗಿ ನಿರಂತರವಾಗಿ ತೊಡೆದು ಹಾಕಲು ಪ್ರಯತ್ನಿಸಬೇಕಾಗುತ್ತದೆ. ಇಲ್ಲಿ ಸರ್ಕಾರದ ಪಾತ್ರವೂ ಮುಖ್ಯ.

ನಮ್ಮ ರಾಜ್ಯದಲ್ಲಿ ಅರ್ಧದಷ್ಟು ಮಹಿಳೆಯರು ಅನಿಮೀಯಾದಿಂದ ಮತ್ತು ಶೇ40ರಷ್ಟು ಮಕ್ಕಳು ಅಪೌಷ್ಟಿಕತೆಯಿಂದ ನರಳುತ್ತಿದ್ದಾರೆ. ಇದನ್ನು ನಾವು ಸಮಸ್ಯೆಯೆಂದು ಗುರುತಿಸಲು ಸಿದ್ದರಿಲ್ಲ. ಮೇಲೆ ನೀಡಿರುವ ಕೋಷ್ಟಕದಲ್ಲಿ ಹರಿಯಾಣ ರಾಜ್ಯದಲ್ಲಿ ಮತ್ತು ಬಳ್ಳಾರಿ ಜಿಲ್ಲೆಯಲ್ಲಿ ದಿನಗೂಲಿ ಮಾಡುವ ದುಡಿಮೆಗಾರರ ಪ್ರಮಾಣ ಅಧಿಕವಾಗಿದೆ. ಸಮಾನತೆಯನ್ನು ಸ್ವಲ್ಪ ಮಟ್ಟಿಗಾದರೂ ಸಾಧಿಸಿಕೊಂಡಿರುವ ಕೇರಳ ಮತ್ತು ಹಾಸನಗಳಲ್ಲಿ ದಿನಗೂಲಿ ದುಡಿಮೆಗಾರರ ಪ್ರಮಾಣ ಕಡಿಮೆ. ಅದರ ಒಂದು ಲಕ್ಷಣವೆಂದರೆ ಅಲ್ಲಿ ಮಹಿಳಾ ದುಡಿಮೆಗಾರರ ಪ್ರಮಾಣ ಪುರುಷ ದುಡಿಮೆಗಾರರ ಪ್ರಮಾಣಕ್ಕಿಂತ ಅಧಿಕವಾಗಿರುತ್ತದೆ. ಉದಾಹರಣೆಗೆ ಕರ್ನಾಟಕದ 2011ರ ಜನಗಣತಿ ಪ್ರಕಾರ ರಾಜ್ಯದಲ್ಲಿನ ಒಟ್ಟು ದುಡಿಮೆಗಾರರ ಸಂಖ್ಯೆ 278.72 ಲಕ್ಷ. ಇವರಲ್ಲಿ ಮಹಿಳೆಯರ ಪ್ರಮಾಣ ಶೇ. 34.45. ಆದರೆ ರಾಜ್ಯದಲ್ಲಿನ ದಿನಗೂಲಿ ದುಡಿಮೆಗಾರರಲ್ಲಿ (71.55 ಲಕ್ಷ) ಮಹಿಳೆಯರ ಪ್ರಮಾಣ ಶೇ. 54.12. ವರಮಾನದಲ್ಲಿ ಉತ್ತಮ ಮಟ್ಟವನ್ನು ಸಾಧಿಸಿಕೊಂಡಿರುವ ಹರಿಯಾಣ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಏಕೆ ಜನರು ಕೇರಳ ಮತ್ತು ಹಾಸನಗಳಿಗೆ ಹೋಲಿಸಿದರೆ ಅಧಿಕ ಪ್ರಮಾಣದಲ್ಲಿ ದುಸ್ಥಿತಿಯನ್ನು ಎದುರಿಸುತ್ತಿದ್ದಾರೆ? ಇದರ ಅರ್ಥ ಇಷ್ಟೆ!. ಹರಿಯಾಣ ಮತ್ತು ಬಳ್ಳಾರಿ ಜಿಲ್ಲೆಗಳು ಏರಿಕೆಯಾದ ವರಮಾನವನ್ನು ಜನರ ಬದುಕನ್ನಾಗಿ ಪರಿವರ್ತಿಸಿಕೊಳ್ಳುವಲ್ಲಿ ವಿಫಲವಾಗಿದ್ದಾವೆ. ಆದರೆ ಕೇರಳ ಮತ್ತು ಹಾಸನ ತಮ್ಮ ವರಮಾನವನ್ನು ಜನರ ಬದುಕನ್ನಾಗಿ, ಜನರ ಅಕ್ಷರವನ್ನಾಗಿ, ಜನರ ಆರೋಗ್ಯವನ್ನಾಗಿ ಪರಿವರ್ತಿಸಿಕೊಂಡಿವೆ. ಇದು ಅಭಿವೃದ್ಧಿ. ಇದು ಸಮಾನತೆಯನ್ನು ಆಧರಿಸಿದ ಅಭಿವೃದ್ಧಿ. ಬಸವಣ್ಣ ಹೇಳಿದ ರೀತಿಯಲ್ಲಿ ಅದು ಹಾಲು, ಹಾಲುಕೆನೆ, ಬೆಣ್ಣೆ, ಬೆಲ್ಲ ಇವುಗಳಿಗೆ ಸಂಬಂಧಿಸಿದ ಸಂಗತಿಯಲ್ಲ. ಅದು ಅಂಬಲಿಗೆ ಮತ್ತು ಅಂಚಿನಲ್ಲಿರುವ – ವಂಚಿತರಾದ ಮಾದಾರ ಚನ್ನಯ್ಯ ಸಂತತಿಗೆ ಸಂಬಂಧಿಸಿದ ಸಂಗತಿ.

*

ಟಿ.ಆರ್.ಚಂದ್ರಶೇಖರ, 340/1. 'ವಚನ', ಸೊಸೈಟಿ ರಸ್ತೆ, ಅಮರಾವತಿ, ಹೊಸಪೇಟೆ 583 201



# ಸಮಾಜವಾದ, ಪರಿಸರ ಮತ್ತು ಸುಸ್ಥಿರ ಕೃಷಿ

– ಡಾ. ಟಿ.ಎನ್. ಪ್ರಕಾಶ ಕಮ್ಮರಡಿ

ಸಮಾಜವಾದ ಸತ್ವ ಮತ್ತು ಸ್ವರೂಪ ಗಳನ್ನು ಸ್ಪಷ್ಟವಾಗಿ ಅರ್ಥೈಸಿಕೊಂಡಾಗ ಮಾತ್ರ ಅದರ ಅನುಷ್ಠಾನದ ದಾರಿಗಳತ್ತ ಯೋಚಿಸುವುದು ಸುಗಮವಾಗುತ್ತದೆ. ಫ್ರೆಂಚ್ ಮಹಾಕ್ರಾಂತಿ ಮನುಷ್ಯ ದಿಕ್ಕನ್ನೇ ಬದಲಿಸಿರುತ್ತದೆಂದರೆ ತಪ್ಪಾಗಲಾರದು. ಈ ಮಹಾಕ್ರಾಂತಿಯಡಿಯಿಂದೆದ್ದ ಘೋಷಣೆಗಳಾದ ಸ್ವಾತಂತ್ರ, ಸಮಾನತೆ ಮತ್ತು ಸಹೋದರತೆಗಳು ಬರಿದೇ ರಾಜಕೀಯ ಬೇಡಿಕೆಗಳಾಗಿರದೇ ಮಾನವ ಸಮಾಜದ ಅತ್ಯುಚ್ಚ ಮೌಲ್ಯಗಳೂ ಆಗಿರುತ್ತದೆ. ಈ ಮೌಲ್ಯಗಳಿಗೆ ಬದ್ಧವಾದ ಹೊಸತೊಂದು ವ್ಯವಸ್ಥೆಯ ನಿರ್ಮಾಣವೇ ಸಮಾಜವಾದ ಮೂಲ ಉದ್ದೇಶವಾಗಿರುತ್ತದೆ. ಸ್ವಾತಂತ್ರ ಎನ್ನುವುದು ಬರಿದೇ ಮಾನವರಿಗಲ್ಲ ಪ್ರತಿ ಜೀವಿಗೂ ಆತ್ಮಗತ್ಯವಾಗಿರುವ ಅಂತರ್ಗತ ಜೀವನ ಮೌಲ್ಯವಾಗಿರುತ್ತದೆ. ಸ್ವಾತಂತ್ರವೆಂಬುದು ವ್ಯಕ್ತಿಯ ಸ್ವಯಂ ನಿರ್ಧಾರದ ಹಕ್ಕಿನ ಪ್ರತೀಕವಾಗಿದ್ದರೆ ಪ್ರತಿವ್ಯಕ್ತಿಗೂ ಇಂತಹ ಹಕ್ಕನ್ನು ನೀಡುವುದನ್ನು ಸಮಾನತೆ ತತ್ವ ಎತ್ತಿ ಹಿಡಿಯುತ್ತದೆ. ಇನ್ನು ಭ್ರಾತೃತ್ವವೆಂಬುದು ವ್ಯಕ್ತಿಯ ಸಾಂಘಿಕ ಬದುಕಿನಡೆಗೆ ತುಡಿತವಾಗಿದ್ದು ಇಡೀ ಮಾನವ ಜನಾಂಗವೇ ಈ ಅತ್ಯುಚ್ಚ ಮೌಲ್ಯಗಳತ್ತ ಸದಾಮಿಡಿಯುತ್ತಿರುತ್ತದೆಂದರೆ ತಪ್ಪಾಗಲಾರದು.

ಬಂಡವಾಳವಾದ ಮತ್ತು ಮಾರ್ಕ್ಸ್‌ವಾದಗಳೆರಡೂ ಮನುಷ್ಯನ ಮೂಲಕ ಪ್ರವೃತ್ತಿಯನ್ನು

ಸಮಗ್ರವಾಗಿ ಪರಿಗಣಿಸದೆ ಬರಿದೇ ಅಂಶಿಕವಾಗಿ ಮಾತ್ರ ನೋಡುವಂತಾಗಿರುತ್ತವೆ. ಇವೆರಡೂ ಮನುಷ್ಯನನ್ನು ಮೂಲಭೂತವಾಗಿ ಒಂದು ಸ್ವಾರ್ಥಜೀವಿಯಾಗಿ ಒಳಪಡಿಸುವ ಮೂಲಕ ನಿಯಂತ್ರಿಸು ಪ್ರಯತ್ನಿಸಿದರೆ, ಬಂಡವಾಳವಾದ ಖಾಸಗಿ ಒಡೆತನ, ವೈಯುಕ್ತಿಕ ಲಾಭ ಇತ್ಯಾದಿಗಳ ಮೂಲಕ ಈ ಸ್ವಾರ್ಥಪ್ರವೃತ್ತಿಯ ಅಡೆತಡೆ ಇಲ್ಲದ ಬೆಳವಣಿಗೆಗೆ ಯತ್ನಿಸುತ್ತದೆ. ಹೀಗೆ ಮಾರ್ಕ್ಸ್‌ವಾದ ಮತ್ತು ಬಂಡವಾಳವಾದಗಳೆರಡೂ ಸಹಮತ ಹೊಂದಿರುವ ಮನುಷ್ಯನ ಮೂಲಭೂತ ಪ್ರವೃತ್ತಿಯ ಮೇಲಿನ ಈ ಅಪನಂಬಿಕೆಯ ಬಗ್ಗೆ ನಾವಿಂದು ಗಂಭೀರವಾಗಿ ಚರ್ಚಿಸಬೇಕಾಗಿದೆ. ಒಂದು ಜೈವಿಕ ಜೀವಿಯಾದ ಮನುಷ್ಯರಲ್ಲಿ ಈ ಸ್ವಾರ್ಥ ಪ್ರವೃತ್ತಿ ಸಹಜವಾಗಿದ್ದರೂ ಆತ ಬರಿದೇ ಒಂದು ಸ್ವಾರ್ಥಜೀವಿ ಮಾತ್ರ ಎಂಬ ಅಭಿಪ್ರಾಯವನ್ನು ನಾವಿಂದು ಅವಶ್ಯಕವಾಗಿ ಪ್ರಶ್ನಿಸಬೇಕಾಗಿದೆ. ಮನುಷ್ಯ ಕೇವಲ ಒಂದು ಏಕಾಂತ, ಜೈವಿಕಜೀವಿ ಮಾತ್ರವಲ್ಲ. ಸಾಂಘಿಕ ಜೀವಿಯೂ ಆಗಿರುವುದರಿಂದ ಇದಕ್ಕಾಗಿ ಆತ ತನ್ನ ಈ ಸ್ವಾರ್ಥ ಪರಿಧಿಯನ್ನು ಧಿಕ್ಕರಿಸಲೂ ಬೇಕಾಗುತ್ತದೆ. ಇದು ವ್ಯಕ್ತವಾಗುವುದಾದರೂ ಆತನ ಪ್ರೀತಿ, ಅನುಕಂಪ, ಸಹಾಯಾದಿಗಳ ನಿಸ್ವಾರ್ಥ ಭ್ರಾತೃತ್ವ ಪ್ರವೃತ್ತಿಯ ಮೂಲಕವಾಗಿ ಹೀಗೆ ಮನುಷ್ಯರಲ್ಲಿ ಈ ಸ್ವಾರ್ಥ, ನಿಸ್ವಾರ್ಥ ಪ್ರವೃತ್ತಿಗಳು ಅವಿಭಾಜ್ಯ ಅಂಗವಾಗಿ ಒಂದಕ್ಕೊಂದು ಹೊಂದಿಕೊಂಡಿದ್ದರೂ ಸದಾ ತಿಕ್ಕಾಡುತ್ತಲೂ ಇರುತ್ತದೆ. ಇದರಲ್ಲಿ ಸ್ವಾರ್ಥ ಪ್ರವೃತ್ತಿಯನ್ನು ಸಮಗ್ರವಾಗಿ ಪರಿಗಣಿಸಿ, ಆತನ ನಿಸ್ವಾರ್ಥ ಪ್ರವೃತ್ತಿಯ ಮೂರ್ತಸ್ವರೂಪವಾದ ಭ್ರಾತೃತ್ವದೆಡೆಗಿನ ತುಡಿತಕ್ಕೆ ಒತ್ತುಕೊಡುವುದರ ಮೂಲಕ ಜನತಾಂತ್ರಿಕ ಸಮಾಜವಾದ ತನ್ನ ವೈಶಿಷ್ಟ್ಯವನ್ನು ಎತ್ತಿತೋರಿಸುವುದು ಮಾತ್ರವಲ್ಲ ತನ್ನ ಸೈದ್ಧಾಂತಿಕ ಭದ್ರಬುನಾದಿಯನ್ನೂ ಇದರಲ್ಲೇ ಪಡೆದುಕೊಂಡಿರುತ್ತದೆ.

ಈ ಸಮಾಜವಾದಿ ಸತ್ವಗುಣಗಳು ಸಾಕಾರಗೊಂಡು ಪಡೆಯುವ ಸ್ವರೂಪಗಳನ್ನು ನಾವು ಹಲವು ರೀತಿಯಲ್ಲಿ ನೋಡಬಹುದಾಗಿದೆ. ಭೂಸುಧಾರಣೆ ಮೂಲಕ ಉಳುವವನಿಗೆ ಹೊಲದೊಡೆತನ ಎನ್ನುವ ಸಮಾಜವಾದಿ ಸ್ವರೂಪವನ್ನು ಕೃಷಿಯಲ್ಲಿ ನೋಡುವುದಾದಲ್ಲಿ ಸಹಕಾರವನ್ನು ಉತ್ಪಾದನಾ ರಂಗದಲ್ಲೂ ಮೀಸಲಾತಿಯಂತಹ ಕ್ರಮಗಳು ಸಾಮಾಜಿಕ ಕ್ಷೇತ್ರದ ಅತ್ಯಂತ ಮೂರ್ತ ಸಮಾಜವಾದಿ ಸ್ವರೂಪಗಳಾಗಿವೆ. ಹೀಗೆ ಸಮಾಜವಾದದ ಸತ್ವ ಮತ್ತು ಸ್ವರೂಪಗಳನ್ನು ಅರಿತಾಗ ಅಂತಹ ವ್ಯವಸ್ಥೆ ಒಂದರ ನಿರ್ಮಾಣದ ದಾರಿಗಳನ್ನು ಹುಡುಕುವುದು ಸುಲಭವಾಗುವುದು. ಈ ನಿಟ್ಟಿನಲ್ಲಿ ಡಾ. ಲೋಹಿಯಾ ಸಾಂಕೇತಿಕವಾಗಿ ಮತಪೆಟ್ಟಿಗೆ, ಜೈಲು ಮತ್ತು ಸಲಿಕೆಗಳೆಂಬ ಮೂರು ದಾರಿಗಳನ್ನು ತಿಳಿಸಿರುವರು.

ಮತಪೆಟ್ಟಿಗೆ ಜನತಾಂತ್ರಿಕ ಹಾದಿಯ ಸಂಕೇತವಾಗಿದ್ದರೆ, ಜೈಲು ಪ್ರತಿಭಟನೆಯ ಸಂಕೇತವೂ, ಸಲಿಕೆ ರಚನಾತ್ಮಕ ಕಾರ್ಯಗಳ ಸಂಕೇತವಾಗಿರುತ್ತದೆ. ಇವುಗಳ ಜೊತೆಗೆ ವ್ಯಕ್ತಿಯಲ್ಲಿ ಸಮಾಜವಾದಿ ಮೌಲ್ಯಗಳನ್ನು ಗಟ್ಟಿಮಾಡುವ ಸಹಕಾರಿ ಸಂಘಟನೆಗಳಂತಹ ಸಾಂಸ್ಥಿಕ ರಚನೆ(?)ಗಳನ್ನು ಹುಟ್ಟುಹಾಕುವುದು ಅತ್ಯಗತ್ಯವಾಗಿದೆ. ಇದರಿಂದ ಜನತಾಂತ್ರಿಕ ವ್ಯವಸ್ಥೆ ಒಂದರ ನಿರ್ಮಾಣ ಮಾತ್ರವಲ್ಲ. ಅದನ್ನು ನಿರಂತರವಾಗಿ ಕಾಪಾಡಿಕೊಂಡು ಬರಲೂ ಸಾಧ್ಯವಾಗುತ್ತದೆ. ಇದಕ್ಕೆ ಮೊದಲು ಆಗಬೇಕಾಗಿರುವುದೆಂದರೆ ವ್ಯಕ್ತಿ ವ್ಯಕ್ತಿಗಳ ನಡುವೆ ಜನತಾಂತ್ರಿಕ ಸಮಾಜವಾದಕ್ಕೆ ಪೂರಕವಾಗಿರುವಂತಹ ಭ್ರಾತೃತ್ವ ಕೇಂದ್ರಿತ ಆಂತರಿಕ ಸಂಬಂಧಗಳೂ ಮತ್ತು ಆಂತರಿಕ ವ್ಯವಹಾರಗಳು ಹಾಗೇ ಅಂತಹ ಸಂಬಂಧಗಳನ್ನು ಗಟ್ಟಿಗೊಳಿಸುವ ಸಂಸ್ಥೆಗಳು ಅಷ್ಟೇಕೆ ಸಂಪ್ರದಾಯಗಳೂ ಕೂಡ ಯಾವುದೇ ಒತ್ತಡ,

ಬಲಾತ್ಕಾರಗಳಿಲ್ಲದೇ ಸಹಜವಾಗಿ ನಿರ್ಮಾಣವಾಗಬೇಕಾಗುತ್ತದೆ. ಅಂತಿಮವಾಗಿ ಒಂದು ಧರ್ಮದೋಪಾದಿಯಲ್ಲಿ ವ್ಯಕ್ತಿಗಳೂ, ಸಂಸ್ಥೆಗಳು ಈ ತತ್ವಗಳಿಗೆ ಸಹಜವಾಗಿ ಬದ್ಧರಾಗುವ ಅಷ್ಟೇಕೆ ಸ್ವಯಂ ಅರ್ಪಿಸಿಕೊಳ್ಳುವ ಸ್ಥಿತಿ ಉದಯವಾಗಬೇಕಾಗಿದೆ. ಈ ರೀತಿಯಾಗಿ ಸಮಾಜವಾದಿ ವ್ಯವಸ್ಥೆಯೊಂದರ ಸಹಜ ನಿರ್ಮಾಣ ಕ್ರಿಯೆಯಲ್ಲಿ ರಾಜ್ಯವ್ಯವಸ್ಥೆ, ಪಕ್ಷ, ಸರ್ಕಾರಗಳಲ್ಲಿ ಅತೀ ಮಿತವಾದ ಪಾತ್ರವೇನಿರಬೇಕೆಂದು ನಾವು ಇಂದು ನಿರ್ಧರಿಸಬೇಕಾಗಿದೆ. ಅಂದಮೇಲೆ ಸಮಾಜವಾದವೆಂಬುದು ಮನುಷ್ಯನ ಆರ್ಥಿಕ, ರಾಜಕೀಯ, ಸಾಮಾಜಿಕ ಒಟ್ಟಾರೆ ಲೌಕಿಕ ಬದುಕಿಗೆ ಮಾತ್ರ ಸೀಮಿತವಾಗಿರುವ ಸಿದ್ಧಾಂತವೇ? ಮನುಷ್ಯ ಅನ್ನ ಮಾತ್ರದಿಂದ ಬದುಕಲಾರ. ಆತನಿಗೆ ಅನ್ನ ವಸ್ತ್ರಾದಿಗಳ ಲೌಕಿಕ ಬದುಕಿನ ಜೊತೆಗೆ ಕಲೆ, ಸಾಹಿತ್ಯ ಇತ್ಯಾದಿಗಳ ಸಾಂಸ್ಕೃತಿಕ ಬದುಕಿನಿದ ಹಿಡಿದು ಧರ್ಮ ಆಧ್ಯಾತ್ಮಿಕತೆಗಳವರೆಗಿನ ಅಲೌಕಿಕ ಬದುಕೂ ಅಷ್ಟೇ ಅನಿವಾರ್ಯವಾಗಿರುತ್ತದೆ. ಲೌಕಿಕ – ಅಲೌಕಿಕ ಬದುಕುಗಳ ನಡುವಿನ ತದಾತ್ಮತೆಯು ಮುಖ್ಯವಾಗಿರುತ್ತದೆ. ಈ ಪ್ರಶ್ನೆಗೆ ಬಂಡವಾಳವಾದ ಮತ್ತು ಮಾರ್ಕ್ಸ್‌ವಾದಗಳೆರಡರಲ್ಲೂ ಸೂಕ್ತ ಉತ್ತರವಿಲ್ಲದಿರುವ ಬಗ್ಗೆ ನಾವಿಂದು ಅವಶ್ಯಕವಾಗಿ ದೃಷ್ಟಿ ಹರಿಸಬೇಕಾಗಿದೆ. ಆದರೆ ಈ ಪ್ರಶ್ನೆಗೆ ಉತ್ತರ ಹುಡುಕುವ ಶಕ್ತಿಯಿರುವ ಸಮಾಜವಾದಕ್ಕೆ ಇದೊಂದು ಅತ್ಯಂತ ಸವಾಲಿನ ಶೇಷಪ್ರಶ್ನೆಯಾಗಿದೆ. ಸದ್ಯಕ್ಕೆ ಅತ್ಯಂತ ವ್ಯಾವಹಾರಿಕ ದೃಷ್ಟಿಕೋನದಿಂದ ಪರಿಸರ ಮತ್ತು ನೈಸರ್ಗಿಕ ಸಂಪನ್ಮೂಲಗಳ ವಿಚಾರದಲ್ಲಿ ಸಮಾಜವಾದಿ ದೃಷ್ಟಿಕೋನ ಹೇಗಿರಬೇಕೆಂದು ವಿವೇಚಿಸೋಣ.

## ಪರಿಸರ, ನೈಸರ್ಗಿಕ ಸಂಪನ್ಮೂಲಗಳು ಮತ್ತು ಸಮಾಜವಾದ

ಪರಿಸರ ಮಾಲಿನ್ಯ, ನೈಸರ್ಗಿಕ ಸಂಪನ್ಮೂಲಗಳ ವಿನಾಶ ಮತ್ತು ಅವುಗಳ ಖಾಸಗೀಕರಣ ಇತ್ಯಾದಿ ವಿಚಾರಗಳ ಮೇಲೆ ಇತ್ತೀಚೆಗೆ ಹೆಚ್ಚುವಾದ ವಿವಾದಗಳು ಕೇಳಿಬರುತ್ತಿವೆ. ಕೈಗಾರಿಕಾ ಪ್ರದೇಶಗಳ ಸುತ್ತಮುತ್ತ ಪರಿಸರ ಮಾಲಿನ್ಯ ಅತಿಯಾದಂತೆ ಕಾರ್ಮಿಕರ ಸ್ಥಿತಿಗತಿ ಅಸಹನೀಯವಾಗಿ ಆ ಮೂಲಕವೂ ಕಾರ್ಮಿಕರು ಬಂಡೇಳಲು ಮತ್ತಷ್ಟು ಚುರುಕಾಗುವಂತಾಗುತ್ತಾರೆ ಎಂದು ಕಾರ್ಲ್ ಮಾರ್ಕ್ಸ್ ಬಹಳ ಹಿಂದೆ ಯೋಚಿಸಿರುವನು. ಭೂಮಿ ಒಂದು ಅತ್ಯಂತ ಮಹತ್ವದ ನೈಸರ್ಗಿಕ ಸಂಪನ್ಮೂಲ ಭೂಸುಧಾರಣೆ ಮೂಲಕ ಕೃಷಿ ಭೂಮಿಯ ಸಮಾನ ಹಂಚಿಕೆ ವಿಚಾರದಲ್ಲಿ ಸಮಾಜವಾದಿಗಳು ಈಗಾಗಲೇ ಯಶಸ್ವಿ ಹೋರಾಟ ನಡೆಸಿರುವರು. ಹಾಗಾಗಿ ನೈಸರ್ಗಿಕ ಸಂಪನ್ಮೂಲಗಳ ಸುಸ್ಥಿರ ಬಳಕೆ ಮತ್ತು ಸಮಾನ ಒಡೆತನದಂತಹ ವಿಚಾರಗಳಲ್ಲಿ ಸಮಾಜವಾದಿ ನಿಲುವನ್ನು ಮತ್ತಷ್ಟು ಸ್ಪಷ್ಟಪಡಿಸಲು ಕಷ್ಟವೇನೂ ಆಗಲಾರದು.

ಭೂಮಿಯಷ್ಟೇ ಇಂದು ನೀರು, ಖನಿಜ, ತೈಲ, ಅರಣ್ಯ, ಜೀವ ವೈವಿಧ್ಯ ಈ ನೈಸರ್ಗಿಕ ಸಂಪನ್ಮೂಲಗಳ ಬಳಕೆ ಅತಿಯಾಗುತ್ತಿದೆ. ಈ ನೈಸರ್ಗಿಕ ಸಂಪನ್ಮೂಲಗಳ ಸಾಮೂಹಿಕ ಒಡೆತನ ಮತ್ತು ಅವುಗಳ ಬಳಕೆಯ ಮೇಲೆ ಸಾಮಾಜಿಕ ಹಿಡಿತಗಳಂತಹ ವಿಚಾರಗಳ ಬಗ್ಗೆ ಹೆಚ್ಚು ಯೋಚಿಸಬೇಕಾಗಿದೆ. ಇನ್ನು ಕೆರೆ ನೀರು, ಗೋಮಾಳ ಭೂಮಿ, ಗುಂಡುತೋಪು ಅರಣ್ಯ ಇತ್ಯಾದಿ ಎಲ್ಲಾ ಸ್ಥಳೀಯ ಸಂಪನ್ಮೂಲಗಳನ್ನು ಸಮುದಾಯದ ಒಡೆತನಕ್ಕೆ ಒಳಪಡಿಸಿ ಅವುಗಳ ನಿರ್ವಹಣೆಯ ಜವಾಬ್ದಾರಿಗಳನ್ನು ಪಂಚಾಯತ್‌ರಾಜ್ ಸಂಸ್ಥೆಗಳಿಗೆ ವಹಿಸಿಕೊಡುವುದು ಈಗ ಅತ್ಯಂತ ಸೂಕ್ತ ಕ್ರಮವಾಗಿದೆ. ಇಂದು ನದಿ ನೀರು

ಸರ್ಕಾರದ ಒಡೆತನದಲ್ಲಿದೆ. ಇದರ ಸಮಾನ ಮತ್ತು ಸುಸ್ಥಿರ ಬಳಕೆ ಮತ್ತು ವಿಕೇಂದ್ರೀಕೃತ ನಿರ್ವಹಣೆಗಾಗಿ ನೀರು ಬಳಕೆದಾರರ ಸಂಘಗಳನ್ನು ಈಗಾಗಲೇ ಕೆಲವು ರಾಜ್ಯಗಳಲ್ಲಿ ಸ್ಥಾಪಿಸಲಾಗಿದೆ. ಇವುಗಳನ್ನು ಇಂದು ಎಲ್ಲಡೆ ಗಟ್ಟಿ ಮಾಡುವುದು ಅಗತ್ಯವಾಗಿದೆ. ಇವೆಲ್ಲಕ್ಕಿಂತ ಮುಖ್ಯವಾಗಿ ಖನಿಜ, ತೈಲ, ಕಲ್ಲು, ಮರಳು, ಇತ್ಯಾದಿ ಪುನರುತ್ಪಾದನೆಯಾಗದ ಅಮೂಲ್ಯ ನೈಸರ್ಗಿಕ ಸಂಪನ್ಮೂಲಗಳಲ್ಲಿ ಹಲವುಇಂದು ಖಾಸಗಿ ಒಡೆತನದಲ್ಲಿವೆ. ಇದನ್ನು ರಾಷ್ಟ್ರೀಕರಣಗೊಳಿಸಿ ಒಂದು ಸಮರ್ಥ ವಿಕೇಂದ್ರೀಕೃತ ನಿರ್ವಹಣಾ ವ್ಯವಸ್ಥೆಯಡಿ ತರುವುದು ಈಗ ಅಗತ್ಯವಾಗಿದೆ. ಇನ್ನು ಭವಿಷ್ಯದಲ್ಲಿ ಅತ್ಯಗತ್ಯವಾಗಬಹುದಾಗಿರುವ ಜೀವ ವೈವಿಧ್ಯ ಮತ್ತು ಜೈವಿಕ ಸಂಪನ್ಮೂಲಗಳ ಒಡೆತನ ಮತ್ತು ನಿರ್ವಹಣೆ ವಿಚಾರಗಳೂ ಅಷ್ಟೇ ಮುಖ್ಯವಾಗಿದೆ. ಈ ನಿಟ್ಟಿನಲ್ಲಿ ಒಂದು ಅಂತರರಾಷ್ಟ್ರೀಯ ಒಡಂಬಡಿಕೆ ಏರ್ಪಾಡಾಗಿದ್ದು, ಈ ಜೀವವೈವಿದ್ಯವೆಂಬುದು ರಾಷ್ಟ್ರದ ಸ್ವತ್ತು ಅವುಗಳ ಸಂರಕ್ಷಣೆ ಮಾಡಿ, ಸಮಾನ ರೀತಿಯಲ್ಲಿ ಬಳಸಿ, ಸುಸ್ಥಿರ ನಿರ್ವಹಣೆಯಾಗುವಂತೆ ನೋಡಿಕೊಳ್ಳುವುದು ಆಯಾ ದೇಶಗಳ ಜವಾಬ್ದಾರಿ ಎಂದು ಘೋಷಿಸಲಾಗಿದೆ.

ಇವೆಲ್ಲಾ ಪರಿಸರ ಮತ್ತು ನೈಸರ್ಗಿಕ ಸಂಪನ್ಮೂಲಗಳ ವಿಚಾರಗಳ ಮೇಲಿನ ಸಮಾಜವಾದಿ ಸ್ವರೂಪಗಳಾದವು. ಇನ್ನು ಸಮಾಜವಾದದ ಆ ತತ್ವಗಳು ಇಲ್ಲಿ ಹೇಗೆ ತಲೆ ಎತ್ತುವಂತಾಗುತ್ತವೆ ಎಂಬುದು ಮುಖ್ಯ. ಜನತಾಂತ್ರಿಕ ಸಮಾಜವಾದದ ಮೂಲ ಗುರಿ ಎಂದರೆ ವ್ಯಕ್ತಿ ನಾನು ನನಗೆ ಎಂದು ಎಂದು ಸದಾ ಚಿಂತಿಸುವುದರ ಬದಲಿಗೆ ನಾವು – ನಮಗೆ ಎಂದು ನೋಡುವಂತೆ ಮಾಡುವುದಾಗಿರುತ್ತದೆ. ಪರಿಸರ ಬಗೆಗಿನ ಕಾಳಜಿ, ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ವ್ಯಕ್ತಿ ಬರಿದೇ, ನಾನು ನನಗೆ, ಇಂದಿಗೆ ಎಂದು ನೋಡುವುದರ ಬದಲಿಗೆ ನಾವು ನಮಗೆ, ಮುಂದಕ್ಕೆ ಎಂದು ನೋಡುವಂತಲೂ ಮಾಡುತ್ತದೆ. ಜೀವವೈವಿಧ್ಯದ ನಾಶ, ಜಾಗತಿಕ ತಾಪ ಏರುವಿಕೆ ಇವೇ.

ಮುಂತಾದ ಪರಿಸರ ಸಮಸ್ಯೆಗಳು ಜಾಗತಿಕ ಮಟ್ಟದವರೆಗೆ ವಿಸ್ತರಿಸಿರುವುದರಿಂದ ಈ ಮೂಲಕ ಏಳುವ 'ನಾವು ನಮಗೆ' ಕಾಳಜಿಗಳು ವಿಶ್ವವ್ಯಾಪ್ತಿಯನ್ನು ಪಡೆಯುವಂತಾಗುತ್ತವೆ. ಈ ನಿಟ್ಟಿನಲ್ಲಿ ಪರಿಸರ, ಅರಣ್ಯ ಮತ್ತು ಇತರ ನೈಸರ್ಗಿಕ ಸಂಪನ್ಮೂಲಗಳ ಸಂರಕ್ಷಣೆ ಮಾಡುವುದರಿಂದ ಬರಿದೇ ಮಾನವರಿಗಲ್ಲ ಪ್ರಾಣಿ, ಪಶು, ಪಕ್ಷಿ, ಇತ್ಯಾದಿ, ಜೀವಸಂಕುಲಗಳ ಒಳಿತಿಗೂ ಪ್ರಯತ್ನಿಸುವಂತಾಗುತ್ತದೆ. ಹಾಗೇ, ಮುಂಬರುವ ಜನಾಂಗಗಳ ಹಿತಕಾಪಾಡುವ ಕಾರ್ಯವನ್ನೂ ಕೈಗೊಂಡಂತಾಗುತ್ತದೆ. ಈ ಮೂಲಕ, ಸಮಾನತೆ ತತ್ವವನ್ನು ಇಂದಿನ ಮಾನವ ಪೀಳಿಗೆಗೆ ಸೀಮಿತಗೊಳಿಸುವುದು ಮಾತ್ರವಲ್ಲ ಮಾನವೇತರ ಜೀವಿ (non humans) ಗಳಿಗೂ ಹಾಗೇ ಇನ್ನೂ ಜನಿಸದ ತಲೆಮಾರು (unborn generations) ಗಳಿಗೂ ವಿಸ್ತರಿಸಿದಂತಾಗುತ್ತದೆ. ಈ ಮೂಲಕ ಸಮಾಜವಾದಿ ಸಿದ್ಧಾಂತ ವಿಶ್ವವ್ಯಾಪಿಯಾಗಿ ಅದಕ್ಕೆ ಅತ್ಯಂತ ಚಲನಾತ್ಮಕ (dynamic) ಆಯಾಮ ಒದಗುವಂತಾಗುವುದರ ಮೂಲಕ ಇದರ ಸತ್ವ ಗಟ್ಟಿಗೊಂಡು ಮತ್ತಷ್ಟು ವಿಸ್ತೃತಗೊಳ್ಳುವಂತಾಗುತ್ತದೆ. ಹೀಗೆ, ಪರಿಸರ, ನೈಸರ್ಗಿಕ ಸಂಪನ್ಮೂಲಗಳ ಬಳಕೆಯ ವಿಚಾರವನ್ನು ಸಮಾಜವಾದಿ ಚೌಕಟ್ಟಿನೊಳಗೆ ವಿವೇಚಿಸುತ್ತಾ ಅದನ್ನು ಕೃಷಿ ಕ್ಷೇತ್ರಕ್ಕೂ ವಿಸ್ತರಿಸಿದಲ್ಲಿ, ಸುಸ್ಥಿರ ಕೃಷಿ ಅಭಿವೃದ್ಧಿ ಬಗ್ಗೆ ಚಿಂತಿಸಲು ಸೂಕ್ತ ದೃಷ್ಟಿಕೋನ ಒದಗಿದಂತಾಗುತ್ತದೆ.

## ಕೃಷಿ ಮತ್ತು ಸಮಾಜವಾದ

ಮಾರ್ಕ್ಸ್‌ವಾದ, ಬಂಡವಾಳವಾದಗಳೆರಡೂ ಕೈಗಾರಿಕೆಗೆ ಪೂರಕವಾದಂತಹ ದ್ವಿತೀಯ ಸ್ಥಾನವನ್ನು ಕೃಷಿಗೆ ನೀಡಿರುತ್ತವೆ. ಇಂದಿನ ಈ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಕೈಗಾರಿಕೆಯೇ ಕೇಂದ್ರೀಯವಾಗಿದ್ದು, ಕೃಷಿಯ ಕಾರ್ಯವೇನಿದ್ದರೂ ಅದಕ್ಕೆ ಕಚ್ಚಾವಸ್ತು, ಆಹಾರವನ್ನೊದಗಿಸುತ್ತಾ ಇನ್ನೊಂದೆಡೆಯಿಂದ ಕೈಗಾರಿಕಾ ಸಿದ್ಧ ವಸ್ತುಗಳಿಗೆ ಮಾರುಕಟ್ಟೆ ನೀಡುವುದಾಗಿರುತ್ತದೆ. ಮಾರ್ಕ್ಸ್‌ವಾದದಲ್ಲಿ ರೈತಾಪಿ ವರ್ಗಕ್ಕೆ ಸ್ಥಾನವೇ ಇಲ್ಲದೆ, ಕ್ರಮೇಣ ಕೃಷಿಯೂ ಒಂದು ಕೈಗಾರಿಕೆಯಾಗಿ ಮಾರ್ಪಾಟಾಗಿ ರೈತರು ಕಾರ್ಮಿಕವರ್ಗವಾಗಿ ರೂಪಾಂತರ ಹೊಂದುವುದಾಗಿ ಪ್ರತಿಪಾದಿಸಲಾಗಿರುತ್ತದೆ. ಭಾರತೀಯ ಕೃಷಿಯಲ್ಲಿ ಸಮಾನತೆ ನೆಲೆಸಿ, ಭೂಸಂಬಂಧ ಉತ್ತಮಗೊಳ್ಳುವಂತಾಗಲು ನಮ್ಮ ಸಮಾಜದವಾದ ಮಹತ್ವದ ಪಾತ್ರವಹಿಸಿದೆ. ಸಮಾಜವಾದಿಗಳ ಈ ನಿರ್ಣಾಯಕ ಪಾತ್ರದಿಂದಲೇ ಭಾರತೀಯ ಕೃಷಿಯಲ್ಲಿ ಊಳಿಗಮಾನ್ಯ ಭೂಸಂಬಂಧಗಳು ನಾಶವಾಗಿ, ಭೂಹಂಚಿಕೆಯ ವಿಚಾರದಲ್ಲಿ ಗಮನಾರ್ಹಪ್ರಗತಿ ಸಾಧಿಸುವಂತಾಗಿದೆ ಮತ್ತು ಈ ಕಾರಣದಿಂದಲೇ ಭಾರತದ ಕೃಷಿ ಉತ್ಪಾದನೆಯಲ್ಲೂ ಗಣನೀಯ ಏರಿಕೆ ಸಾಧ್ಯವಾಗಿದೆ. ಆದರೆ ನಮ್ಮ ಸಮಾಜವಾದಿ ಚಿಂತನೆ ಇದರಿಂದ ಮೇಲೇರದೇ ಭಾರತೀಯ ಕೃಷಿಯಲ್ಲಿ ಅನಂತರ ತಲೆದೋರಿರುವ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳಲು ವಿಫಲವಾಗಿದೆ. ಅಂತಹ ಸಮಸ್ಯೆಗಳಲ್ಲಿ ಮುಖ್ಯವಾದವೆಂದರೆ: ಹಸಿರುಕ್ರಾಂತಿಯ ಪರಿಣಾಮದ ಅಸಮಾನ ಕೃಷಿ ಬೆಳವಣಿಗೆ ಹಾಗೇ ದೀರ್ಘಾವಧಿ ಪರಿಸರ ದೃಷ್ಟಿಯಿಂದ ಅಸ್ಥಿರ ಕೃಷಿ (unsustainable) ಅಭಿವೃದ್ಧಿಗಳೆನ್ನಬಹುದು.

ಈ ಎಲ್ಲಾ ಹಿನ್ನೆಲೆಯಲ್ಲೇ ಪರ್ಯಾಯ ಸುಸ್ಥಿರ ಕೃಷಿಯ ಅಭಿವೃದ್ಧಿ ಮಾದರಿ ಒಂದರ ಬಗ್ಗೆ ಚಿಂತಿಸಬೇಕಾಗಿದೆ. ಅದು 'ಇಂದು ಮತ್ತು ಮುಂದೆ ಜೀವನ ಅವಶ್ಯಕ ಅಸ್ತುಗಳಾದ ಅನ್ನ, ನೀರು, ಹಾಲು, ಹಣ್ಣು, ತರಕಾರಿ ಇತ್ಯಾದಿಗಳನ್ನು ಎಲ್ಲರ ಕೈಗೆ ಸತತವಾಗಿ ಎಟಕುವಂತೆ ಪೂರೈಕೆ ಮಾಡುವ ಅಭಿವೃದ್ಧಿ' ಎನ್ನಬಹುದು. ಈ ವ್ಯಾಖ್ಯೆಯ ರೀತಿಯಲ್ಲೇ ಹೋಗುವುದಾದಲ್ಲಿ, ಸುಸ್ಥಿರ ಕೃಷಿ ಅಭಿವೃದ್ಧಿ ಎಂಬುದು ಮೂರು ಮುಖ್ಯ ಉದಾರ ದೃಷ್ಟಿಕೋನಗಳನ್ನು ಒಳಗೊಂಡಿರಬೇಕಾಗುತ್ತದೆ. ಅವುಗಳೆಂದರೆ ಉತ್ಪಾದಕತೆಯ ಹೆಚ್ಚಳದ ದೃಷ್ಟಿಕೋನ, ಈ ರೀತಿಯ ಉತ್ಪಾದನೆಯನ್ನು ಹಂಚುವ ಸಮಾನತೆಯ ದೃಷ್ಟಿಕೋನ ಮತ್ತು ಈ ರೀತಿಯ ಅಭಿವೃದ್ಧಿಯ ಫಲ ಮುಂದೂ ಕೂಡ ಎಲ್ಲರಿಗೂ ಲಭ್ಯವಾಗುವಂತೆ ಮಾಡುವ ಅಂತರ್ ತಲೆಮಾರುಗಳ ದೃಷ್ಟಿಕೋನ. ಈ ಮೂರು ದೃಷ್ಟಿಕೋನಗಳು ಮೇಲ್ನೋಟಕ್ಕೆ ಬೇರೆ ಬೇರೆ ಎನಿಸಿದರೂ, ಒಳಹೊಕ್ಕು ನೋಡಿದಾಗ ಒಂದಕ್ಕೊಂದು ಹೊಂದಿಕೊಂಡಿರುವುದು ಅರಿವಾಗುತ್ತದೆ. ಸುಸ್ಥಿರ ಕೃಷಿ ಎಂಬುದು ಈ ರೀತಿ ವಿವಿಧ ದೃಷ್ಟಿ ಕೋನಗಳನ್ನು ಅಳವಡಿಸಿಕೊಂಡಾಗ, ಅವುಗಳೊಡನೆ 'ರಾಜಿ' (trade off) ಅನಿವಾರ್ಯ ಎನಿಸಬಹುದು. ಅದೂ ಸಮಾನತೆ ದೃಷ್ಟಿಕೋನಕ್ಕೆ ಅಧಿಕ ಒತ್ತು ಕೊಟ್ಟಾಗ, ಉತ್ಪಾದಕತೆಗೆ ಧಕ್ಕೆ ತಗುಲಬಹುದು ಎನ್ನುವವರಿದ್ದಾರೆ. ಅದೇ ರೀತಿ ಪರಿಸರ ದೃಷ್ಟಿಕೋನಕ್ಕೆ, ಮುಂದಿನ ಪೀಳಿಗೆಗೆ ಹೆಚ್ಚು ಮಹತ್ವ ನೀಡಿದರೆ ಅಭಿವೃದ್ಧಿಯು ಕುಂಠಿತವಾಗಬಹುದು ಎಂಬ ಸಂಶಯ ವ್ಯಕ್ತವಾಗಿದೆ. ಹಾಗಾಗಿ, ಸುಸ್ಥಿರ ಕೃಷಿಯಿಂದ ಉತ್ಪಾದಕತೆ ಮತ್ತು ಲಾಭಾಂಶಗಳನ್ನು

ತ್ಯಾಗ ಮಾಡಬೇಕಾಗುತ್ತದೆ ಎಂಬ ದೂರು ಕೇಳಿ ಬರುತ್ತಿದೆ. ಆದರೆ ಈ ಲಾಭ ನಷ್ಟಗಳ ಪರಿಕಲ್ಪನೆಯನ್ನು ಬರಿದೇ ವ್ಯಕ್ತಿಗತವಾಗಿ, ವೈಯಕ್ತಿಕವಾಗಿ ಅಥವಾ ಖಾಸಗಿಯಾಗಿ ಉತ್ಪಾದಕರ ದೃಷ್ಟಿಕೋನದಿಂದ ನೋಡುವ ಬದಲು, ಸಮಗ್ರವಾಗಿ ಇಡೀ ಸಮಾಜಕ್ಕೆ ಅನ್ವಯಿಸಿ ನೋಡಬೇಕಾಗುತ್ತದೆ. ಹಾಗೇ, ಇಂದಿಗೆ ಮಾತ್ರ ಸೀಮಿತಗೊಳಿಸದೆ, ಭವಿಷ್ಯದ ಪರಿಣಾಮವನ್ನು ಊಹಿಸಿದಾಗ ಮಾತ್ರ ನಿಜಾಂಶ ಹೊರಬರುತ್ತದೆ.

ಈ ಮೂರು ದೃಷ್ಟಿಕೋನಗಳನ್ನು ಸುಸ್ಥಿರ ಕೃಷಿಅಡಿಯಲ್ಲಿ ಸಮತೋಲನ ಸಾಧಿಸುವುದು ಹೇಗೆ ಎಂಬ ಪ್ರಶ್ನೆ ಇಲ್ಲಿ ಏಳುತ್ತದೆ. ಇದಕ್ಕೆ, ನಾವು ಯಾವ 'ಘಟಕ'ವನ್ನು ಈ ಸುಸ್ಥಿರ ಕೃಷಿ ಅಭಿವೃದ್ಧಿಯಲ್ಲಿ ಕೇಂದ್ರಿಯವಾಗಿಟ್ಟಕೊಳ್ಳತ್ತೇವೆ ಎನ್ನುವುದು ಮುಖ್ಯವಾಗುತ್ತದೆ. ಅದು ವೈಯಕ್ತಿಕ ಘಟಕವಾಗಿರದೇ, 'ಸಾಮೂಹಿಕ' ಒಡೆತನದ್ದಾಗಿರಬೇಕು. ಬರಿದೇ ರಾಜಕೀಯ ಸ್ವರೂಪದ್ದಾಗಿರದೇ ಅದು ಕೃಷಿ – ಪರಿಸರ – ಸಂಪನ್ಮೂಲಗಳನ್ನೂ ಪ್ರತಿನಿಧಿಸುವಂತಹದ್ದಾಗಿರಬೇಕು. ಈ ನಿಟ್ಟಿನಲ್ಲಿ ಇಂದು ಹೆಚ್ಚು ಪ್ರಾಮುಖ್ಯತೆ ಪಡೆಯುತ್ತಿರುವ 'ಜಲಾನಯನ ಪ್ರದೇಶ ಅಭಿವೃದ್ಧಿ'ಯನ್ನು ತೆಗೆದುಕೊಂಡರೆ, ಇದು ಸುಸ್ಥಿರ ಕೃಷಿ ಅಭಿವೃದ್ಧಿಗೆ ಬಹಳ ಹತ್ತಿರವಾಗಿದೆ ಎನ್ನಬಹುದು. ಒಂದು ಜಲಾನಯನ ಪ್ರದೇಶ ಮೂಲತಃ ಕೃಷಿ ಪರಿಸರ ವ್ಯವಸ್ಥೆ (Agro Ecosystem) ಸಂಬಂಧಿಸಿದ ಘಟಕ. ಇದರ ಅಭಿವೃದ್ಧಿ ಎಂದರೆ ನೀರು ಸಂರಕ್ಷಣೆ, ಮಣ್ಣು ಸಂರಕ್ಷಣೆ, ಅರಣ್ಯ ಯೋಜನೆ, ಇತ್ಯಾದಿ. ಹಾಗಾಗಿ ಪರಿಸರ ಅಭಿವೃದ್ಧಿ ದೃಷ್ಟಿಯಿಂದ ಇದು ಅತ್ಯಂತ ಸೂಕ್ತ ಮಾದರಿಯಾಗಿದೆ.

ಇದು ಕೇವಲ ಕೃಷಿ ಭೂಮಿಯ ಅಭಿವೃದ್ಧಿಯಲ್ಲ. ಇಡೀ ಜಲಾನಯನ ಪ್ರದೇಶದ ಅಭಿವೃದ್ಧಿಯ ಗುರಿ ಹೊಂದಿರುವಂತಹದ್ದು. ಹಾಗಾಗಿ ಕೇವಲ ರೈತರು ಮಾತ್ರವಲ್ಲ ಇಡೀ ಸಮುದಾಯವೇ ಒಳಗೊಳ್ಳುವಂತಹದ್ದು, ಇಲ್ಲಿ ಕೃಷಿಯೇತರ ಪ್ರದೇಶವಾದ ಗೋಮಾಳ ಭೂಮಿ, ಅರಣ್ಯ, ಹೀಗೆ ಸಾಮೂಹಿಕ ಒಡೆತನ ಸಂಪನ್ಮೂಲಗಳ ರಕ್ಷಣೆಯೂ ಮುಖ್ಯ ಗುರಿಯಾಗಿರುತ್ತದೆ. ಇದರ ಅಭಿವೃದ್ಧಿಗೆ ಎಲ್ಲರೂ ಒಳಗೊಂಡು, ಇದರ ಲಾಭದಲ್ಲಿ ಎಲ್ಲರಿಗೂ ಅದರಲ್ಲೂ ಮುಖ್ಯವಾಗಿ ಬಡಜನರಿಗೂ ಪಾಲು ದೊರೆಯುವಂತಾಗುವುದರಿಂದ, ಇದು ಸಮಾನತೆಯ ದೃಷ್ಟಿಕೋನದಿಂದ ಅತ್ಯಂತ ಸೂಕ್ತ ಘಟಕವಾಗುತ್ತದೆ. ಉದಾಹರಣೆಗೆ ಮಣ್ಣು ರಕ್ಷಣೆ, ನೀರು ರಕ್ಷಣೆ, ಸಾಮಾಜಿಕ ಅರಣ್ಯ ಯೋಜನೆಗಳ ಅಡಿಯಲ್ಲಿ ಅಪಾರ ಶ್ರಮ, ದಿನಗೂಲಿ ಸೃಷ್ಟಿಯಾಗುವಂತಾಗುತ್ತದೆ. ಹಾಗೇ ಬಡವರಿಗೆ ಅತ್ಯಂತ ಅಗತ್ಯವಾದ ಉರುವಲು, ಅರಣ್ಯ ಉತ್ಪನ್ನ, ಆಹಾರಗಳೂ ದೊರೆಯುವಂತಾಗುತ್ತದೆ. ಇಲ್ಲಿ ಅಭಿವೃದ್ಧಿಯ ಲಾಭ ಕೆಲವರಿಗೆ ಮಾತ್ರ ದೊರಕದೆ ಹಲವರ ಕೈ ಸೇರಿ, ಸಾಮಾಜಿಕ ಲಾಭ ಗರಿಷ್ಠವಾಗಿರುತ್ತದೆ. ಹಾಗೇ, ಬರಿದೇ, 'ಇಂದು' ಮಾತ್ರವಲ್ಲ ಮುಂದೆ ನಿರಂತರವಾಗಿ ಈ ಲಾಭ ಹರಿಯುವಂತಾಗುತ್ತದೆ.

ಇದರ ಜೊತೆಗೆ ಸುಸ್ಥಿರ ಕೃಷಿ ಅಭಿವೃದ್ಧಿಗೆ ಅಗತ್ಯವಿರುವ ಇತರ ಮುಖ್ಯ ಅಂಶಗಳಾದ – ಯೋಗ್ಯ ತಂತ್ರಜ್ಞಾನ, ಉತ್ತಮ ಸಾಂಸ್ಥಿಕ ರಚನೆ ಬಗ್ಗೆ ಕೂಡ ಗಮನ ಹರಿಸಬೇಕಾಗುತ್ತದೆ. ಸುಸ್ಥಿರ ಕೃಷಿ ಅಭಿವೃದ್ಧಿಯಲ್ಲಿ ತಂತ್ರಜ್ಞಾನಕ್ಕೆ ಕೇಂದ್ರೀಯವಲ್ಲದಿದ್ದರೂ, ಪ್ರಮುಖ ಸ್ಥಾನವಂತೂ ಇದ್ದೇ ಇದೆ. ಈ ನಿಟ್ಟಿನಲ್ಲಿ ಚಿಂತಿಸಿದಾಗ, ಕಾಂಪೋಸ್ಟ್,

ಹಸಿರೆಲೆ ಗೊಬ್ಬರ, ಜೈವಿಕ ಗೊಬ್ಬರ, ಎರೆಗೊಬ್ಬರ, ಜೈವಿಕ ಕೀಟನಾಶಕ, ಸೌರ, ವಾಯುಶಕ್ತಿ, ಜೈವಿಕ ಅನಿಲಗಳಿಂದ ಅರಣ್ಯ ಕೃಷಿ, ಮಣ್ಣು ಮತ್ತು ನೀರು ಸಂರಕ್ಷಣೆ– ಹೀಗೆ ವಿವಿಧ ತಂತ್ರಜ್ಞಾನಗಳನ್ನು ಇಲ್ಲಿ ಪಟ್ಟಿ ಮಾಡಬಹುದು. ಜೊತೆಗೆ ನಮ್ಮ ರೈತ ಸಮುದಾಯದೊಳಗೆ, ಅವರ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಸನ್ನಿವೇಶ, ಭೌಗೋಳಿಕ ರಚನೆ ಮತ್ತು ಅವರ ಅಗತ್ಯಗಳಿಗೆ ಅನುಗುಣವಾಗಿ ಸೃಷ್ಟಿಯಾಗಿದ್ದು ವರ್ಷಗಳಿಂದ ಹರಿದು ಬರುತ್ತಿರುವ 'ದೇಶೀಯ ಜ್ಞಾನ ಮತ್ತು ತಂತ್ರಜ್ಞಾನ' (Indegeneous Knowledge and Technology) ಗಳತ್ತ ನಾವಿಂದು ಅವಶ್ಯಕವಾಗಿ ದೃಷ್ಟಿ ಹರಿಸಬೇಕಾಗಿದೆ.

ಸುಸ್ಥಿರ ಕೃಷಿ ಅಭಿವೃದ್ಧಿಗೆ ಅತ್ಯಗತ್ಯವಾಗಿರುವ ಮತ್ತೊಂದು ವಿಚಾರ ಎಂದರೆ ಉತ್ತಮ ಉತ್ಪಾದನಾ ಸಂಬಂಧದ ನಿರ್ಮಾಣ ಮಾಡುವುದು. ಅಂದರೆ ಕೃಷಿ ಉತ್ಪಾದನೆಯಲ್ಲಿ ತೊಡಗಿರುವ ವಿವಿಧ ವರ್ಗಗಳ ನಡುವೆ ಹಾಗೇ ವ್ಯಕ್ತಿಗಳ ಮತ್ತು ಭೂಮಿಯ ಮಧ್ಯೆ ಉತ್ತಮ ಸಂಬಂಧ ಏರ್ಪಡುವಂತೆ ಸೂಕ್ತ 'ಸಾಂಸ್ಥಿಕ ಸುಧಾರಣೆ' (Institutional reform) ತರುವುದು. ಅಂದರೆ ಇಲ್ಲಿ ಗೇಣಿದಾರಿಕೆಯಾಗಲೀ, ಭೂ ಒಡೆಯರೊಡನೆ ಉತ್ಪನ್ನದ ಹಂಚಿಕೆಯಾಗಲೀ ಇರದಂತೆ, ಈ ಮಧ್ಯವರ್ತಿಗಳ ವರ್ಗವನ್ನು ತೊಡೆದುಹಾಕಬೇಕು. ಇದೇ ಭೂಸುಧಾರಣೆಯ ಮೂಲತತ್ವ. ಜೊತೆಗೆ 'ಭೂಮಿತಿ' ಯಿಂದ ದೊರೆತ ಹೆಚ್ಚುವರಿ 'ಭೂಮಿಯ' ಪುನರ್ ಹಂಚಿಕೆ ಮಾಡುವುದರಿಂದ, ಕೃಷಿ ಕಾರ್ಮಿಕರ ಸ್ಥಿತಗತಿಯನ್ನೂ ಸುಧಾರಿಸಬಹುದಾಗಿದೆ. ಈ ನಿಟ್ಟಿನಲ್ಲಿ ಅಂತಿಮ ಹಂತವಾಗಿ, ಕೃಷಿಯಲ್ಲಿ ಸಹಕಾರಿ ಸಂಸ್ಥೆಗಳ ರಚನೆ ಅತ್ಯಂತ ಸೂಕ್ತವಾಗಿದೆ. ಸಹಕಾರಿ ಬೇಸಾಯದಿಂದ ಕೃಷಿಯಲ್ಲಿ ಸಮಾನತೆಯನ್ನು ಮಾತ್ರವಲ್ಲದೇ, 'ಗಾತ್ರದ ಲಾಭದಾಯಕತೆ' ಯನ್ನು ಪಡೆದು, ನೀರಾವರಿಯ ಅಳವಡಿಕೆಯನ್ನೂ ಯಾಂತ್ರೀಕರಣವನ್ನೂ ಕೈಗೊಂಡು ಉತ್ಪಾದಕತೆಯನ್ನು ಹೆಚ್ಚಿಸಬಹುದಾಗಿದೆ. ಸಣ್ಣ ಬಡರೈತರನ್ನೂ, ಕೃಷಿ ಕಾರ್ಮಿಕರನ್ನೊಳಗೊಂಡ 'ಸಹಕಾರಿ ಸಾಮೂಹಿಕ ಬೇಸಾಯ' (Co-operative Collective Farming) ವನ್ನು ಏರ್ಪಡಿಸಿ ನಿರುದ್ಯೋಗ ನಿವಾರಣೆ, ಆಹಾರ ಧಾನ್ಯಗಳ ಪೂರೈಕೆ ಸುಸ್ಥಿರ ಅಭಿವೃದ್ಧಿಗಳಂತಹ ವಿಚಾರಗಳಿಗೆ ಒತ್ತುಕೊಡಬಹುದಾಗಿದೆ. ಒಟ್ಟಾರೆಯಾಗಿ, ಸಹಕಾರಿ ಬೇಸಾಯದ ಮೂಲಕ ಸುಸ್ಥಿರ ಕೃಷಿ ಅಭಿವೃದ್ಧಿಗೆ ಜೀವಾಳವಾಗಿರುವ ಉತ್ಪಾದಕತೆಯ ಹೆಚ್ಚಳ ಮಾಡಿ ಸಮಾನತೆ ಮತ್ತು ಸಹೋದರ ಭಾವನೆಗಳನ್ನೂ ಕೃಷಿಯಲ್ಲಿ ಗಟ್ಟಿ ಮಾಡಬಹುದಾಗಿದೆ. ಹೀಗೆ, ಸಮಾಜವಾದದ ಹಿನ್ನೆಲೆಯಿಂದ ಪರಿಸರ, ನೈಸರ್ಗಿಕ ಸಂಪನ್ಮೂಲಗಳ ಬಳಕೆಯನ್ನು ಕೇಂದ್ರವಾಗಿಟ್ಟುಕೊಂಡು ರೂಪಿಸುವ ಕೃಷಿ ಯೋಜನೆಗಳು ನಮ್ಮ ದೇಶದ ಪರಿಸ್ಥಿತಿಗೆ ಹೊಂದಿಕೊಳ್ಳುವುದು ಮಾತ್ರವಲ್ಲ ಇಡೀ ದೇಶದ ಅರ್ಥವ್ಯವಸ್ಥೆಗೆ ದೃಢತೆಯನ್ನು ಒದಗಿಸಬಲ್ಲುದು.

*

---

ಡಾ॥ ಟಿ.ಎಸ್. ಪ್ರಕಾಶ್ ಕಮ್ಮರಡಿ, ಅಧ್ಯಾಪಕರು, ಅಗ್ರಿಕಲ್ಚರಲ್ ಎಕನಾಮಿಕ್ಸ್ ಡಿಪಾರ್ಟ್‌ಮೆಂಟ್
ಯು.ಎ.ಎಸ್., ಜಿ.ಕೆ.ವಿ.ಕೆ., ಬೆಂಗಳೂರು.



# ಈಗಿರುವ ಸಮಾಜವಾದ: ಕೆಲವು ಆಲೋಚನೆಗಳು

-ಕೃತಿ ಆರ್.

ಸಮಾಜವಾದಿ ಎನ್ನುವುದು ಇತ್ತೀಚೆಗೆ ನಮ್ಮಲ್ಲಿ ಒಂದು ಬೈಗುಳವಾಗಿದೆ. ನಮ್ಮ ಊರಲ್ಲಂತೂ ದಿನಪತ್ರಿಕೆಯಲ್ಲಿ ಬರುವ ಯಾವುದೇ ಸುದ್ದಿಯನ್ನು ಊರ ಅಂಗಡಿಬಯಲಿನ 'ಕಟ್ಟೆ ವಿಶ್ಲೇಷಣೆ' ಮಾಡುತ್ತಿರಲಿ ನೀವು ಸಮಾಜವಾದಿಗಳು ಎನ್ನುವ ಒಂದು ಪ್ರತ್ಯಯ ಸೇರಿಸಿಕೊಂಡೇ ಮುಂದಿನ ಮಾತು. ನೀವು ಸಮಾಜವಾದಿಗಳು ಅಂದರೆ ಯಾರು? ಒಂದು ಸಮಾನತೆಯ ಆಶಯವುಳ್ಳವರು. ಮತ್ತೊಂದು ಆಚಾರ ಹೇಳುವುದು ತಿನ್ನುವುದು ಬದನೆಕಾಯಿ ಜಾತಿಯವರು. ಜಗತ್ತಿನಲ್ಲೆಲ್ಲ ಆಗಿ ಹೋಗಿರುವ, ಈಗಿರುವ ಸಮಾನತೆಯ ಪ್ರಯೋಗಗಳನ್ನು, ಅದರ ಬೇರೆ ಬೇರೆ ಅವತಾರಗಳನ್ನು ನೋಡಿ ಈ ಸಮಾನತೆ ಸಾಧ್ಯವಿಲ್ಲ ಅನ್ನುವುದು ಒಂದು ಧ್ವನಿಯಾದರೆ ಇನ್ನೊಂದು ಸಮಜಾವಾದಿ ಆಚರಣೆಗಳನ್ನು ನೋಡಿಯೆ ರೋಸಿಹೋಗಿರುವುದು. ಸಮಾಜವಾದಿ ಪಕ್ಷ ಎಂದು ಕರೆದುಕೊಳ್ಳುತ್ತಿರುವ ಪಕ್ಷಗಳು, ಅವು ಪ್ರಾರಂಭವಾದಾಗ ಅದರ ನಂಬಿಕೆಗಳು ಏನೇ ಇರಲಿ, ಅವರು ಬೇರೆ ಪಕ್ಷಗಳಿಗಿಂತ ಭಿನ್ನವಾದುದ್ದೇನೂ ಮಾಡುತ್ತಿಲ್ಲ. ಸಮಾಜವಾದವೆಂಬ ಪದ ಜಗ್ಗಿದಷ್ಟೂ ಉದ್ದವಾಗುವ ಸಿದ್ಧಾಂತ ಮಾಡಿಕೊಂಡಾಗಿದೆ. ಮುಸೊಲೋನಿಯು ಕೂಡ ಫ್ಯಾಸಿಸ್ಟ್ ಆಗುವ ಮೊದಲು ಸಮಾಜವಾದಿಯಾಗಿದ್ದ, ನಾಜಿಗಳು ಕೂಡ ನ್ಯಾಶನಲ್ ಸೋಶಿಯಲಿಸ್ಟ್ ವರ್ಕರ್ ಪಾರ್ಟಿಯಲ್ಲಿದ್ದರು. ನಮ್ಮಲ್ಲಿ ಪಶ್ಚಿಮ ಬಂಗಾಲದಲ್ಲಿ ಮಾರ್ಕ್ಸಿಸ್ಟ್ ಎಂದು ಘೋಷಿಸಿಕೊಂಡ ಪಕ್ಷವೊಂದು ಬಂಡವಾಳಿಗರ ಹಿತಾಸಕ್ತಿಯನ್ನು ಕಾಯಲು ಹೋಗಿ ಯಾರ ಭೂಮಿ, ಜೀವನ ಮಾರ್ಗವನ್ನು ಕಸಿದುಕೊಳ್ಳಲು ಪ್ರಯತ್ನಿಸಿದವೋ ಅವರ ವೋಟಿಂದಲೇ ಬಿದ್ದುಹೋಗಿದೆ. ಒಂದಲ್ಲ ಒಂದು ರೀತಿಯ ಸಮಾಜವಾದಿ ಪ್ರಣಾಳಿಕೆಯ ಮೇಲೆ, ಅಥವಾ ಕಾರ್ಯಕ್ರಮಗಳ ಮೇಲೆ ಹುಟ್ಟಿದ ಪಕ್ಷಗಳು ಈಗ ಯಾವುದೇ ತತ್ವಗಳಿಲ್ಲದೇ ತಮ್ಮ ಸಂಬಂಧಿಕರ ಸ್ನೇಹಿತರ ಯೋಗಕ್ಷೇಮ ಮಾತ್ರ ನೋಡಿಕೊಳ್ಳುತ್ತಿರುವ ಪಕ್ಷಗಳ ಪಟ್ಟಿ ಮಾಡಲು ಈ ಸಣ್ಣ ಲೇಖನದಲ್ಲಿ ಜಾಗವೇ ಸಾಕಾಗುವುದಿಲ್ಲ. ಇಂದಿರಾ ಗಾಂಧಿಯವರು- ಬಡವರ ಓಟಿಗಾಗಿ- ನಮ್ಮ ಸಂವಿಧಾನದಲ್ಲೇ ಸಮಾಜವಾದಿ ಕಾರ್ಯಕ್ರಮದ ತುಣುಕುಗಳನ್ನು ಸೇರಿಸಿದರು. ಆದರೆ ಅವರ ಮಗ ಮತ್ತು ಅವರ ಪಕ್ಷದ ಮುಂದಿನ ಪೀಳಿಗೆಯವರು

ಆರ್ಥಿಕತೆಯ ಉದಾರೀಕರಣಕ್ಕೆ ಬಾಗಿಲನ್ನು ತೆರೆದರು. ನಂತರ ಬಂದ ಬಿಜೆಪಿ ಕೂಡ ರಾಷ್ಟ್ರಪ್ರೇಮದ ಮಾತಾಡುತ್ತಲೇ ಅವರಷ್ಟೇ ಉತ್ಸಾಹದಿಂದ ಉದಾರೀಕರಣವನ್ನು ಮುಂದುವರೆಸಿತು.

ನಮಗೆ ಸಮಾಧಾನ ಕೊಡುವುದು ಸಧ್ಯ ನಾವು ಮಾತ್ರ ಹಾಗಲ್ಲ, ಜಗತ್ತೂ ಹಾಗೆ ಇದೆ ಎನ್ನುವ ಆಲೋಚನೆ ಮಾತ್ರ. ಅಮೇರಿಕಾ ಮತ್ತು ಯೂರೋಪನ್ನೇ ನೋಡಿ. ಯಾವ ಬಂಡವಾಳ ಜಗತ್ತು ಅವರ ಈಗಿನ ಆರ್ಥಿಕ ತೊಂದರೆ ತಾಪತ್ರಯಗಳಿಗೆ ಕಾರಣವಾಗಿದೆಯೋ ಅದೇ ತಮ್ಮ ರಕ್ಷಣೆ ಮಾಡುತ್ತದೆಯೆಂದು ಮತ್ತೆ ಅದಕ್ಕೆ ತಲೆಬಾಗಿದ್ದಾರೆ. ಚೈನಾ 'ಕಮ್ಯುನಿಸ್ಟ್' ಪಾರ್ಟಿಯ (ನಮ್ಮ ದೇಶದ ಕೆಲವು ಸ್ವಘೋಷಿತ ಕಮ್ಯುನಿಸ್ಟರು ಅವರ ಮಾದರಿಯನ್ನೇ ನೆಚ್ಚಿದಂತೆ ಕಾಣುತ್ತಾರೆ)ನಾಯಕತ್ವದಲ್ಲಿ ಬಂಡವಾಳದ ಹಿಂದೆ ಬಿದ್ದು ಕೆಲವು ದಶಕಗಳೇ ಕಳೆದವು. ಇನ್ನೇನಿಲ್ಲದಿದ್ದರೂ ಚೈನಾದ ಮಾದರಿ, ಬಂಡವಾಳ ಆಧಾರಿತ ಸಮಾಜ ಪ್ರಜಾಪ್ರಭುತ್ವವನ್ನು ತರುತ್ತದೆ ಎನ್ನುವ ನವ ಉದಾರವಾದಿಗಳ ನಂಬಿಕೆಯನ್ನಾದರೂ ಹುಸಿ ಮಾಡುತ್ತದೆ.

ಹೀಗಿರುವುದರಿಂದಲೇ ಸಮಾಜವಾದ ಏನೆಂಬುದನ್ನು ಖಚಿತಪಡಿಸಿಕೊಳ್ಳಬೇಕಾಗಿದೆ.

ಸಮಾಜವಾದವೆಂದರೆ ನಮ್ಮ ಕಾಲಕ್ಕೆ ಏನು ಅನ್ನುವದಕ್ಕಿಂತ ಅದು ಏನಲ್ಲ ಅನ್ನುವುದನ್ನು ಹೇಳುವುದೇ ಸುಲಭ. ಅದೇನಲ್ಲ ಅಂದರೆ ಬಂಡವಾಳಶಾಹಿಯಲ್ಲ. ಅಥವಾ ನವ ಉದಾರವಾದಿಗಳ ಮಿತಿಯಿಲ್ಲದ ಬಂಡವಾಳವಂತೂ ಅಲ್ಲ. ಪಕ್ಷ ರಾಜಕಾರಣದಲ್ಲಿ ಕಂಡ ಹಾಗೆ ಯಾವುದನ್ನ ಸಮಾಜವಾದಿ ಎಂದು ಕರೆಯುತ್ತೇವೆಯೋ ಅದು ಸರಕಾರ (ರಾಷ್ಟ್ರ-ರಾಜ್ಯ) ತಮ್ಮ ವಾಣಿಜ್ಯ ವ್ಯವಹಾರಗಳಿಗೆ ತೀರ ತೊಂದರೆ ಕೊಡದಷ್ಟು ಬಡವರನ್ನು ಖುಷಿಯಾಗಿಡುವುದಕ್ಕೆ ಇರುವ ಕಾರ್ಯಕ್ರಮಗಳು. (ಫುಡ್ ಬಿಲ್, ಉದ್ಯೋಗ ಖಾತ್ರಿ ಯೋಜನೆಗಳು ಇಂತವೇ). ಇವು ಕೆಲವು ದೇಶಗಳಲ್ಲಿ ಸೀಮಿತವಾದ ಫಲಕೊಟ್ಟಿದೆ. ಆದರೆ ನಾವು ನೆನಪಿನಲ್ಲಿಡಬೇಕಾದ್ದು ಇಂಥಾ ದೇಶಗಳಲ್ಲಿ, ಉದಾಹರಣೆಗೆ ಎರಡನೇ ಮಹಾಯುದ್ಧದ ನಂತರ ಪಶ್ಚಿಮ ಯುರೋಪಿನಲ್ಲಿ ಕಾಣುವ ಶಾಂತಿ ಸಮೃದ್ಧಿಗೆ ಸಮಾಜ ಕಲ್ಯಾಣ ಕೆಲಸಗಳು ಮತ್ತು ಸುಧಾರಿತ ತೆರಿಗೆಯ ಮೂಲಕ ಸಂಪತ್ತಿನ ಮರು ಹಂಚಿಕೆಯಷ್ಟೆ ಅವರು ಜಗತ್ತಿನ ಮೂಲೆಗಳ ವಸಾಹತಿನಿಂದ ಕೊಳ್ಳೆ ಹೊಡೆದ ಸಂಪನ್ಮೂಲಗಳೂ ಕಾರಣ. ವಸಾಹತುಗಳು ಕೊನೆಗೊಂಡರೂ ಅವು 'ಮುಂದುವರೆಯುತ್ತಿರುವ' ದೇಶಗಳ ಭ್ರಷ್ಟ ಸರಕಾರ ಮತ್ತು ಮೇಲ್ವರ್ಗದ ಬೆಂಬಲದಿಂದ ಗಟ್ಟಿಯಾದ ವಾಣಿಜ್ಯ ನೆಲೆಯಾಗಿ ಈ ವಸಾಹತುಗಳು ಮುಂದುವರೆಯುತ್ತಿವೆ. ಬಂಡವಾಳವನ್ನು ಪರಿಗಣಿಸದಿದ್ದರೆ ವಸಾಹತುಶಾಹಿ/ ಸಮ್ರಾಜ್ಯಶಾಹಿ ಮತ್ತು ಅದರ ಮುಂದುವರೆದ ರೂಪಗಳ ಯಾವುದೇ ವಿಮರ್ಶೆ ಕೂಡ ಪೂರ್ತಿಯಾಗುವುದಿಲ್ಲ. ನಯವಾದ, ಕಾರುಣ್ಯದ ಬಂಡವಾಳಶಾಹಿಯೇ ಎಷ್ಟೋ ಕಡೆ ಸಮಾಜವಾದವಾಗಿ ಕಾಣಿಸುತ್ತದೆ. ಇದು ಸುಸ್ಥಿರವಾದುದಲ್ಲ (ಅನ್ ಸಸ್ಟೇನೆಬಲ್). ಮತ್ತು ಬಂಡವಾಳದ ದಾಹವನ್ನು ಮಿತಗೊಳಿಸಲು ಸಾಧ್ಯವಾಗುವುದಿಲ್ಲ. ಅಲ್ಲದೇ ಇಂತಾ ಸಮಾಜವಾದ ಬಡವರ, ಶೋಷಿತರ ಜೀವವನ್ನು ಮಾತ್ರ ಉಳಿಸುವಷ್ಟು ಭಿಕ್ಷೆಯನ್ನು ಕೊಟ್ಟು, ಅವರ ನೋವಿನ ಮೂಲಕಾರಣವನ್ನು ಕೊನೆಗೊಳಿಸುವ ಅರ್ಥವತ್ತಾದ ಬದಲಾವಣೆಯನ್ನು ಮುಂದಕ್ಕೆ ಹಾಕುತ್ತದೆ.

ಆಸ್ಕರ್ ವೈಲ್ಡ್ (ಸೋಲ್ ಆಫ್ ಮ್ಯಾನ್ ಅಂಡರ್ ಸೋಶಿಯಲಿಸಮ್-1981) ಸುಮಾರು ಒಂದು ಶತಮಾನದ ಹಿಂದೆ ಹೇಳಿದ ಹಾಗೆ 'ಆದರೆ ಇದು ಉತ್ತರವರಲ್ಲ. ಇದು ಕಷ್ಟವನ್ನು ಹೆಚ್ಚುಮಾಡುತ್ತದೆ. ಬಡತನವು ಸಾಧ್ಯವಾಗದಂತ ತಳಹದಿಯ ಮೇಲೆ ನಾವು ಸಮಾಜವನ್ನು ಕಟ್ಟುವುದು ಸರಿಯಾದ ಉದ್ದೇಶವಾಗುತ್ತದೆ. ಈ ಉದ್ದೇಶವನ್ನು ಜಾರಿಗೆ ತರಲು ಪರಹಿತಚಿಂತನೆ ನಿಜವಾಗಿ ತಡೆಯುನ್ನುಂಟು ಮಾಡಿದೆ. ತಮ್ಮ ಗುಲಾಮರನ್ನು ಕರುಣೆಯಿಂದ ನೋಡುವವನೇ ಹೆಚ್ಚಿನ ಕೇಡನ್ನು ಮಾಡುವ ಮಾಲೀಕನಾಗಿರುತ್ತಾನೆಯೋ ಹಾಗೆಯೇ. ಇದರಿಂದ ಗುಲಾಮಗಿರಿಯ ಬಗ್ಗೆ ಚಿಂತನೆ ನಡೆಸುವವರನ್ನು ಮತ್ತು ಇದರಿಂದ ನೋವನ್ನನುಭವಿಸುತ್ತಿರುವವರನ್ನು ಈ ವ್ಯವಸ್ಥೆಯ ಕರಾಳತೆಯನ್ನು ಅರಿಯುವುದನ್ನು ತಡೆಯುತ್ತಾರೆ'

ಹಾಗೆಂದ ಮಾತ್ರಕ್ಕೆ ನಾವು ನಮ್ಮ ಸುತ್ತಲಿನ ಜನರ ಸಂಕಷ್ಟಕ್ಕೆ ಕುರುಡಾಗಿರಬೇಕೆಂದಲ್ಲ. ಆದರೆ ಇದರ ಉದಾಹರಣೆಗಳನ್ನು ನೋಡಲು ನಾವು ತೀರಾ ಆಳಕ್ಕೆ ಹೋಗಿ ಚಿಂತನೆ ಮಾಡಬೇಕಿಲ್ಲ. ತಮ್ಮ ಸಮಾಜ ವಿರೋಧಿ ಕೆಲಸಗಳಿಂದ ಹುಟ್ಟಿದ ಸಿಟ್ಟನ್ನು ತಣಿಸಲೆಂದೇ ಕಾಣುವ ಕಾರ್ಪೋರೇಟ್‌ಗಳ ಧನಸಹಾಯದಲ್ಲಿ ನಡೆಯುತ್ತಿರುವ ಎನ್‌ಜಿಓ ಗಳು ಮತ್ತು ಶಿಕ್ಷಣ ಸಂಸ್ಥೆಗಳನ್ನು ನೋಡಿದರೆ ಆಸ್ಕರ್ ವೈಲ್ಡ್‌ನ ಮಾತು ಅರ್ಥವಾಗುತ್ತದೆ. ಈಗಿನ ಕಾರ್ಪೋರೇಟ್ ಸೋಶಿಯಲ್ ರೆಸ್ಪಾನ್ಸಿಬಿಲಿಟಿ ಕೂಡ ಇಂಥದೇ ಒಂದು ಉದಾಹರಣೆ.

## ಸೂಕ್ಷ್ಮಗ್ರಹಿಕೆಯಿಲ್ಲದ ಸರಕಾರ

ಬಂಡವಾಳ ಸಮಾಜದಲ್ಲಿ ಬಡವರ ಶ್ರಮ, ಅವರ ಪ್ರತಿಭೆ ತಮ್ಮ ಹೊಟ್ಟೆ ತುಂಬಿಸಿಕೊಳ್ಳುವುದಕ್ಕೆ ಮಾತ್ರ ಉಪಯೋಗವಾದರೆ, ಶ್ರೀಮಂತರು ಇರುವ ದುಡ್ಡನ್ನು ಉಳಿಸಿಕೊಳ್ಳುವ, ಜಾಸ್ತಿ ಮಾಡುವ ಜಂಜಡದಲ್ಲಿರುತ್ತಾರೆ. ನಾವು ಮಧ್ಯಮವರ್ಗದ ಜನ ತಮ್ಮೆಲ್ಲ ತೊಂದರೆಗಳನ್ನು ಸಹಿಸಿಕೊಂಡು ತಮ್ಮ ಮಕ್ಕಳ ಹದಿಹರೆಯವನ್ನೆಲ್ಲ ಸ್ಕೂಲು, ಟ್ಯೂಶನ್‌ಗಳಲ್ಲಿ ಕೊಳೆಸಿ ದುಡ್ಡು ಹೊಂದಿಸಿ ಇಂಜಿನಿಯರ್ ಓದಿಸಿ ಕೊನೆಗೆ ಅವರು ಮಾಡುವ ಕೆಲಸ ಏನೆಂದರೆ ಮೊಬೈಲ್ ಫೋನಿನ ಗೇಮ್ ಆಪ್ಸ್ ಡಿಸೈನ್ ಮಾಡುವುದು, ಬೇರೆಯವರ ಹಣದ ವ್ಯವಸ್ಥೆ (ಸ್ಟಾಕ್ ಪ್ರೊಫೈಲ್) ನೋಡಿಕೊಳ್ಳುವುದು. ಇದು ಪ್ರತಿಭೆಯ, ಶ್ರಮದ ಪ್ರತಿಫಲ, ಸರಕಾರದ, ಮನೆಯವರ ಬಂಡವಾಳದ ಪ್ರತಿಫಲ. ಈ ರೀತಿಯ ಕ್ಷುಲ್ಲುಕ ಬೆಳವಣಿಗೆಯಿಂದ ವೃದ್ಧಿಸಿದ ಶ್ರೀಮಂತಿಕೆ ಸಮಾಜದ ಅಂಚಿನಲ್ಲಿ ಬದುಕುವವರೆಗೂ ತಲುಪುತ್ತದೆಯೆಂದು ಹೇಳಬಹುದು. ರೈತರಿಂದ ಕೂಲಿಯವರಿಗೆ ತಲುಪುತ್ತದೆ. ಐಟಿ ಬಿಟಿಯವರಿಂದ ಅವರ ಮನೆ ಕೆಲಸ ಮಕ್ಕಳನ್ನು ನೋಡಿಕೊಳ್ಳುವ ಉತ್ತರ ಕರ್ನಾಟಕದ ಬರಪೀಡಿತರಿಗೆ ಹಣ ತಲುಪುತ್ತದೆ. ಇದರಲ್ಲಿ ಸ್ವಲ್ಪ ಸತ್ಯ ಇದೆ. ಆದರೆ ಇದು ಈ ವ್ಯವಸ್ಥೆ ತೆರುತ್ತಿರುವ ಪೂರ್ತಿ ಬೆಲೆಯನ್ನು ಗಣನೆಗೆ ತಂದುಕೊಳ್ಳುವುದಿಲ್ಲ. ನಮ್ಮ ಯೋಜನಾ ಸಮಿತಿಗಳು, ರಾಜಕಾರಣಿಗಳು, ಮತ್ತು ಬುರೋಕ್ರಾಟ್ಸ್‌ಗಳು, ಬಡತನ ರೇಖೆಯನ್ನು ನಿಗದಿಮಾಡುವುದಕ್ಕೆ ಮಾಡುವ ಸರ್ಕಸ್‌ನನ್ನು ನೋಡಿದರೆ ಸಾಕು ಅವರು ಸತ್ಯವನ್ನು ಮುಚ್ಚಿಡುವುದಕ್ಕೆ ಪ್ರಯತ್ನಿಸುತಿದ್ದಾರೆಂಬ ಅರಿವಾಗುತ್ತದೆ. ಇವತ್ತು ನಮಗೆಲ್ಲರಿಗೂ ನಿಜವಾದ ಬಡತನ ಎಷ್ಟಿದೆ, ಹೇಗಿದೆ ಅನ್ನುವುದರ ಬಗ್ಗೆ ಒಂದು ಅಂದಾಜು ಇಲ್ಲ. ನಾವು ನಮ್ಮ ಶ್ರೀಮಂತ, ಪ್ರಕಾಶಿಸುವ ಭಾರತವನ್ನು ಕಟ್ಟಲು ಬಳಸುವ ಎಲ್ಲಾ ಸಾಮಾನುಗಳು–

ಸಿಮೆಂಟ್, ಕಬ್ಬಿಣ, ಮರಳು – ಎಲ್ಲದರ ಸ್ವಲ್ಪ ಬೆಲೆಯನ್ನು ಮಾತ್ರ ನಾವು ಕೊಡುತ್ತಿದ್ದೇವೆ. ಕಾನೂನುಬದ್ಧವಾಗಿ ಅಥವಾ ಬಲವಂತವಾಗಿ ಕಸಿದುಕೊಂಡ ಜಮೀನಿನವ, ಅದನ್ನು ಅಗೆಯುವವ, ಈ ಕೆಲಸಗಳಿಂದಾಗಿ ಯಾರೆಲ್ಲಾ ಧೂಳು ಮಾಲಿನ್ಯವನ್ನು ತಿಂದು ಆರೋಗ್ಯ ಕೆಡಿಸಿಕೊಳ್ಳುತ್ತಾರೋ ಅವರೆಲ್ಲರೂ ಉಳಿದ ಬೆಲೆಯನ್ನು ತೆರುತ್ತಿದ್ದಾರೆ. ನಮ್ಮ ಈಗಿನ ಬಂಡವಾಳವಾದಿ ರಾಷ್ಟ್ರ–ರಾಜ್ಯದ ವ್ಯವಸ್ಥೆಗೆ ಈ ಸಮಸ್ಯೆಗಳನ್ನು ಎತ್ತಿಕೊಳ್ಳುವುದಕ್ಕೂ ಸಾಧ್ಯವಾಗಿಲ್ಲ

ಬಂಡವಾಳ ಎರಡು ಕಡೆಯಿಂದ ಅಪರಿಮಿತ ಮೌಲ್ಯವನ್ನು (ಸರ್‌ಪ್ಲಸ್ ವಾಲ್ಯೂ) ಪಡೆದುಕೊಳ್ಳುತ್ತದೆ: ಶ್ರಮದಿಂದ ಬಂದ ಮೌಲ್ಯಕ್ಕೆ ತಕ್ಕ ಪ್ರತಿಫಲ ಕೊಡದೆ ಇರುವುದು ಮತ್ತು ಜಗತ್ತಿನ ಇತರ ಸಂಪನ್ಮೂಲಗಳಿಂದ ಪಡೆಯುವುದು. ಸಾಮಾನ್ಯ ಜ್ಞಾನ ಇರುವ ರೈತಳಿಗೆ ತಾನು ತನ್ನ ಗಿಡಗಳಿಗೆ ಸ್ವಲ್ಪ ವ್ಯವಸ್ಥೆ ಮಾಡಿಕೊಟ್ಟರೆ ಸಾಕು, ಸೂರ್ಯ, ಮಳೆ, ಗಾಳಿ, ಮಣ್ಣು ಹುಳ ಹುಪ್ಪಟೆಗಳು ಅವಳ ತೋಟವನ್ನು ಬೆಳೆಸುತ್ತದೆಯೆಂದು ಗೊತ್ತಿರುತ್ತದೆ. ಆದರೆ ಅಧಿಕವಾಗಿ ಬೆಳೆಯಲಿಕ್ಕೆ ಹೋಗಿ ಮಣ್ಣನ್ನು ಸತ್ವಹೀನಗೊಳಿಸಿದರೆ, ಹುಳ ಹುಪ್ಪಟೆ, ಬ್ಯಾಕ್ಟೀರಿಯಾವನ್ನ ಕೊಂದರೆ ತೊಂದರೆ ಶುರುವಾಗುತ್ತದೆ. ರೈತಳ ಸಮಸ್ಯೆ ಸಣ್ಣ ಪ್ರಮಾಣದ್ದಾದರೆ ನಮ್ಮ ಆರ್ಥಿಕ ಸ್ಥಿತಿಯದ್ದು ಇದೇ ರೀತಿಯ ದೊಡ್ಡ ಮಟ್ಟದ ಸಮಸ್ಯೆ. ಪರಿಣಾಮಗಳ ಯೋಚನೆಯಿಲ್ಲದೆ ಸುತ್ತಲಿನ ಸಂಪನ್ಮೂಲಗಳನ್ನು ಬಳಸುವುದು. ಇದಕ್ಕೆ ದೊಡ್ಡ ಉದಾಹರಣೆಯೆಂದರೆ ಜಾಗತಿಕ ತಾಪಮಾನದ ಏರಿಕೆ. ನಮ್ಮ ರಾಷ್ಟ್ರ–ರಾಜ್ಯದ ವ್ಯವಸ್ಥೆಗೆ ಇದನ್ನು ಗ್ರಹಿಸಲೂ ಇಲ್ಲಿಯವರೆಗೆ ಸಾಧ್ಯವಾಗಿಲ್ಲ ಆರ್ಥಿಕ ಬೆಳವಣಿಗೆಯನ್ನು ಕುಂಟಿತಗೊಳಿಸುವ ಯಾವ ಕಾರ್ಯವನ್ನು ಮಾಡಲಾಗುವುದಿಲ್ಲ ಎನ್ನುವುದು 'ಮುಂದುವರಿದ' ಮತ್ತು 'ಮುಂದುವರೆಯುತ್ತಿರುವ' ದೇಶಗಳ ನಿಲುವು. ಇದು ನಮ್ಮ ಈಗಿನ ವ್ಯವಸ್ಥೆ ಎತ್ತಿಕೊಳ್ಳಲಾಗದ ಇನ್ನೊಂದು ವಿಷಯದ ಮೇಲೆ ಬೆಳಕನ್ನು ಚೆಲ್ಲುತ್ತದೆ. ಈ ಬೆಳವಣಿಗೆ ಅನಂತವಾಗಿ ಮುಂದುವರಿಯಲಾರದು. ನಮ್ಮ ಗ್ರೋಥ್ ರೇಟ್ 5.5% ಇದೆ ಅದು 9% ಆಗಬೇಕು ಇಲ್ಲದಿದ್ದರೆ ದುರಂತವಾಗುತ್ತದೆ, ಚೈನಾದ ಥರ ಆಗಬೇಕು ಇವೆಲ್ಲಾ ನಮ್ಮ ನಾಯಕರಿಂದ ಆಗಾಗ ಕೇಳಿಬರುವ ಹೇಳಿಕೆಗಳು. ಇದು ಧಾರಣಸಾಮರ್ಥ್ಯವನ್ನು ಅರ್ಥ ಮಾಡಿಕೊಳ್ಳದ ವ್ಯವಸ್ಥೆ. ಇಂಡಿಯಾದಲ್ಲಿ ಮತ್ತು ಜಗತ್ತಿನಲ್ಲಿ ನಮಗೆ ಬೇಕಾಗಿರುವುದು ಬೆಳವಣಿಗೆಯಲ್ಲ. ಈಗ ನಮಗೇನಿದೆಯೋ ಅದರ ಸದ್ಬಳಕೆ.

## ಚಳುವಳಿಗಳು ಏನಾದವು?

ಈವರೆಗೆ ಬಂಡವಾಳಶಾಹಿಯ ವಿರುದ್ಧ ನಡೆದ ಚಳುವಳಿಗಳು – ಕೊನೆಪಕ್ಷ ಮಾರ್ಕ್ಸಿಸ್ಟ್ ಚಳುವಳಿಗಳು– ಶ್ರಮ ಮತ್ತು ಬಂಡವಾಳದ ಉತ್ಪಾದನೆಯ ಅಪರಿಮಿತ ಮೌಲ್ಯವನ್ನು ಬಂಡವಾಳಕ್ಕೆ ಸೇರಿಸಿಕೊಳ್ಳುವ ವರ್ಗ ಸಂಬಂದವನ್ನು ಕೊನೆಮಾಡಲು ಪ್ರಯತ್ನಿಸಿದೆ. ಆದರೆ ಶ್ರಮಿಕ ವರ್ಗದ ಎಲ್ಲಾ ಬಂಡವಾಳ ವಿರೋಧಿ ಚಳುವಳಿಗಳು ನಗರದ ಶ್ರಮಿಕ ವರ್ಗ, ಕೈಗಾರಿಕಾ ಕಾರ್ಮಿಕರನ್ನು ದೃಷ್ಟಿಯಲ್ಲಿಟ್ಟುಕೊಂಡಿದೆ. ವಾಸ್ತವ ನಮಗೆ ನಗರದ ಕಾರ್ಮಿಕರಿಗಿಂತ ಗ್ರಾಮೀಣ ಚಳುವಳಿಗಳನ್ನು (ಚೈನಾದಲ್ಲಿ, ಇಂಡಿಯಾದ ಮಾವೋಯಿಸ್ಟ್) ಸೈದ್ಧಾಂತಿಕವಾಗಿ ಮಧ್ಯದಲ್ಲಿಟ್ಟು ನೋಡುವುದು ಅತ್ಯವಾಗಿದ್ದರೂ ನಗರದ ಕಾರ್ಮಿಕನನ್ನು ಮುಂಚೂಣಿಯಲ್ಲಿಟ್ಟೇ ಇಲ್ಲಿಯತನಕ ನೋಡಿದ್ದಾಗಿದೆ.

ಉತ್ಪಾದನೆಯನ್ನು ನಿಜವಾದ ಅರ್ಥದಲ್ಲಿ ವಹಿಸಿಕೊಂಡು ಕೆಲಸ ಮಾಡುವವರಲ್ಲಿ ಅಥವಾ ಕಾರ್ಮಿಕ ಸಹಕಾರಿಗಳಲ್ಲಿ, ಚಳುವಳಿಗಳ ಮೂಲಕವಾಗಲಿ ಹುಟ್ಟಿರುವಂತವು ಅಥವಾ ಸೈಧ್ಧಾಂತಿಕ ಒಳನೋಟಗಳನ್ನಾಗಲಿ ಪಡೆದಿರುವಂತವು ಬಹಳ ಕಡಿಮೆ. ಇವುಗಳು ಉದ್ದೇಶ ಹೆಚ್ಚಾಗಿ ತಕ್ಷಣದ ಅಗತ್ಯಗಳು ಮಾತ್ರ, ಸರಕಾರದ ಹಸ್ತಕ್ಷೇಪ ಮತ್ತು ಚುನಾವಣಾ ರಾಜಕೀಯದಿಂದ ಇವುಗಳೂ ಭ್ರಷ್ಟಾಚಾರ ಮತ್ತು ಫ್ಯೂಡಲ್ ಸಾಮಾಜಿಕ ಸಂಬಂಧಗಳಿಂದ ಕೂಡಿದ್ದು ಅವುಗಳು ಪೂರ್ತಿಯಾದ ಸಫಲಗೊಂಡಿಲ್ಲ.

ಜಗತ್ತಿನಾದ್ಯಂತ ಇಂತಾ ಪ್ರಯೋಗಗಳ ಯಶಸ್ಸು ಒಂದೋ ಸೀಮಿತವಾಗಿದೆ ಇಲ್ಲವೇ ಕರಗಿಹೋಗಿದೆ. ಕಾರ್ಮಿಕ ಒಡೆತನದ ಉತ್ಪಾದನೆಯಾಗಿರಬಹುದು ಅಥವಾ ಸ್ಥಳೀಯ ಹಣಕಾಸು, ವ್ಯವಹಾರಗಳಿರಬಹುದು. ಅವು ಎಲ್ಲಿಯ ತನಕ ಬಂಡವಾಳ ವ್ಯವಸ್ಥೆಯ ಜೊತೆ ಏಗಬೇಕಾಗುತ್ತದೆಯೋ ಅಲ್ಲಿಯತನಕ ಸಹಕಾರಿ ಸಂಸ್ಥೆಗಳು ಬಂಡವಾಳ ಉತ್ಪಾದನೆಯ ಪರಿಸರವನ್ನೇ ಅನುಕರಣ ಮಾಡಬೇಕಾಗುತ್ತವೆ. ಕಾರ್ಮಿಕರು ತಮ್ಮ ಶೋಷಣೆಯನ್ನು ತಾವೇ ಮಾಡಿಕೊಳ್ಳುವುದಕ್ಕೆ ಶುರುಮಾಡುತ್ತಾರೆ. ಹೊರಗಡೆಯ ಧನ ಸಹಾಯ,ಅಗತ್ಯ ವ್ಯವಸ್ಥೆಗಳು ಪೂರೈಕೆ ಮತ್ತು ಮಾರ್ಕೆಟುಗಳ ಮೇಲೆ ಒತ್ತಾಯ ಪೂರ್ವಕವಾಗಿ ಅವಲಂಬನೆಗೊಂಡಿರುವುದರಿಂದ ಅವರಿಗೆ ತಾವು ಯಾರಿಂದ ತಪ್ಪಿಸಿಕೊಳ್ಳ ಬೇಕೆಂದುಕೊಂಡಿದ್ದಾರೋ ಅವರನ್ನು ಅನುಕರಣೆ ಮಾಡದೇ ವಿಧಿಯಿಲ್ಲದಂತಾಗುತ್ತದೆ. ಹೊರಗಡೆಯ ಮಾರ್ಕೆಟಿನ ಹಂಗಿಲ್ಲದೆ ಇರುವ ಸ್ವತಂತ್ರವಾಗಿರುವವು ಜಾಗತಿಕ ಸಂಕಷ್ಟದ ಸಮಯದಲ್ಲಿ ತೊಂದರೆ ಇಲ್ಲದೇ ಇರಬಹುದಾದರೂ ಸ್ಥಳೀಯ ಸಂಕಷ್ಟಕ್ಕಾದರೂ ಸ್ಪಂದಿಸಲೇಬೇಕಾಗುತ್ತದೆ.

ಮಾರ್ಕೆಟ್‌ನ 'ಕಾಣದ ಕೈ'ಯ ಒತ್ತಡ ತಪ್ಪಿಸಲು ಮಾಡಿದ ಹಲವು ಪ್ರಯೋಗಗಳಲ್ಲಿ ರಾಜ್ಯದ ಅಧಿಕಾರವನ್ನು ವಶಕ್ಕೆ ತೆಗೆದುಕೊಂಡು, ಆ ಅಧಿಕಾರದ ಮೂಲಕ ಬಂಡವಾಳದ ಹರಿವನ್ನು ಮತ್ತು ಉತ್ಪಾದನೆಯನ್ನು ಕಾರ್ಮಿಕ ಒಡೆತನದ ವ್ಯವಸ್ಥೆಗೆ ತಲುಪಿಸುವುದು ಒಂದಾಗಿತ್ತು. ಸೋವಿಯತ್ ಯೂನಿಯನ್‌ನ ಪತನ ಮತ್ತು ಚೈನಾದ ಬಂಡವಾಳದ ದಾರಿ ಎರಡರಲ್ಲೂ ನಮಗೆ ಹಿಂದಿರುವ ಮತ್ತು ಈಗಿರುವ ಕಮ್ಯುನಿಸಮ್ / ಸೋಶಿಯಲಿಸಮ್‌ನ ಸೋಲು ಕಾಣಿಸುತ್ತಿದೆ.ಆದರೆ ಬಂಡವಾಳ ಸಂಸ್ಕೃತಿಯಿಂದ ತೆಗೆದುಕೊಂಡ ಬೆಳವಣಿಗೆಯ ಮೇಲಿನ ಅತಿಯಾದ ನಂಬಿಕೆ ಮತ್ತು ಕೈಗಾರೀಕರಣದ ವೈಭವೀಕರಣ ಇವೆರಡೂ ಬೇರೆ ಕಾರಣಗಳಷ್ಟೇ ಸೋವಿಯತ್ ಯುನಿಯನ್‌ನ ಪತನಕ್ಕೆ ಕಾರಣವಾಗಿದೆ ಎನ್ನುವುದನ್ನು ನಾವು ಮರೆಯಬಾರದು. (ನೋಡಿ ಸೂಸನ್ ಬಕ್-ಮಾಸ್, ಡ್ರೀಮ್ ವರ್ಲ್ಡ್ ಆಂಡ್ ಕಾಟಸ್ಟ್ರೋಪ್ - MIT Press 2000)

ಈ ರೀತಿಯ ಅಪಜಯಗಳು ಕೆಲವರನ್ನ ರಾಷ್ಟ್ರ-ರಾಜ್ಯದ ಹೊರಗಿನ ದಾರಿ ಕಂಡುಕೊಳ್ಳುವುದಕ್ಕೆ ಪ್ರೇರೇಪಿಸಿದೆ, ರಾಜ್ಯದಿಂದ ಸ್ವತಂತ್ರವಾದ ಆಡಳಿತ, ಸಮುದಾಯ, ಶ್ರಮಿಕರ ಆಡಳಿತ ಮುಂತಾದವು. ಆದರೆ ಅವು ಯಶಸ್ಸನ್ನು ಗಳಿಸುತಿದ್ದಂತೆಯೆ ಬಂಡವಾಳ ಸರಕಾರ ಎರಡೂ ಅವನ್ನು ಮುರಿಯಲು ಮುಂದಾಗುತ್ತವೆ.

ಡೇವಿಡ್ ಹಾರ್ವೆ ತನ್ನ ರೆಬೆಲ್ ಸಿಟಿಸ್ (ವರ್ಸೋ 2012) ಪುಸ್ತಕದಲ್ಲಿ ಎಡಪಂಥೀಯರು ಎದುರಿಸುತ್ತಿರುವ ಪ್ರಶ್ನೆಯನ್ನು ಹೀಗೆ ಬರೆಯುತ್ತಾನೆ:

'ಹೇಗೆ ಮತ್ತು ಏನನ್ನು ಉತ್ಪಾದಿಸಬೇಕು ಎನ್ನುವುದನ್ನು ನಿರ್ವಹಿಸಲು ಮತ್ತು ನಿರ್ಧರಿಸಲು ಸಂಬಂಧಪಟ್ಟ ಶ್ರಮಿಕರ ಸಾಮರ್ಥ್ಯವನ್ನು ಪ್ರಜಾಪ್ರಭುತ್ವವಾಗಿ ಮತ್ತು ಸಾಮೂಹಿಕವಾಗಿ ಸುರಕ್ಷಿತಮಾಡುತ್ತಾ, ಜಗತ್ತಿನ ಮಾರುಕಟ್ಟೆಯಲ್ಲಿ ಮೌಲ್ಯ ನಿಯಂತ್ರಿಸುವ ಬಂಡವಾಳಶಾಹಿಯ ಕಾನೂನುಗಳನ್ನು ಕ್ರಿಯಾಶೀಲವಾಗಿ ಎದುರಿಸುವ ಮತ್ತು ಅದಕ್ಕೆ ಪರ್ಯಾಯ ವ್ಯವಸ್ಥೆಯನ್ನು ಸೃಷ್ಟಿಸುವ ಎರಡನ್ನೂ ಎಡಪಂಥೀಯರು ಹೇಗೆ ಬೆಸೆಯಬೇಕು?'

ಎಡಪಂಥೀಯ ಚಳುವಳಿಗಳು ಹೆಚ್ಚಾಗಿ ಉತ್ಪಾದನೆಗೆ ಒತ್ತುಕೊಟ್ಟವುಗಳಾಗಿದ್ದವು. ಗ್ರಾಹಕರ ಚಳುವಳಿಗಳು ಬೇರೆಯಾಗಿ ಕೆಲವೊಮ್ಮೆ ಕೆಲಸಗಾರರ ಒಳಿತಿನ ವಿರುದ್ಧವಾಗಿ ನಡೆದಿದ್ದವು. ಕರಟಾನಿ ಇವೆರಡನ್ನು ಒಟ್ಟಿಗೆ ತರಲು ತನ್ನ ಪುಸ್ತಕ ಟ್ರಾನ್ಸ್ ಕ್ರಿಟೀಕ್: ಆನ್ ಕಾಂಟ್ ಎಂಡ್ ಮಾರ್ಕ್ಸ್ (ಕೋಜಿನ್ ಕರಟಾನಿ 2003 ಎಮ್ಐಟಿ ಪ್ರೆಸ್) ಸಲಹೆ ಕೊಡುತ್ತಾನೆ. ಇದನ್ನು ಮಾಡಲು ಪ್ರಯತ್ನಿಸದ್ದು ಇದೆ. ಪಶ್ಚಿಮದ ಫೇರ್ ಟ್ರೇಡ್ ಚಳುವಳಿಯಲ್ಲಿ ಉತ್ಪಾದಕರು-ಕಾಫಿ ಬೆಳೆಯ ಸಂದರ್ಭದಲ್ಲಿ ಮುಖ್ಯವಾಗಿ ರೈತರ ಸಹಕಾರಿಗಳು ಮಧ್ಯವರ್ತಿಗಳಿಲ್ಲದೆ ಗ್ರಾಹಕರನ್ನು ತಲುಪಬಹುದು. ಇದರಿಂದ ರೈತರಿಗೆ ಒಳ್ಳೆ ಬೆಲೆಯು ಸಿಗುವುದರ ಜೊತೆಗೆ ಮುಖ್ಯವಾಗಿ ಉತ್ಪಾದಕರು ಮತ್ತು ಗ್ರಾಹಕರ ನಡುವೆ ನೇರವಾದ ಸಂಬಂಧ ಏರ್ಪಡುತ್ತದೆ. ಈ ಪ್ರಯತ್ನವನ್ನು ದೊಡ್ಡ ಮಟ್ಟದಲ್ಲಿ ಮಾಡುವಾಗ ತೊಂದರೆಗಳು ಪ್ರಾರಂಭವಾಗುತ್ತವೆ. ಫೇರ್ ಟ್ರೇಡ್ ಕಾಫಿ ಅಮೇರಿಕದ ಸೂಪರ್ ಮಾರ್ಕೆಟ್‌ಗಳಲ್ಲಿ ಮಾರುವಾಗ, ಮಾರಾಟದ ಹೆಚ್ಚಿನ ಲಾಭಾಂಶ ರೈತರಿಗೆ ಸಿಕ್ಕರೂ ಗ್ರಾಹಕರ ದೃಷ್ಟಿಯಿಂದ ಬೇರೆ ಕಾಫಿ ಕೊಳ್ಳುವುದಕ್ಕೂ, ಫೇರ್ ಟ್ರೇಡ್ ಕಾಫಿ ಕೊಳ್ಳುವುದಕ್ಕೂ ವ್ಯತ್ಯಾಸವೇನಿರುವುದಿಲ್ಲ. ಫೇರ್ ಟ್ರೇಡ್ ದೃಢೀಕರಣ ಕಾಫಿಗೆ ಹೆಚ್ಚುತ್ತಿದ್ದಂತೆಯೆ-ಅದರ ಮೂಲ ಉದ್ದೇಶ ಸೊರಗಿ-ಅವು ದೊಡ್ಡ ವಾಣಿಜ್ಯ ಉದ್ದಿಮೆಗೆ ವ್ಯಾಪಾರದ ಒಂದು ತಂತ್ರವಾಗಿ ಬದಲಾಗುತ್ತದೆ. ಅವು (ಸ್ಟಾರ್ ಬಕ್ಸ್ ನಂತವು) ಅತ್ಯಂತ ಚಿಕ್ಕ ಪ್ರಮಾಣದಲ್ಲಿ ಫೇರ್ ಟ್ರೇಡ್ ಕಾಫಿಯನ್ನು ಮಾರುತ್ತ ಉಳಿದಂತೆ ಹೆಚ್ಚಿನ ವಹಿವಾಟನ್ನು ಹಿಂದಿನಂತೆಯೆ ನಡೆಸಿಕೊಂಡು ಬರೀ ರೈತರನ್ನಲ್ಲದೆ ತಮ್ಮ ಕಾಫಿ ಶಾಪಿನಲ್ಲಿ ಕೆಲಸ ಮಾಡುವವರನ್ನು ಶೋಷಿಸುತ್ತದೆ.

ಈ ರೀತಿಯ ನೀತಿಗಳು ಒಮ್ಮೊಮ್ಮೆ, ನಿಜವಾದ ಬದಲಾವಣೆಗೆ ಬೇಕಾದ ಯಾವುದನ್ನು ತ್ಯಾಗಮಾಡದೇ (ಕೆಲವು ರುಪಾಯಿಗಳನ್ನು ಹೆಚ್ಚು ಕೊಟ್ಟರಬಹುದು) ಆರ್ಗಾನಿಕ್ ಬಟ್ಟೆ ತೊಟ್ಟು ಹಳ್ಳಿಯ ಹೆಂಗಸರಿಗೆ, ರೈತರಿಗೆ ಸಹಾಯ ಮಾಡುತ್ತೇವೆಂದುಕೊಂಡು ಗ್ರಾಹಕರಿಗೆ ಹುಸಿ ನೈತಿಕತೆಯ ನೆಮ್ಮದಿಯನ್ನು ಕೂಡ ಕೊಡುತ್ತವೆ.

ಅದಲ್ಲದೆ ದೊಡ್ಡ ಪ್ರಮಾಣದ ದೃಢೀಕರಣವು ರೈತರಿಗೆ ಸಹಾಯ ಮಾಡುವುದಕ್ಕಿಂತ ಕೆಲವೊಮ್ಮೆ ಅವರ ಮೇಲೆ ಹೆಚ್ಚಿನ ಹೊರೆಯಾಗಿ ಪರಿಣಮಿಸುತ್ತದೆ. ಉದಾಹರಣೆಗೆ ಮೆಕ್ಸಿಕೋ ದೇಶದ ರೈತರಿಗೆ ದೃಢೀಕರಣ ದೊರೆಯಲು, ಅಲ್ಲಿ ಸವಕಳಿ ತಪ್ಪಿಸುವ ಅವಶ್ಯಕತೆಯಿಲ್ಲದಿದ್ದರೂ ತಮ್ಮ ಕಾಫಿ ಗಿಡಗಳನ್ನು ಅವರು ಗುಡ್ಡಗಳನ್ನು ಟೆರೇಸ್ ಮಾಡಿಕೊಂಡೇ ಬೆಳೆಸಬೇಕಾಗಿತ್ತು (ಹೆಚ್ಚಿನ ವಿವರಗಳಿಗೆ ನೋಡಿ ಡೇನಿಯಲ್ ಜೆಫ್: ಬ್ರೂಯಿಂಗ್ ಜಸ್ಟಿಸ್: ಫೇರ್ ಟ್ರೇಡ್ ಕಾಫಿ, ಸಸ್ಟೇನೆಬಿಲಿಟಿ ಎಂಡ್ ಸರ್ವೈವಲ್,2007 ಯುನಿವರ್ಸಿಟಿ ಆಫ್ ಕ್ಯಾಲಿಫೋರ್ನಿಯ ಪ್ರೆಸ್)

ಇಡೀ ವ್ಯವಸ್ಥೆಯನ್ನೆ (ಕಚ್ಚಾ ವಸ್ತುಗಳು ಪೂರೈಕೆಯಿಂದ ಮಾರಾಟದವರೆಗೆ) ಫೇರ್ ಟ್ರೇಡ್‌ಗೆ ಒಳಪಡಿಸಿದಾಗ ಸ್ಥಳೀಯ ರೈತರ ಹಿಡಿತದಲ್ಲಿರುವ ವ್ಯಾಪಾರ ವಹಿವಾಟುಗಳಿಂದ ತಮ್ಮ ಅಗತ್ಯಗಳನ್ನು (ನಿಜವಾದ ಅಗತ್ಯ, ವಾಣಿಜ್ಯ ವಲಯ ಸೃಷ್ಟಿಸಿರುತ್ತಿರುವ ಅಗತ್ಯಗಳಲ್ಲ) ಪೂರೈಸಿಕೊಳ್ಳುವಂತಾದಾಗ ಇವು ಫಲಕೊಡಬಹುದು.

## ಪ್ರಜಾಪ್ರಭುತ್ವದ ಹೆಸರಲ್ಲಿ ಮರೆಯಾದ ಸಂಗತಿಗಳು

ಬೇರೆ ದೇಶಗಳಂತೆ ನಮ್ಮ ದೇಶದಲ್ಲೂ ನಾವು ಅತಿ ಜನಸಂಖ್ಯಾ ಪ್ರಜಾಪ್ರಬುತ್ವ ಎಂದು ಹೆಮ್ಮೆ ಪಡುತ್ತೇವೆ. ಆದರೆ ಪ್ರಜಾಪ್ರಭುತ್ವ ಎನ್ನುವುದು ಅರುಂಧತಿ ರಾಯ್ ಹೇಳುವಂತೆ ಉಳಿದೆಲ್ಲ ಬರ್ಬರತೆಗೆ ಒಂದು ನೆವವಾಗಿದೆ ಅಷ್ಟೆ. (ನೋಡಿ ಬೀಸ್ಟ್) ನಮ್ಮ ದೇಶ ಇನ್ನೂ, ಪಿತಾಮಹ ಸಂಸ್ಕೃತಿ (ಪೆಟರ್ನಲಿಸ್ಟಿಕ್), ಪಾಳೆಯಗಾರಿಕೆ, ವಸಾಹತುವಿನ ಗುಂಗಿನಲ್ಲೇ ಇದೆ. ಮತದಾನ ಸರಿಯಾಗಿ ಮತ್ತು ಹಸ್ತಕ್ಷೇಪವಿಲ್ಲದೇ ನಡೆದಾಗ್ಯೂ ನಮಗೆ ನಿಜವಾದ ಆಯ್ಕೆ ಇಲ್ಲ. ಕಾರ್ಪೊರೇಟ್ ಹಣದಿಂದ, ಜನರ ಭಯ, ಅಸ್ಥಿರತೆಯನ್ನ ಒರಟಾಗಿ ಬಳಸಿಕೊಂಡು ಕೊನೆಗೆ ನಮಗೆ ರೂಢಿಯಾಗಿರುವ ಫಲಿತಾಂಶವೇ ಬರುತ್ತದೆ. ಇಂತಾ ವ್ಯವಸ್ಥೆಯಲ್ಲಿ ಉತ್ಕೃಷ್ಟವಾದದ್ದೆಂದರೆ ಆಮ್ ಆದ್ಮಿ ಪಾರ್ಟಿ. ಬಹುಪಾಲು ಜನರು ಇದನ್ನು ನೆಚ್ಚಿಕೊಂಡಂತೆ ಕಾಣುತ್ತದೆ. ಕಂಪ್ಯೂಟರ್, ಆಪ್ಸ್, ಇಂಜಿನಯರ್ಸ್, ಅಮೇರಿಕದಲ್ಲಿರುವ ಬಾವ, ಅಣ್ಣಂದಿರು– ಈ ಆರ್ಥಿಕತೆಯಲ್ಲಿ ಮುಳುಗಿದ ಮಧ್ಯಮ ವರ್ಗಕ್ಕೆ ಮುಖ್ಯವಾಗಿ ಇದು ಅಪ್ಯಾಯಮಾನವಾಗಿ ಕಾಣುತ್ತಿದೆ. ಆಮ್ ಆದ್ಮಿ ಪಾರ್ಟಿ ಮತ್ತು ಅದಕ್ಕೆ ಕಾರಣವಾದ ಇಡೀ ಭ್ರಷ್ಟಾಚಾರ ವಿರೋದಿ ಚಳುವಳಿಯು ದಕ್ಷತೆಗೆ ಕೊಡುವ ಪ್ರಾಮುಖ್ಯತೆ, ನಮ್ಮ ಸಮಸ್ಯೆಗೆಲ್ಲ ತಾಂತ್ರಿಕತೆಯ ಅ–ರಾಜಕೀಯ (ಎ ಪಾಲಿಟಿಕಲ್)) ಉತ್ತರವಾಗಿ ಕಾಣುತ್ತಿದೆ. ನಮಗೆ ಬೇಕಾಗಿದ್ದು ಕಡಿಮೆ ರಾಜಕೀಯವಲ್ಲ, ಹೆಚ್ಚು ರಾಜಕೀಯ.

ಬಂಡವಾಳವೆನ್ನುವುದು ಒಂದು ರೀತಿಯ ಜನರ ನಡುವಿನ ಸಮಾಜಿಕ ಸಂಬಂಧ. ನಾವು ಬಂಡವಾಳಶಾಯಿ ಸಮಾಜಿಕ ಸಂಬಂಧದಿಂದ ತಪ್ಪಿಸಿಕೊಳ್ಳುವುದು ಮತ್ತು ಸೀಮಿತ ಸ್ವಾಯತ್ತತೆಯನ್ನು ಒಟ್ಟಿಗೆ ತರುವುದು ಹೇಗೆ? ಹೀಗೆ ಮಾಡುವಾಗ, ಜಗತ್ತಿನಲ್ಲದಿದ್ದರೂ ಇಂಡಿಯಾದ ಮಟ್ಟಿಗೆ ಬಂಡವಾಳ ವಿರೋಧಿ ದಾರಿಗಳು ಅಂದ ತಕ್ಷಣ ಆಧುನಿಕವಾದದ್ದು, ಮಾನವೀಯತೆ ಉಳ್ಳದ್ದು, ಸಮಾಜವಾದಿ ಮತ್ತು ಸಮಾನತೆ ಅಲ್ಲ. ಬದಲಿಗೆ ಇಂತಾ ದಾರಿಗಳು ಸುಲಭವಾಗಿ ಪುರುಷಪ್ರಧಾನ, ಪಾಳೆಯಗಾರಿಕೆ, ಸಾಂಪ್ರದಾಯಿಕ ಮುಂತಾದವುಗಳ ಕಡೆಗೆ ಹೊರಳಿಬಿಡುತ್ತದೆ. ನಮ್ಮ ಸ್ಥಳೀಯ ನಿಯತಕಾಲಿಕೆಗಳಲ್ಲಿ ಬರುವ ಜಾಗತೀಕರಣ, ಬಂಡವಾಳದ ಹೆಚ್ಚಿನ ವಿಮರ್ಶೆಗಳು ಈ ರೀತಿಯದ್ದು. ಜಾಗತೀಕರಣ ಹೆಂಗಸರ ದಾರಿ ತಪ್ಪಿಸಿದೆ, ದಲಿತರು, ಹೆಂಗಸರು ಸಮಾನ ಹಕ್ಕು ಕೇಳುತ್ತಿದ್ದಾರೆ. ಪಾಶ್ಚಾತ್ತೀಕರಣ ನಮ್ಮ ಕುಟುಂಬವನ್ನು, ಸಂಪ್ರದಾಯವನ್ನು ಮುರಿಯುತ್ತಿದೆ ಇತ್ಯಾದಿ. ಜಗತ್ತಿನಲ್ಲೆಲ್ಲ, ಪಶ್ಚಿಮಕ್ಕೂ ಸಮಸ್ಯೆಯಾಗುತ್ತಿರುವುದು ಪಾಶ್ಚಾತ್ತೀಕರಣದಿಂದಲ್ಲ, ಬದಲಿಗೆ ಬಂಡವಾಳ ಸಮಾಜದಿಂದ. ಬಂಡವಾಳದ ಮೂಲದಲ್ಲಿರುವ ಸಾಮಾಜಿಕ ಸಂಬಂಧಗಳ ರೂಪವನ್ನು ಬದಲಾಯಿಸಲು ಪ್ರಯತ್ನಮಾಡುವಂಥ ಸಮಾಜವಾದ ಇಂದು ನಮಗೆ ಬೇಕಾಗಿದೆ.

*

**ಕೃತಿ ಆರ್.**, 'ಹೊಸಲೋಕ', ಹೆಗ್ಗೋಡು – 577 417



# ಕಾಗೋಡು ತಿಮ್ಮಪ್ಪ ಸಂದರ್ಶನ

**ನಿರೂಪಣೆ: ಶ್ರೀಪಾದ ಟಿ. ಭಾಗವತ್**

ನಮ್ಮ ದೇಶದಿಂದ ಹಿಡಿದು ಪ್ರಪಂಚದ ಉದ್ದಗಲಕ್ಕೂ ನಡೆದು ಬಂದ ಜನಗಳ, ಸಮುದಾಯಗಳ, ಕ್ರಾಂತಿ, ಹೋರಾಟ, ಪ್ರತಿಭಟನೆ, ದಂಗೆ ಇವೆಲ್ಲವೂ ಕಳೆದ ಎರಡು ಶತಮಾನಗಳಿಂದ ಚಳುವಳಿ ಎಂದು ರೂಪುಗೊಂಡಿವೆ. ಅಂತಹ ಚಳುವಳಿಗಳು ನಮ್ಮ ದೇಶದಲ್ಲೂ ಸಾಕಷ್ಟು ನಡೆದಿವೆ. ಅದರಲ್ಲೂ ಈ ರಾಷ್ಟ್ರದಲ್ಲಿ ಹೆಜ್ಜೆ ಹೆಜ್ಜೆಗೂ ಹಿರಿ-ಕಿರಿ ಸಮುದಾಯಗಳ ಮಧ್ಯೆ ಸಹಜವಾಗಿಯೇ ಶೋಷಣೆ, ಘರ್ಷಣೆಗಳು ನಡೆದು ಬಂದಿದೆ.

ಪ್ರಜಾಪ್ರಭುತ್ವ ತಾತ್ವಿಕ ಸಿದ್ಧಾಂತದ ಆಡಳಿತದಲ್ಲಿ ಸಾಧ್ಯವಾದ ಮಟ್ಟಿಗೆ ಆಕ್ರಮಣ, ಅನ್ಯಾಯ, ಹಿಂಸೆ ಕಡಿಮೆ ಮಾಡಿಕೊಳ್ಳಲು ಸಜ್ಜುಗೊಂಡ ಸಮುದಾಯಕ್ಕೆ ಸಮಾಜವಾದದ ಕಲ್ಪನೆ ಹೆಚ್ಚು ಪ್ರಸ್ತುತ. ಸ್ವಾತಂತ್ರಾನಂತರ 'ಕಾಗೋಡು ರೈತ ಹೋರಾಟ' ನಾಡಿನ ಇತಿಹಾಸದಲ್ಲಿ ಒಂದು ಮಹತ್ವದ ಮೈಲಿಗಲ್ಲು. ಇಲ್ಲಿ ಶ್ರೀ ಸಾಮಾನ್ಯನೇ ಕೇಂದ್ರ ಬಿಂದುವಾಗಿ ಕಾಣಿಸಿಕೊಂಡ ಐತಿಹಾಸಿಕ ಚಳುವಳಿ ಇದು. ಮೂಲತಃ ಉಳುವವನೇ ಹೊಲದೊಡೆಯ ಸಿದ್ಧಾಂತದ ಮೇಲೆ ನೆಡೆದ ಹೋರಾಟವಿದು.

ಈ ಎಲ್ಲಾ ಹಿನ್ನೆಲೆಯಲ್ಲಿ ಕಾಗೋಡಿನವರೇ ಆದ ಮತ್ತು ಸಮಾಜವಾದವನ್ನು ಪ್ರಸ್ತುತ ಪಡಿಸಲು ಹೆಚ್ಚು ಶ್ರಮಿಸಿದ, ಅಲ್ಲದೇ ಶ್ರಮ ಜೀವಿಗಳ ನಾಯಕರಾದ ಮಾನ್ಯ ಕಾಗೋಡು ತಿಮ್ಮಪ್ಪನವರೊಂದಿಗೆ ನಾವು – ಸಂಪಾದಕ ಮಿತ್ರರು ಸೇರಿ ಸಮಾಜವಾದದ ಕುರಿತು ಮಾತಾಡಿದೆವು.

ಸಮಾಜವಾದ ಅನ್ನೋದು ಎಲ್ಲಾ ಕಾಲಕ್ಕೂ ತನ್ನದೇ ಆದ ಸಿದ್ಧಾಂತದ ಮೇಲೆ ನಿಂತಿದೆ. ಆದರೆ ನಮ್ಮ ದೇಶದ ಸಮಾಜವಾದಕ್ಕೂ ಬೇರೆ ದೇಶದ ಸಮಾಜವಾದದ ಚಿಂತನೆಗೂ ಬಹಳ ಅಂತರವಿದೆ. ಸರ್ವರಿಗೂ ಸಮಾನತೆ, ಶೋಷಣೆ ರಹಿತವಾದ ಸಮಾಜ ನಮ್ಮ ದೇಶಕ್ಕೆ ಹೆಚ್ಚು ಪ್ರಸ್ತುತವಾಗುತ್ತದೆ. ಬೇರೆ ದೇಶಗಳ ಆರ್ಥಿಕ ಸಮಾನತೆಯ ಚಿಂತನೆಗಳ ಸಮಾಜವಾದ ನಮ್ಮ ದೇಶಕ್ಕೆ ಬರುವುದಿಲ್ಲ. ಆರ್ಥಿಕ ಸಮಾನತೆಯ ಜೊತೆಗೆ ಸಾಮಾಜಿಕ ಸಮಾನತೆ ಬಂದರೆ ಮಾತ್ರ ಈ ದೇಶದ ಸಮಾಜವಾದದ ಅರ್ಥ ಸಾರ್ಥಕತೆ ಪಡೆದಂತೆ. ಈ ಎರಡೂ ಸಿದ್ಧಾಂತಗಳು ಏಕಕಾಲಕ್ಕೆ ಆಗಬೇಕಾಗಿರುವುದು ನಮ್ಮ ದೇಶದ ಮಟ್ಟಿಗೆ ಅತಿ ಮುಖ್ಯವಾಗಿ ಕಾಣುತ್ತದೆ.

ಆದರೆ, ಇಂದು ಏರುಪೇರಾಗಿದೆ. ತಾಳ ತಪ್ಪಿಹೋಗಿದೆ. ಇದರ ಬಗ್ಗೆ ಯೋಚಿಸುವಾಗ ನಮ್ಮಲ್ಲಿ ಎಲ್ಲರೂ ತಪ್ಪಿ ನಡೆಯುತ್ತಾರೆ. ಈಗ ಏನಾಗಿದೆ ಅಂದರೆ, ದೊಡ್ಡವರು ದೊಡ್ಡವರಾಗ್ತಾ ಇದ್ದಾರೆ, ಸಣ್ಣವರು ಸಣ್ಣವರಾಗ್ತಾ ಇದ್ದಾರೆ. ಅವರವರ ಜಾತಿ ಪ್ರಶ್ನೆ ಬಂದಾಗ ತಮ್ಮ ತಮ್ಮ ಜಾತಿ ಇಟ್ಟುಕೊಂಡು ಹೋಗುವುದನ್ನು ಕಾಣುತ್ತೇವೆ. ಅಲ್ಲದೇ ಈ ದೇಶದ ಸಂಪ್ರದಾಯಗಳು, ಮೂಢನಂಬಿಕೆಗಳು, ಧರ್ಮದ ವ್ಯವಸ್ಥೆಗಳು – ಇವು ಇವತ್ತಿನ ಜನರಿಗೆ ಸಿದ್ಧಾಂತವಾಗಿದೆ. ಆಮೇಲೆ ಇದು ಇರೋದೆ ಹೀಗೆ ಅನ್ನುವ ಸ್ಥಿತಿಯಲ್ಲಿದ್ದಾರೆ. ಈಗಿನ ನಮ್ಮ ವ್ಯವಸ್ಥೆಯಲ್ಲಿ ಪ್ರಗತಿಪರ ಕ್ರಮಗಳನ್ನು ಅಮೋಘವಾಗಿ ಬದಲಾವಣೆ ತರುವುದು ಕಷ್ಟವಿದೆ. ಪ್ರಗತಿಪರ ಪರಿವರ್ತನೆ ಕೆಲಸ ಮಾಡುವುದು ಇನ್ನು ಕಷ್ಟವಿದೆ. ಆ ನಿಟ್ಟಿನಲ್ಲಿ ಕೆಲಸ ಮಾಡುವ ನಾಯಕರ ಕೊರತೆಯೂ ಇದೆ.

ಸಮಾಜವಾದದ ಚಿಂತನೆಯ ವಿಷಯಗಳು ಕಾರ್ಯರೂಪಕ್ಕೆ ಬರುವುದು ಅಷ್ಟು ಸುಲಭವಿಲ್ಲ. ಯಾರೂ ಸಮಾಜವಾದಕ್ಕೆ ನಿಷ್ಠರಾಗಿಲ್ಲ. ಸಾಮಾನ್ಯರನ್ನು ಹಾದಿ ತಪ್ಪಿಸಿ, ಸುಮ್ಮನೆ ಮಾತಾಡುವುದು. ಹಾಗಾಗಿಯೇ ಕಮ್ಯುನಿಷ್ಟರಿಗೂ ನಮಗೂ ಸಮಾನತೆಯ ವಿಷಯದಲ್ಲಿ ಬಹಳ ವ್ಯತ್ಯಾಸವಿದೆ. ಅವರಲ್ಲಿ ಆರ್ಥಿಕ ಸಮಾನತೆಗೆ ಹೆಚ್ಚು ಒತ್ತು ಕೊಡುತ್ತಾರೆ. ಅದಕ್ಕೆ ಮಾತ್ರ ಸೀಮಿತಗೊಂಡವರು. ನಮಗೂ ಅವರಿಗೂ ಅಜಗಜಾಂತರವಿದೆ. ನಮ್ಮ ಸಮಾಜವಾದ ಲೋಹಿಯಾ ಸಿದ್ಧಾಂತದ ಪ್ರಕಾರ ಕೇವಲ ಆರ್ಥಿಕ ಸಮಾನತೆ ಇದ್ದರೆ ಸಾಲದು ಸಾಮಾಜಿಕ ಸಮಾನತೆ ಬರಬೇಕು ಎನ್ನುವುದಾಗಿದೆ. ಬರಬೇಕು ಎಂದಲ್ಲಿ ಅದಕ್ಕೊಂದು ಸಾಂಸ್ಕೃತಿಕ ಚಿಂತನೆ ಬೇಕು. ಅದರ ಬಗ್ಗೆ ಗಂಭೀರವಾಗಿ ಯೋಚಿಸುವ ಸರ್ಕಾರವಿರಬೇಕು. ಜತೆಗೆ ನಾಯಕರು ಬೇಕು. ನಮ್ಮಲ್ಲಿ ಆರ್ಥಿಕ ಸಮಾನತೆ ಬರುವುದು ಕಷ್ಟವಿದೆ.

## ನಾನೇಕೆ ಕಾಂಗ್ರೆಸ್ ಸೇರಿದೆ?

ಬಂದರೆ ಸರಿಯಾಗಲೂಬಹುದು. ಆಗುವುದು ಕಷ್ಟವಿದೆ. ನಮ್ಮಲ್ಲಿರುವ ಲೆಫ್ಟ್ ಮತ್ತು ರೈಟ್ ಪಾರ್ಟಿಗಳು ಏಳೋದೂ ಇಲ್ಲ ಬೀಳೋದು ಇಲ್ಲ. ನನ್ನ ಪ್ರಕಾರ ಅವೆಲ್ಲ ಸತ್ತು ಹೋಗಿದೆ. ಏಕೆಂದರೆ ನಾಯಕತ್ವವೇ ಇಲ್ಲ, ಇದ್ದರೆ ಅದಕ್ಕೆ ಕಣ್ಣೂ ಇಲ್ಲ ಕಿವಿಯೂ ಇಲ್ಲ. ಈಗ ಯಾರು ಹೆಚ್ಚು ಲಾಭಮಾಡಿಕೊಳ್ಳುತ್ತಾರೋ ಅವರದ್ದೇ ಕಾಲ. ಸರ್ಕಾರದಲ್ಲಿ ಸಮಾಜವಾದದ ಆಲೋಚನಾ ಕಾರ್ಯಕ್ರಮಗಳು ಏನೂ ಇಲ್ಲ ಅದರೆ ಕೆಲವು ಕೆಲಸಗಳು ಸಮಾಜವಾದಕ್ಕೆ ಹತ್ತಿರವಾಗಿರುವಂತಾದ್ದು. ಆ ಕೆಲಸಗಳು ಅದು ಸಮಾಜವಾದ ಅಂತ ಬೇಕಾದರೆ ಹೇಳಬಹುದು ಅಷ್ಟೆ. ಅದರ ಮುಖಾಂತರ ಯೋಚಿಸುತ್ತಿದ್ದಾರೆನೋ ಅಂತಲೂ ಬೇಕಾದರೆ ಹೇಳಬಹುದು. ನಾನು ಹೇಳಿದರೆ ಸಹನೆಯಿಂದ ಕೇಳ್ತಾರೆ. ಅಷ್ಟಕ್ಕಾಗಿ ಸ್ವಲ್ಪ ಮಟ್ಟಿನ ಸಾಮಾಜಿಕ ಕಾರ್ಯಕ್ರಮಗಳು ಆಗುತ್ತಿವೆ ಅಂದುಕೊಳ್ಳಬಹುದು. ನಾನು ಕಾಂಗ್ರೆಸ್ ಸೇರಿದ್ದೇ ಬೇರೆ ಮಾರ್ಗವಿಲ್ಲವೆಂದು. ಉಳಿದವಕ್ಕಿಂತ ಇದೇ ವಾಸಿ ಅಂತ.

## ಒಟ್ಟು ಸಮುದಾಯದ ಚಿಂತನೆ ಬೇಕು

ಬಡತನವಿದೆ, ಅದರ ಬಗ್ಗೆ ಯೋಚಿಸಬೇಕು. ಅದನ್ನು ಹೋಗಲಾಡಿಸಲು ಚಿಕಿತ್ಸೆ ಕೊಡಬೇಕು. ನೀರಿನ ಸಮಸ್ಯೆ ಇದೆ. ಅದನ್ನು ಸರಿಪಡಿಸಲು ಚಿಂತಿಸಬೇಕು. ಇನ್ನು ನೂರಾರು

ಸಮಸ್ಯೆಗಳಿಗೆ ಅದರ ಬಗ್ಗೆ ಗಂಭೀರವಾದ ಆಲೋಚನೆ ಬೇಕು. ಆದರೆ ಜನರಿಗೆ ದೇವಸ್ಥಾನ ಬೇಕು, ಮಂದಿರ ಬೇಕು ಒಟ್ಟು ಸಮುದಾಯದ ಚಿಂತನೆ ಇಲ್ಲ. ಯಾವುದು ಅಗತ್ಯ ಎನ್ನುವ ಸ್ಪಷ್ಟವಾದ ಕಲ್ಪನೆ ಇಲ್ಲ. ಅವರ ಮನಸ್ಸನ್ನು ಪರಿವರ್ತನೆ ಮಾಡುವ ಬಗ್ಗೆ ಯೋಚಿಸಬೇಕು. ಉತ್ಪಾದನಾ ಕ್ಷೇತ್ರಕ್ಕೆ ಹೆಚ್ಚಿನ ಆದ್ಯತೆ ಕೊಡಬೇಕು. ಒಟ್ಟು ಇವತ್ತಿನ ವ್ಯವಸ್ಥೆಯಲ್ಲಿ ಎಷ್ಟು ಲಾಭ ಮಾಡಿಕೊಂಡು ಹೋಗಬೇಕು ಅನ್ನುವುದೇ ಮುಖ್ಯವಾಗಿದೆ. ಬದಲಾವಣೆ ಮಾಡೋಣ, ಪರಿವರ್ತನೆ ಮಾಡೋಣವೆಂದು ಯೋಚಿಸಿದರೆ, ಯೋಚಿಸಿದವರು ಕೂತಲ್ಲೆ ಇರಬೇಕು. ಜೊತೆಗಿದ್ದವರು ಬೇರೆ ಕಡೆ ಹಾರಿ ಹೋಗ್ತಾರೆ. ಇದು ನಡಿತಿರೋ ವಿಷಯ. ಹೀಗೆ ಹೇಳ್ತನಂತ ನನಗೇನು ನಿರಾಸೆ ಏನು ಇಲ್ಲ. ನಾವು ಏನೇನೋ ಉದ್ದುದ್ದ ಕಾರ್ಯಕ್ರಮ ಮಾಡಿದರೂ ತಲೆಗೆ ಹೋಗಲ್ಲ. ಅರ್ಥವೇ ಆಗಲ್ಲ. ಸಾಮಾಜಿಕ ನ್ಯಾಯ ಒಪ್ಪಿ ಮಹಿಳೆಯರಿಗೆ, ಹರಿಜನರಿಗೆ, ಗಿರಿಜನರಿಗೆ ಅನೇಕ ಸೌಲತ್ತುಗಳನ್ನು ಕೊಟ್ಟರೆ ಅದು ಇದೆ ಅಂತಾನೆ ಗೊತ್ತಿರುವುದಿಲ್ಲ. ಒಂದೊಂದು ಸಾರಿ ನಾವೇ ಕಣ್ಣೀರು ಹಾಕೋ ಸ್ಥಿತಿ ಇದೆ. ಯಾಕೆ ಹೀಗಾಗ್ತಿದೆ ಅನ್ನಿಸುತ್ತದೆ. ಆದರೆ ಇದಕ್ಕೆಲ್ಲ ಕಾರಣವೇನು ಅಂತ ಯೋಚಿಸಿದರೆ ಮೇಲೆ ಅಧಿಕಾರ ಹಿಡಿದವರು ಕಾರಣವಾಗ್ತಾರೆ. ನಾಯಕರಿಗೆ, ಅಧಿಕಾರಿಗಳಿಗೆ ಬದ್ಧತೆ ಬೇಕು. ಎಲ್ಲೋ ಕುಳಿತು ವ್ಯವಸ್ಥೆಯ ಬಗ್ಗೆ ಹೇಳಿಕೆ ಕೊಟ್ಟರೆ ಬದಲಾವಣೆ ಆಗಲ್ಲ. ಈ ಬೇಜವಾಬ್ದಾರಿ ವ್ಯವಸ್ಥೆ ಸರಿಯಲ್ಲ.

## ಮತ ಪಡೆಯುವ ಲೆಕ್ಕಾಚಾರ

ಅಧಿಕಾರದಲ್ಲಿರುವ ಸರ್ಕಾರಕ್ಕೆ ಸಮಾನತೆ ತರಬೇಕು ಅಂತ ಆಸಕ್ತಿ ಇರಬೇಕು. ಅದಕ್ಕೆ ಪೂರಕವಾದ ಕಾರ್ಯಕ್ರಮ ಹಾಕಿಕೊಳ್ಳಬೇಕು. ಅದನ್ನು ನಡೆಸುವುದು ಕಷ್ಟವಿದೆ. ಜನರೂ ಕೂಡ ಅದನ್ನು ಒಪ್ಪಿಕೊಳ್ಳುತ್ತಾರೆ ಅಂತ ಹೇಳಕ್ಕೆ ಆಗಲ್ಲ. ಜನರ ದಿಕ್ಕಿನಲ್ಲಿ ಜಾಗೃತಗೊಳಿಸಿ ಎರಡೂ ಕೆಲಸವೂ ಆಗಬೇಕಾದ ಕಡೆ ಪ್ರಯತ್ನಿಸಬೇಕು. ಸರ್ಕಾರದ ಕೆಲಸ ಮಾಡಲು ಸಾಧ್ಯವಾಗದ ಪ್ರತಿನಿಧಿಗಳನ್ನು, ಅಧಿಕಾರಿಗಳನ್ನು ದೂರವಿರಿಸಬೇಕು. ಕಿತ್ತು ಹಾಕಬೇಕು. ಜನರೇ ಆ ಕೆಲಸ ಮಾಡಬೇಕು. ಅನೇಕ ಸಾರಿ ಮೇಲಿದ್ದೇವೆ ಅನ್ನುವ ಭ್ರಮೆಯಲ್ಲಿರುತ್ತಾರೆ. ಜನರನ್ನು ಜಾಗೃತಿಗೊಳಿಸುವ ಶಕ್ತಿಯನ್ನು ರಾಜಕೀಯ ಪಕ್ಷಗಳು ಬೆಳೆಸಿಕೊಳ್ಳಬೇಕು. ಆ ಜವಾಬ್ದಾರಿ ಇರಬೇಕು. ಅದಲ್ಲದೇ ಏನು ಸಿಕ್ತದೆ ಅದನ್ನು ಹಿಡಿದುಕೊಂಡು ಆರಾಮಾಗಿರೋದು. ಓಟು ತೆಗೆದುಕೊಳ್ಳೋದು ಹೇಗೆ ಅಂತ ಲೆಕ್ಕಾಚಾರ ಹಾಕೋದು, ಜಾತಿ ಇಟ್ಟುಕೊಂಡು ತೆವಳೋದು, ಇಂಥ ಜಾತಿಗೆ ಸಹಾಯ ಮಾಡಿದರೆ ಇಷ್ಟು ಓಟು ಸಿಕ್ಕುತ್ತವೆ ಅಂತ ಆಲೋಚನೆ ಮಾಡಿ ಅದಕ್ಕಾಗಿ ಕೆಲಸ ಮಾಡಿದರೆ ಪ್ರಯೋಜನವಿಲ್ಲ.

## ನಿಂತ ನೀರು

ನಮ್ಮ ಸಮಾಜ ನಿಂತ ನೀರು. ಅದೂ ಕೂಡಾ ಹೆಪ್ಪುಗಟ್ಟಿದೆ. ಬಲವಾಗಿ ಹೊಡೆದರೆ ಮಾತ್ರ ಹೆಚ್ಚು ಒಡಿತವೆ. ಈ ಸ್ಥಿತಿಯಲ್ಲಿರುವುದರಿಂದ ತಕ್ಷಣದ ಬದಲಾವಣೆ ಅಸಾಧ್ಯ. ಹಾಗೇನಾದರೂ ಆಗಬೇಕು ಅಂತ ಹೊದರೇ ಹುಚ್ಚು ಹಿಡಿದಿದೆ ಅಂತಾರೆ. ಪ್ರತಿಯೊಂದು ನಿಟ್ಟಿನಲ್ಲೂ ಯೋಚಿಸಿ ನಡೆಯಬೇಕು. ಹಾಗೂ ಕಾರ್ಯರೂಪಕ್ಕೆ ತರಬೇಕು. ಯಾವುದಕ್ಕೂ ಇಚ್ಛಾಶಕ್ತಿ ಇರಬೇಕು.

## ಸಾಹಿತ್ಯ, ಬರೆಹ ಮತ್ತು ಬದಲಾವಣೆ

ಇನ್ನು ಸಾಹಿತಿಗಳು ಬರವಣಿಗೆ ಮುಖಾಂತರ ಬದಲಾವಣೆ ತರುವ ಪ್ರಯತ್ನ ಮಾಡ್ತಾರೆ. ಅದನ್ನ ಓದುವುದು ಎಷ್ಟು ಮಂದಿ? ನಿಜವಾಗಿ ಬದಲಾವಣೆ ಆಗಬೇಕಾದವರು ಓದುವುದೇ ಇಲ್ಲ. ಬಸವಣ್ಣನ ವಚನಗಳು ಒಳ್ಳೆಯದನ್ನೇ ಹೇಳಿದೆ. ಆದರೆ ಏನು ಪ್ರಯೋಜನ? ಅದನ್ನ ಹೇಳ್ತಾರೆ ಹೊರತು ನಡೆಸುವವರು ಯಾರೂ ಇಲ್ಲ. ಓದಬೇಕು, ಓದಿರುವುದನ್ನು ಅರ್ಥೈಸಿಕೊಳ್ಳಬೇಕು. ಕಾರ್ಯರೂಪಕ್ಕೆ ತರುವ ಪ್ರಯತ್ನ ಮಾಡಬೇಕು. ಆದಿವಾಸಿಗಳು ಇದ್ದಾರೆ. ಅವರಿಗೆ ಸರಿಯಾದ ವ್ಯವಸ್ಥೆ ಇಲ್ಲ. ಅವರ ಸಮಸ್ಯೆ ಪರಿಹಾರ ಮಾಡುವ ಆಸೆ ಇಲ್ಲ. ಅವರಿಗೊಂದು ಜಾಗವಿಲ್ಲ, ಜಮೀನು ಕೊಡಲಿಲ್ಲ, ನೀರಿಲ್ಲ, ಮನೆಯಿಲ್ಲ, ಅವರಿಗೆ ಏನೂ ಅಂತ ನೋಡಬೇಕು.

ನಕ್ಸಲೈಟ್ಸ್ ಇದ್ದಾರೆ. ಪರಿಸರದವರು ಏನೇನೋ ಕಾರಣಗಳನ್ನು ಇಟ್ಟುಕೊಂಡು ಏನೂ ಆಗಲು ಬಿಡಲ್ಲ. ಯಾವುದೋ ಪಂಡಿತ ಕುಳಿತುಕೊಂಡು ಪರಿಸರ ಹೇಳಿದರೆ ಹೇಗೆ? ಜನ ಸತ್ತುಹೋದರೂ ಪರವಾಗಿಲ್ಲ ಪರಿಸರ ಉಳಿಯಬೇಕು. ಈ ಪರಿಸರ ಇರೋದೆ ಜನರಿಗಾಗಿ ಅದನ್ನು ಪಂಡಿತರು ಮರೆಯಬಾರದು. ಸಮಾಜವಾದ ಸಿದ್ಧಾಂತವನ್ನು ಇಟ್ಟುಕೊಂಡು ಪ್ರಯೋಗ ಮಾಡಲು ಆಗೋಲ್ಲ. ಅವೆಲ್ಲ ನಡಿಯೋಲ್ಲ.

## ಸರ್ಕಾರದ ವರದಿಗಳ ಮಾಲೆ

ಇಂದಿರಾಗಾಂಧಿ 21 ಅಂಶಗಳ ಕಾರ್ಯಕ್ರಮ ಚೆನ್ನಾಗಿದ್ದವು. ಆಮೇಲೆ ದೇವರಾಜ ಅರಸರ ಭೂ ಸುಧಾರಣೆ ಕಾಯಿದೆ ತಂದ್ರು. ಪರಿಪೂರ್ಣ ಆಗಲಿಲ್ಲ. ಹಾವನೂರು ವರದಿ ಕೂಡ ಸರಿಯಾಗಿ ಜಾರಿಯಾಗಲಿಲ್ಲ. ಅರಣ್ಯ ಕಾನೂನು ತಂದಿದ್ದಾರೆ. 75 ವರ್ಷದ ದಾಖಲೆ ಬೇಕು ಅಂದರೆ ಯಾರು ತಂದು ಕೊಡ್ತಾರೆ? ಅದನ್ನು ಯೋಚಿಸಬೇಕು. ಸ್ವಲ್ಪ ಹೆಚ್ಚು ಕಡಿಮೆ ಆದರೆ ಜನ ಚಪ್ಲಿ ತಗೊಂಡು ಹೊಡಿತಾರೆ. ಅಂತಹ ಸಂದರ್ಭ ನನಗೂ ಕೂಡ ಬಂದಿತ್ತು. ಅದು ಕೂಡ ಇಂದು ಪರಿಪೂರ್ಣವಾಗಿರಲಿಲ್ಲ. ಯಾವ ಬದಲಾವಣೆಯೂ ತಿಳಿದಷ್ಟು ಸುಲಭವಲ್ಲ. ಉದಾ: ಶೌಚಾಲಯ ಇರಬೇಕು ಅಂದರು. ಸರ್ಕಾರದವರು ಕಟ್ಟಿಸಿಕೊಟ್ಟರೂ, ಅದನ್ನು ಉಪಯೋಗಿಸುವುದಿಲ್ಲ. ಕಟ್ಟಿದವರು ಉಪಯೋಗಿಸಬೇಕಷ್ಟೇ. ಕ್ರಮೇಣ ಬದಲಾವಣೆ ಆಗಬೇಕು, ಮುಖ್ಯವಾಗಿ ಬದಲಾವಣೆಗೆ ಅಡ್ಡವಾಗಿ ನಿಂತಿರುವ ಗೋಡೆ. ಯಾವುದು ಅಂತ ನೋಡಿ ಆ ಗೋಡೆಗಳನ್ನು ಒಡೆಯಬೇಕು. ವಿಚಾರಮಾಡಿ ಒಂದಾಗಿ ಬದುಕಲು, ಬಾಳಲು ಯಾವುದು ಸಹಕಾರಿ ಅಂತ ಯೋಚಿಸಿ ನಡೆಯಬೇಕು.

## ಓಟು ಕೇಳುವ ಮುಲಾಜು

ಒಟ್ಟಾರೆಯಾಗಿ ಬದಲಾವಣೆಗೆ, ಪ್ರಗತಿಗೆ ಎಲ್ಲರೂ ಕೈಜೋಡಿಸಬೇಕು. ಉಳಿದ ಯಾವ ಸಿದ್ಧಾಂತವು ಬರುವುದಿಲ್ಲ. ನಾಯಕರು ಮೆರಿಬೇಕು ಅಂತಿದ್ದರೆ, ಎಲ್ಲವನ್ನು ತ್ಯಾಪೆಹಾಕಿ ಹೋಗ್ತಾರೆ. ಪಂಚಾಯಿತಿಯಿಂದ ಮೇಲಿನವರೆಗೂ ಪಾರದರ್ಶಕತೆ ಇರಬೇಕು. ಬದಲಾವಣೆಗೆ ಕೈಜೋಡಿಸುವ ಸಂಸ್ಕೃತಿ ನಮಗಿಲ್ಲ. ಅದಾಗಬೇಕು. ದೂರದೃಷ್ಟಿ ಇಟ್ಟುಕೊಂಡು ಚಿಂತನೆ ಮಾಡಿ ಪ್ರಗತಿ ಹೊಂದಬೇಕು. ಕೆಲವೊಂದು ಮೂಲಭೂತ ಬದಲಾವಣೆ ಆಗಬೇಕು.

ಜನರ ಮಧ್ಯೆ ಹೋದರೆ, ಹೋಗುತ್ತಿದ್ದರೆ ಸಮಸ್ಯೆ ತಿಳಿಯುತ್ತದೆ. ಈ ರಾಜಕೀಯ ಒಬ್ಬನ ನಿಯಂತ್ರಣದಲ್ಲಿಲ್ಲ. ನಾನು ಜನರಿಗೆ ಉಪಯೋಗವಾಗುವ ಅನೇಕ ಕಾರ್ಯಕ್ರಮಗಳನ್ನು ಹಾಕಿದೆ. ಸಮಸ್ಯೆ ಬಗ್ಗೆ ಹೋರಾಟ ಮಾಡಿದೆ. ಅದು ಯಾವುದು ಕಾರ್ಯರೂಪಕ್ಕೆ ಬರಲ್ಲಿಲ್ಲ ಅಷ್ಟೆ. ಇಲ್ಲಿಯವರೆಗೆ ನಾನು ಹೇಳಿದ ಹಾಗೆ ಯಾರೂ ಹೇಳೊದಿಲ್ಲ. ನನ್ನ ಮಾತಿಂದ ಸಿಟ್ಟು ಬರುತ್ತಾ? ಬಿಡ್ಲಿ ಬಿಡಿ. ಮುಂದಿನ ಚುನಾವಣೆಗೆ ಯಾರ ಓಟು ಕೇಳುವ ಮುಲಾಜು ನನಗಿಲ್ಲ.

ಹೀಗೆ ಮಾತಾಡಿದ ವಿಧಾನಸಭಾಧ್ಯಕ್ಷರಾದ ಕಾಗೋಡು ತಿಮ್ಮಪ್ಪನವರಲ್ಲಿ ಸಮಾಜವಾದದ ಕುರಿತು ನಿರಾಶೆ ಕಂಡುಬಂತು. ತಿಮ್ಮಪ್ಪನವರು ಇರಬಹುದು ಅಥವಾ ಒಂದೆ ರಾಜ್ಯಭಾರ ನಡೆಸಿದ ರಾಮಕೃಷ್ಣ ಹೆಗಡೆ, ಜೆ ಹೆಚ್ ಪಟೇಲ್, ಎಂ ಪಿ ಪ್ರಕಾಶ್, ಬಂಗಾರಪ್ಪ ಇವರೆಲ್ಲರೂ ಸಮಾಜವಾದಿ ಚಿಂತನೆಯ ಹಿನ್ನಲೆಯಲ್ಲೇ ಬಂದವರು. ಇವರಿಗೆ ಅಧಿಕಾರ ಸಿಕ್ಕಾಗಲೂ ಸಾಮಾಜಿಕ ನ್ಯಾಯದ ಮಾತನ್ನಾಡಿದರು. ಅಲ್ಲಿ ಸ್ವಲ್ಪ ಕೆಲಸವನ್ನು ಮಾಡಿದರು. ಆದರೆ ಗಟ್ಟಿಯಾದ ಯಾವ ಬದಲಾವಣೆಗಳೂ ಆಗಲಿಲ್ಲ.

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಡಾ. ಚಂದ್ರಶೇಖರ ಕಂಬಾರರು, ಕಾಗೋಡು ಚಳುವಳಿಯೊಂದೇ ನಮ್ಮಲ್ಲಿ ಹಣ್ಣಾದ ಚಳುವಳಿ. ಭೂಸುಧಾರಣಾ ಕಾಯ್ದೆ ಜಾರಿ ಆಗುವುದರ ಮೂಲಕ ಗೇಣಿದಾರರಿಗೆ ಭೂಮಿ ಸಿಕ್ಕಿತು. ಇನ್ನುಳಿದ ಚಳುವಳಿಗಳು ಹೀಗೆ ಫಲಪ್ರದವಾಗಿಲ್ಲ. ಅನೇಕ ಚಳುವಳಿಗಳು ಕೇವಲ ಹೋರಾಟವಾಗಿ ಮಾತ್ರ ಉಳಿದಿವೆ ಎಂದರು.

ಮೇಲ್ಕಾಣಿಸಿದ ಅಂಶಗಳಿಂದ ನಾವು ನಿರಾಶರಾಗಬೇಕಿಲ್ಲ. ಕಾಗೋಡು ತಿಮ್ಮಪ್ಪನವರೂ ಕೂಡಾ ತಾವು ನಂಬಿದ ಸಮಾಜವಾದದಲ್ಲಿ ನಿರಾಶೆಯನ್ನು ವ್ಯಕ್ತಪಡಿಸಿದರೇ ವಿನಃ ಸರ್ಕಾರದ ಸಮಾಜಮುಖೀ ಕೆಲಸಗಳಲ್ಲಿ ನಿರಾಶೆ ಹೊಂದಿಲ್ಲ. ಸರ್ಕಾರ ಅಳವಡಿಸಿದ ಸಮಾಜವಾದೀ ಚಿಂತನೆಗಳ ಕಾರ್ಯಯೋಜನೆಗಳು ಕಾರ್ಯರೂಪಕ್ಕೆ ಬರುವಲ್ಲಿ ಅಧಿಕಾರಿಗಳ ಭ್ರಷ್ಟತೆಯೂ ಪ್ರಮುಖ ಹಿನ್ನಡೆಗೆ ಕಾರಣವಾಗುತ್ತಿದೆ. ಭ್ರಷ್ಟತೆಯ ಹಾದಿ ಹಿಡಿದ ರಾಜಕಾರಣಿ ಮತ್ತು ಅಧಿಕಾರಿಗಳನ್ನು ಮಾಹಿತಿ ಹಕ್ಕಿನ ಬಳಕೆಯ ಮೂಲಕ ಪ್ರಶ್ನಿಸುವ ಜನ ಸಹಭಾಗಿತ್ವವೂ ಇಂದು ಬೇಕಾಗಿದೆ.

ಯಾವುದೇ ಬದಲಾವಣೆಯೂ ಯಾವುದೇ ಒಬ್ಬ ನಾಯಕನಿಂದ ಆಗಲಾರದು. ಸಾಮಾನ್ಯ ಜನರಿಂದಲೇ ರೂಪಗೊಂಡ ಕಾಗೋಡು ಚಳುವಳಿಗೆ ಸಿಕ್ಕ ಯಶಸ್ಸು ಸರ್ಕಾರಗಳೇ ನೀಡಿದ 'ವರದಿ'ಗಳಿಗೂ ಸಿಕ್ಕಿಲ್ಲ. ಇಂದ ಚಳುವಳಿಗಳಲ್ಲಿ ರೂಪಗೊಂಡ ನಾಯಕರು ಅಧಿಕಾರಕ್ಕೆ ಬಂದಾಗಲೂ ಚಲಾವಣೆಗೊಳ್ಳದ ಸ್ಥಿತಿಯಿದೆ. ಅಂದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇದು ನಾಯಕನೊಬ್ಬನ ಹಿನ್ನಡೆಷ್ಟೇ ಜನರ ಹಿನ್ನಡೆಯೂ ಹೌದು. ಇದು ಸಂಘಟಿತ ಹೋರಾಟದ ನಿರಂತರತೆಯನ್ನು ಸೂಚಿಸುತ್ತದೆ.

*

**ಕಾಗೋಡು ತಿಮ್ಮಪ್ಪ**, ಜೋಸೆಫ್ ನಗರ, ಸಾಗರ – 577 401
**ಶ್ರೀಪಾದ ಭಾಗವತ್**, ಹೊಸಲೋಕ, ಹೆಗ್ಗೋಡು, ಸಾಗರ – 577 417

# ಸಮಾಜವಾದದ ನೆಲೆಯಲ್ಲಿ ನಾನು ಮತ್ತು ನನ್ನ ಅನುಭವಗಳು

– ಎನ್. ಶಿವಾನಂದ ಕುಗ್ವೆ



ಪರಂಪರೆಯಿಂದ ಬಂದ ಊಳಿಗ ಮಾನ್ಯ ವ್ಯವಸ್ಥೆಯಲ್ಲಿ ನಾನು ಹುಟ್ಟಿ ಬೆಳೆದ ಊರು ಮತ್ತು ಸುತ್ತಮುತ್ತಲ ಹಳ್ಳಿಗಳು ಬಂದಿದ್ದವು. ವಿದ್ಯಾವಂತರು ಬಹಳ ಅಪರೂಪವಾಗಿದ್ದ ಸಮಾಜ ನನ್ನದು. ಹುಟ್ಟಿದ ಜಾತಿ ಮತ್ತು ಮನೆತನಗಳಿಂದಲೇ ಸಮಾಜದಲ್ಲಿ ಸ್ಥಾನಮಾನಗಳು ಅಳೆಯಲ್ಪಡುತ್ತಿದ್ದವು. ಹಿಂದುಳಿದ ಜಾತಿಗಳಲ್ಲಿ ಕೀಳರಿಮೆ ಹೆಚ್ಚಾಗಿಯೇ ಇತ್ತು. ಬಡತನ ತೀವ್ರವಾಗಿತ್ತು. ನನ್ನ ಹಿರಿಯ ತಲೆಗಳು ಕುಡಿತದ ದಾಸರಾಗಿದ್ದವರೇ ಹೆಚ್ಚು. ಮೂಢ ನಂಬಿಕೆಗಳೇ ಸಂಪ್ರದಾಯಗಳಾಗಿ ಆಚರಣೆಯಲ್ಲಿದ್ದವು. ನೈತಿಕತೆ ಮತ್ತು ಧಾರ್ಮಿಕತೆಗೆ ಜನ ಬೆಲೆ ಕೊಡುತ್ತಿದ್ದರು. ರಾಜಕೀಯ ನಾಯಕತ್ವ ಇನ್ನು ತಲೆ ಎತ್ತಿರದ ಕಾಲಘಟ್ಟದಲ್ಲಿ ಕಾಲೇಜು ಶಿಕ್ಷಣ ಮತ್ತು ಓದು ಕಲಿತ ಮೊದಲ ತಲೆಮಾರಿನವನಾಗಿ ನಾನು ಬಂದವನು.

ನನ್ನ ಹಿರಿಯರು ಗೇಣಿ ರೈತರು. ಗೇಣಿ ಕೊಡುವ ಒಪ್ಪಂದ ಒಡೆಯ–ವಕ್ಕಲು ಸಂಬಂಧವಾಗಿತ್ತು. ಗೌಡಾಳಿಕೆಯ ತೀವ್ರತೆ ಆಗಷ್ಟೆ ಕಮ್ಮಿಯಾಗುತ್ತಿತ್ತು. ಭೂ ಮಾಲೀಕರ ವ್ಯವಸ್ಥೆಯಲ್ಲಿ ನಮ್ಮ ಪ್ರದೇಶದ ಹಿಂದುಳಿದ ಜನಾಂಗದ ರೈತರೆಲ್ಲ ಅಡಿಯಾಳಾಗಿ ಬಂದಂತಹ ಸನ್ನಿವೇಶ ಕ್ರಮೇಣ ಕಮ್ಮಿಯಾಗುತ್ತಾ ಬಂದಿತ್ತು.

ಏನಾದರೂ ಕಾರಣಗಳಿಗಾಗಿ ಉಳುವ ಭೂಮಿಯಿಂದ ಒಕ್ಕಲೆಬ್ಬಿಸಿ ಹೊರಗೆ ಕಳಿಸುವ ಪ್ರಕರಣಗಳು ಕಡಿಮೆಯಾಗಿದ್ದರೂ, ತಾವು ಉತ್ತು ಬಿತ್ತಿ, ಬೆಳೆ ಬೆಳೆಯುವ ಭೂಮಿಗೆ ತಾವೇ ಒಡೆಯರಾಗಿರಲಿಲ್ಲ. ಭೂಮಾಲೀಕರ ಮರ್ಜಿಗೆ ಒಳಗಾಗಿರಬೇಕಾಗಿತ್ತು.

'ಉಳುವವರೇ ಹೊಲದೊಡೆಯ' ಆಗಬೇಕೆಂಬ ಕನಸನ್ನು ರೈತರಲ್ಲಿ ಬಿತ್ತಿದ್ದರು, ಸ್ಫೂರ್ತಿಯಾಗಿದ್ದವರು ಅಂದು ಸೋಶಲಿಸ್ಟರು. ಡಾ। ರಾಮಮನೋಹರ ಲೋಹಿಯಾ, ಹೆಸರು ಕೇಳಿದ ರೈತರು ಇದ್ದರು. ಶಾಂತವೇರಿ ಗೋಪಾಲ ಗೌಡರನ್ನು ನೋಡಿದವರಿದ್ದರು. ಅವರ ಭಾಷಣ ಕೇಳಿ ಸ್ಫೂರ್ತಿ ಪಡೆದವರೂ ಇದ್ದರು. ಸಾಮಾಜಿಕ, ರಾಜಕೀಯ ತಿರುವುಗಳು ನಮ್ಮ ರೈತ ಸಮುದಾಯದಲ್ಲಿ ಆಗತಾನೆ ಪ್ರಾರಂಭವಾಗಿದ್ದವು. ಕಾಗೋಡು ಸತ್ಯಾಗ್ರಹ ನಡೆದ ನಂತರ ಸೋಶಿಲಿಸ್ಟರು ನಿಧಾನವಾಗಿ ನೆಲೆಯೂರತೊಡಗಿದ್ದರು. ಹಿಂದುಳಿದ ರೈತ ಯುವಕರ ನಾಯಕತ್ವ ಅಲ್ಲಲ್ಲಿ ಆಗಷ್ಟೇ ಆರಂಭವಾಗಿತ್ತು. ಗೋಪಾಲ ಗೌಡರು ಸಾಗರ ಕ್ಷೇತ್ರದಿಂದ ಶಾಸಕರಾಗಿ ವಿಧಾನ ಸಭೆಯಲ್ಲಿ ಪ್ರವೇಶ ಪಡೆದ ಮೊದಲನೆಯವರು. ರೈತರ ಸಂಕಟಗಳ ಬಗ್ಗೆ ವಿಧಾನ ಸಭೆಯಲ್ಲಿ ಘರ್ಜಿಸಿದವರು. ನಮ್ಮ ಯುವ ಸಮುದಾಯಕ್ಕೆ ಆದರ್ಶದ ಮಾದರಿಯಾಗಿದ್ದರು. ಅವರ ನಂತರ ಕಾಗೋಡು ತಿಮ್ಮಪ್ಪನವರು, ಎಸ್. ಬಂಗಾರಪ್ಪನವರು ರೈತಾಪಿ ವರ್ಗದಿಂದ ಬೆಳೆದ ಯುವ ನಾಯಕರಾಗಿದ್ದರು. ಅಂದು ನನ್ನಂತಹ ಅನೇಕ ಯುವಕರಿಗೆ ಸೋಷಲಿಷ್ಟ್ ಸಿದ್ಧಾಂತಗಳ, ಸಮಾಜವಾದಿ ಯುವಜನ ಸಭಾ ಆಪ್ತವಾಗಿತ್ತು. ಸೋಷಲಿಸ್ಟ್ ಚರ್ಚೆಗಳು, ಶಿಬಿರಗಳು ನಡೆಯುತ್ತಿದ್ದ ವೇದಿಕೆ ಅದಾಗಿತ್ತು. ಲೋಹಿಯಾರ ವಿಚಾರಗಳಿಂದ, ಗೋಪಾಲ ಗೌಡರ ಹೋರಾಟದ ಮನೋವೃತ್ತಿಯಿಂದ ಸ್ಫೂರ್ತಿ ಪಡೆದ ಎಷ್ಟೋಜನ ಉದಯೋನ್ಮುಖ ಬುದ್ಧಿಜೀವಿಗಳು, ಲೇಖಕರು, ಸಾಹಿತಿಗಳು, ಹೋರಾಟಗಾರರು ಅಂತಹ ವೇದಿಕೆಯಲ್ಲಿ ಸಿಗುತ್ತಿದ್ದರು. ಸಂವಾದಗಳು ನಡೆಯುತ್ತಿದ್ದವು. ಅಂತಹ ಸಂದರ್ಭಗಳಲ್ಲಿ ವಿದ್ಯಾರ್ಥಿಯಾಗಿದ್ದ ನಾನು ಭಾಗವಹಿಸಿದ್ದು – ನನ್ನ ಅನುಭವದ ವ್ಯಾಪ್ತಿಯನ್ನು ಹಿಗ್ಗಿಸಲು ಕಾರಣವಾಯ್ತು.

ಓದು ಮುಗಿದು ನಾನೊಬ್ಬ ನಿರುದ್ಯೋಗಿ ಯುವಕನಾಗಿ ಸಮಾಜದಲ್ಲಿ ಗುರುತಿಸಿಕೊಳ್ಳುತ್ತಿರುವಾಗ, ದೇಶದ ರಾಜಕೀಯದಲ್ಲಿ ಒಂದು ಸಂಕ್ರಮಣ ಕಾಲವಾಗಿತ್ತು. ಸ್ವಾತಂತ್ರ ಬಂದು ಕಾಲು ಶತಮಾನ ಕಳೆದರೂ ಕಾಂಗ್ರೆಸ್ ಮತ್ತು ನೆಹರೂ ವಂಶದ ಸರ್ವಾಧಿಕಾರಿ ಆಡಳಿತಕ್ಕೆ ಪರ್ಯಾಯ ರಾಜಕೀಯ ಶಕ್ತಿಯನ್ನು ಬೆಳೆಸಲಾರದೇ ಹೋಗಿದ್ದು ಚಡಿಸುತ್ತಿದ್ದ ಹಲವು ರಾಜಕೀಯ ಪಕ್ಷಗಳು, ಅಂದು ಇಂದಿರಾಗಾಂಧಿ ಹೇರಿದ್ದ ತುರ್ತುಪರಿಸ್ಥಿತಿಯ ಕರಾಳ ದಿನಗಳನ್ನು ಅನುಭವಿಸಿ ಒಂದಾಗುವ ಸನ್ನಿವೇಶ ಸೃಷ್ಟಿಯಾಗಿತ್ತು. ಸರ್ವೋದಯ ನಾಯಕ ಜಯಪ್ರಕಾಶ್ ನಾರಾಯಣ್‌ರಂತಹ ವ್ಯಕ್ತಿಗಳು, ಜನಾಂದೋಲನ ರೂಪಿಸಿದ್ದರು. ಜೆ.ಪಿ. ಚಳುವಳಿಯ ಪರ್ವ ಅದು. ಅದೇ ಅವಧಿಯಲ್ಲಿ ಕರ್ನಾಟಕದಲ್ಲಿ ದೇವರಾಜ ಅರಸುರವರ ಇಚ್ಛಾಶಕ್ತಿಯಿಂದಾಗಿ ಅನೇಕ ಜನಪರ ಕಾರ್ಯಕ್ರಮಗಳು ಜಾರಿಯಾಗಿ ಹಿಂದುಳಿದವರು, ದಲಿತರು ಅಲ್ಪಸಂಖ್ಯಾತ ಜಾತಿಗಳು ಭರವಸೆ ಕಾಣುತ್ತಿದ್ದ ಕಾಲವು ಅದಾಗಿತ್ತು. ಗೇಣಿ ರೈತ ಸಮುದಾಯಕ್ಕೆ ಭೂ ಒಡೆಯರಿಂದ ಮುಕ್ತಿ ನೀಡಿದ ಕರ್ನಾಟಕ ಭೂ ಸುಧಾರಣಾ ಕಾಯ್ದೆ ಜಾರಿಯಾಗಿದ್ದು ಅದೇ ಕಾಲದಲ್ಲಿ. ಹಿಂದುಳಿದ ಜಾತಿಗಳು, ಹೊಸ ಪೀಳಿಗೆಗೆ ಶಿಕ್ಷಣ ಮತ್ತು ಉದ್ಯೋಗಗಳಲ್ಲಿ ಮೀಸಲಾತಿ ಅವಕಾಶಗಳಿಗೆ ನಾಂದಿಯಾದ ಹಾವನೂರು ವರದಿ ಜಾರಿಯಾಗಿದ್ದು, ದಲಿತ ಜಾತಿಗಳಲ್ಲಿದ್ದ ಜೀತದಾಳುಗಳ ವಿಮೋಚನೆ, ಋಣ ಪರಿಹಾರ ಕಾರ್ಯಕ್ರಮಗಳು, ತಳಸ್ತರದ ಜನರನ್ನು ಹತ್ತಿರಕ್ಕೆ

ಸೆಳೆದಿದ್ದವು. ಅವರಲ್ಲಿ ಆತ್ಮ ವಿಶ್ವಾಸ ತುಂಬತೊಡಗಿದ್ದವು. ಆಗಲೆಲ್ಲೇ ನನ್ನ ಪ್ರದೇಶದ ಹಿಂದುಳಿದ ಜನಾಂಗದ ಯುವಕರು ಶೈಕ್ಷಣಿಕವಾಗಿ ಮುಂದುವರೆಯಲು ಆರಂಭಿಸಿದ್ದರು.

ಆಗತಾನೆ ಜಾರಿಗೆ ಬಂದ 'ಹಾವನೂರು ವರದಿ' ಪರ-ವಿರೋಧ ಸಂಘರ್ಷ ನಡೆಯುತ್ತಿದ್ದಾಗ ಕಾಲೇಜು ವಿದ್ಯಾರ್ಥಿ ಗುಂಪುಗಳಲ್ಲಿಯೂ ಘರ್ಷಣೆ ನಡೆಯುತ್ತಿದ್ದವು. ಸಾಗರದಲ್ಲಿಯೂ ಅಂತಹದೊಂದು ಪರ-ವಿರೋಧ ಮೆರವಣಿಗೆ ನಡೆಯಿತು. ಹಾವನೂರು ವರದಿ ಪರ ಘೋಷಣೆ ಕೂಗಿದ ನಮ್ಮ ಹಿಂದುಳಿದ ಜಾತಿಯ ವಿದ್ಯಾರ್ಥಿಗಳ ಮೇಲೆ ಸಾಗರದ ಕೆಲವು ಹಿತಾಸಕ್ತಿಗಳು ರೌಡಿ ಎಲಿಮೆಂಟ್ಸ್‌ಗಳಿಂದ ಹಲ್ಲೆ ನಡೆಸಿದ್ದರು. ಆ ಸಂದರ್ಭದಲ್ಲಿ ಆ ರೌಡಿ ಎಲೆಮೆಂಟ್ಸ್‌ಗಳನ್ನು ನಾನು ಎದುರಿಸಿ ನಿಂತೆ. ಹಾವನೂರು ವರದಿ ಫಲಾನುಭವಿಗಳಾಗಿದ್ದ ನೂರಾರು ಜನ ವಿದ್ಯಾರ್ಥಿಗಳು ರೌಡಿಗಳಿಗೆ ಹೆದರಿ ನಿಂತಿದ್ದರು. ನನ್ನ ನಡೆಯಿಂದ ಅವರಿಗೆ ಆತ್ಮವಿಶ್ವಾಸ ಬಂತು. ನಂತರ ಅವರೆಲ್ಲ ಒಟ್ಟಾಗಿ ಅವರನ್ನು ಬೆನ್ನಟ್ಟಿ ಓಡಿಸಿದರು. ಆಗತಾನೆ ಹಿಂದುಳಿದ ವರ್ಗಗಳ ವಿದ್ಯಾರ್ಥಿ ನಿಲಯಗಳು ಆರಂಭವಾಗಿ, ಸಾಗರದಂತಹ ಪಟ್ಟಣದಲ್ಲಿದ್ದು, ಊಟ ವಸತಿ ನೋಡಿಕೊಳ್ಳಲು ಸಾಧ್ಯವಿಲ್ಲದೆ ಎಷ್ಟೋ ಯುವಕರಿಗೆ ಕಾಲೇಜು ವಿದ್ಯಾಭ್ಯಾಸ ಕನಸಾಗಿತ್ತು. ಅಂತಹವರು ನೂರಾರು ಜನ ಧಿಡೀರನೆ ಕಾಲೇಜು ಓದುವ ಸೌಭಾಗ್ಯ ಕಂಡಿದ್ದರು. ಹಾವನೂರು ವರದಿ ಜಾರಿಯಿಂದ ಎಷ್ಟು ಜನ ವಿದ್ಯಾವಂತರು ಈ ಕೆಳಜಾತಿಗಳಿಂದ ಬರಲು ಸಾಧ್ಯವಾಯ್ತಲ್ಲ. ಎಂತಹ ಪವಾಡ ಸದೃಶ ಬೆಳವಣಿಗೆಯಲ್ಲಿ ಎಂದು ಅರಸು ಬಗ್ಗೆ ಅಭಿಮಾನ ಪಟ್ಟಿದ್ದೇನೆ.

ನನಗೆ ಓದಿನಲ್ಲಿ ಹಸಿವು ಇತ್ತು. ಸಾಹಿತ್ಯ ಅಭಿರುಚಿ ನನ್ನ ಸಹೋದರ ಹುಚ್ಚಪ್ಪ ಮಾಸ್ತರರಿಂದ ಬಂದಿತ್ತು. ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಹೊಸ ತಲೆಮಾರಿನವರಿಗೆ ಕೆ.ವಿ. ಸುಬ್ಬಣ್ಣ, ಗೋಪಾಲಕೃಷ್ಣ ಅಡಿಗರು, ಲಂಕೇಶ್, ಅನಂತಮೂರ್ತಿ, ತೇಜಸ್ವಿಯಂತವರು ಸ್ಫೂರ್ತಿಯಾಗಿದ್ದರು. ನಾನು ಸುಬ್ಬಣ್ಣನವರ ಅಕ್ಷರ ಪ್ರಕಾಶನ ನಡೆಸುತ್ತಿದ್ದ ಸಾಗರ ಮುದ್ರಣಕ್ಕೆ ಹೋಗುತ್ತಿದ್ದೆ. ಅಲ್ಲಿ ನಾನು ಲೋಹಿಯಾ ಪುಸ್ತಕಗಳನ್ನು ನೋಡುತ್ತಿದ್ದೆ. ಸಾಕ್ಷಿ ಪತ್ರಿಕೆ ಓದಲು ಕಾಯುತ್ತಿದ್ದೆ. ನಾ ಡಿಸೋಜ ಅವರ ಅನೇಕ ಕಾದಂಬರಿಗಳು, ಕತೆಗಳು, ನನ್ನ ಯೋಚನೆಯ ಹರವುಗಳನ್ನು ಹೆಚ್ಚಿಸುತ್ತಿದ್ದವು. ಗಾಂಧೀಜಿಯವರ ಕೃತಿಗಳು, ವಿವೇಕಾನಂದರ ಪುಸ್ತಕಗಳು ನನ್ನನ್ನು ತಿದ್ದುತ್ತಿದ್ದವು. ನನ್ನ ಪ್ರೌಢ ವ್ಯಾಸಂಗದಲ್ಲಿಯೇ ಅವನ್ನು ಅರಗಿಸಿಕೊಳ್ಳುವುದಕ್ಕೆ ಆರಂಭಿಸಿದ್ದೆ. ನಂತರ ಚಂಪಾ ರವರ ಸಂಪಾದಕೀಯದಲ್ಲಿ ಬರುತ್ತಿದ್ದ ಸಂಕ್ರಮಣ ಪತ್ರಿಕೆಯ ಓದುಗನಾಗಿದ್ದೆ. ಹೀಗೆ ಸಾಹಿತ್ಯದ ಅಭಿರುಚಿ ಬೆಳುಯುತ್ತಿದ್ದಾಗಲೇ, ಪಿ. ಲಂಕೇಶ್ ಆರಂಭಿಸಿದ ಲಂಕೇಶ್ ಪತ್ರಿಕೆ ಹಲವು ಯುವ ಮನಸ್ಸುಗಳನ್ನು ಪ್ರಭಾವಿಸಿತು. ಪ್ರಗತಿಪರ ವಿಚಾರಗಳನ್ನು ಬೆಳೆಸಿದ ಪತ್ರಿಕೆ ಅದಾಯ್ತು. ಆ ಕಾಲದಲ್ಲಿ ವಿರೋಧಪಕ್ಷದಂತೆ ಕೆಲಸ ಮಾಡಿದ ಏಕೈಕ ಪತ್ರಿಕೆ ಎಂಬ ಹೆಗ್ಗಳಿಕೆ ಬಂದಿತ್ತು. ಸಮಾಜವಾದಿಗಳು ಜನತಾಪಕ್ಷದಲ್ಲಿ ವಿಲೀನವಾಗಿದ್ದರು. ಸಮಾಜವಾದಿ ಪಕ್ಷದಿಂದ ಬೆಳೆದ ನಾಯಕರು, ಕಾಂಗ್ರೆಸ್ ಪಕ್ಷ ಸೇರಿದ್ದು ನಮ್ಮಂತಹ ಹೊಸ ತಲೆಮಾರಿನವರಿಗೆ ಒಗ್ಗಿಕೊಳ್ಳಲು ಆಗಲಿಲ್ಲ. ಸಮಾಜವಾದಿ ಯುವಜನ ಸಭಾದ ನಂತರ ನಮಗೆ ಸೂಕ್ತ ವೇದಿಕೆಗಳಿರಲಿಲ್ಲ. ಅಂತಹದೊಂದು ಪರ್ಯಾಯ ವೇದಿಕೆಗಾಗಿ ಹಂಬಲಿಸುತ್ತಿದ್ದಾಗ ನಾನು ಸಾಂಸ್ಕೃತಿಕ ಸಂಘಟನೆಯಾಗಿದ್ದ ಸಮುದಾಯ ಮತ್ತು ದಲಿತ ಸಂಘರ್ಷ ಸಮಿತಿಯ ಸಂಪರ್ಕಕ್ಕೆ ಬಂದಿದ್ದು ಒಂದು ಆಕಸ್ಮಿಕ ಸಂದರ್ಭದಲ್ಲಿ ಎನ್ನಬಹುದು. 'ಎಡ ಪ್ರಜಾಸತ್ತಾತ್ಮಕ ಶಕ್ತಿಗಳ ಐಕ್ಯತೆಗಾಗಿ ಸಾಂಸ್ಕೃತಿಕ ಜಾತಾ' ಎಂಬ ಘೋಷಣೆಯೊಂದಿಗೆ ರಾಜ್ಯಾದ್ಯಂತ

ಸಾಂಸ್ಕೃತಿಕ ಜಾತಾ ಸಂಘಟಿಸಿದ್ದ ಸಮುದಾಯ ಸಂಘಟನೆ ಕಾರ್ಯಕ್ರಮವೊಂದು ಸಾಗರದ ಗಾಂಧಿಮೈದಾನದಲ್ಲಿ ಏರ್ಪಾಡಾಗಿತ್ತು. ಅಲ್ಲಿ ನನ್ನ ಗೆಳೆಯರೊಂದಿಗೆ ಹೋಗಿದ್ದೆ. ಬೀದಿ ನಾಟಕಗಳು, ಹೋರಾಟದ ಹಾಡುಗಳು, ಭಾಷಣಗಳ ಆ ಕಾರ್ಯಕ್ರಮ ನನಗೆ ಬಹಳ ಸ್ಫೂರ್ತಿ ನೀಡಿತು. ಸಮುದಾಯದ ನೇತೃತ್ವ ವಹಿಸಿದ್ದ ಪ್ರಸನ್ನ, ಮಾಲತಿ, ಪರಿಚಯವಾದರು. ದಲಿತ ಸಂಘರ್ಷ ಸಮಿತಿಯ ಯುವಕನಾಗಿದ್ದ ಜನ್ನಿ, ಆವೇಶಭರಿತರಾಗಿ ಹೇಳುತ್ತಿದ್ದ ಹೋರಾಟದ ಹಾಡುಗಳು, ನನ್ನನ್ನು ಸೆಳೆದವು. ಪಿಚ್ಚಳ್ಳಿ ಶ್ರೀನಿವಾಸ, ರಾಮದೇವರಾಜೆ, ನ. ನಾರಾಯಣ ಸ್ವಾಮಿ, ಮುಂತಾದ ದಲಿತ ಗೆಳೆಯರು ಸಿಕ್ಕಿದ್ದು ಅಲ್ಲೇ. ದಲಿತ ಸಂಘಟನೆ ಎಂದರೆ ಕೇವಲ ಪರಿಶಿಷ್ಟ ಜಾತಿಗಳಿಗೇ ಸೀಮಿತವಾದದ್ದಲ್ಲ. ಅದೊಂದು ಚಳುವಳಿಯಾಗಿ ಬೆಳೆಸಬೇಕಾದ ಸಾಧ್ಯತೆಗಳು ನನಗೆ ಗೋಚರಿಸಿದವು. ಸಾಗರದಲ್ಲಿ ನನ್ನ ಆತ್ಮೀಯ ಯುವಕರನೇಕರು ದಲಿತ ಸಂಘರ್ಷ ಸಮಿತಿ ಸ್ಥಾಪಿಸಲು ಕೈ ಜೋಡಿಸಿದರು. ಹುಚ್ಚಪ್ಪ ಕೆಳದಿ, ವಸಂತ್‌ರಾವ್, ಪರಶುರಾಮ್ ಬಳೇಗಾರು, ಶಂಕರ ಸಿ.ಎ., ನಾರಾಯಣ, ಸಿ. ರುದ್ರಪ್ಪ, ಬಸವರಾಜು, ಸಿಗರೇಟು ನಾಗರಾಜ, ಮೋಹನ ಫೆಡ್ರಿಕ್ ಸಲ್ಡಾನ, ಬಾಷಾ, ತೀನ. ಶ್ರೀನಿವಾಸ, ದೊಂಬೆ ಗಣಪತಿ ಮುಂತಾದವರು ನಂತರ ಸೇರಿಕೊಂಡರು. ಅದೊಂದು ಜಾತ್ಯಾತೀತ ಯುವಕರ ಪಡೆಯಾಗಿ ಅನೇಕ ಹೋರಾಟಗಳಿಗೆ ಕಾರಣವಾಯ್ತು.

ಆರಂಭದ ದಿನಗಳಲ್ಲಿ ನಾವು ಅಂತರ್‌ಜಾತೀಯ ವಿವಾಹ ಜೋಡಿಗಳನ್ನು ಸಮ್ಮಾನಿಸುವ ಕಾರ್ಯಕ್ರಮ ಹಾಕಿದೆವು. ಸಾಗರದಲ್ಲಿ ನಾನೇ ನಿಂತು ಮದುವೆ ಮಾಡಿದ ಮೂರು ಜೋಡಿಗಳು ಇದ್ದವು. ವಸಂತ್ ಮತ್ತು ಲಕ್ಷ್ಮೀ, ಹವ್ಯಕ ಯುವಕ, ದೀವರ ಹುಡುಗಿ ಪರಸ್ಪರ ಪ್ರೇಮಿಸಿ ಮದುವೆಯಾದ ಜೋಡಿ. ಹವ್ಯಕ ಪ್ರಮುಖರು ಕೆಲವರು ಒಂದು ಪಂಚಾಯ್ತಿ ಏರ್ಪಡಿಸಿ, ದೀವರ ಹುಡುಗಿಯನ್ನು ಬಿಟ್ಟುಬಿಡಲು ವಸಂತ್‌ಗೆ ಒತ್ತಾಯಿಸಿದರು. ಆದರೆ ವಸಂತ್ ಆ ಪಂಚಾಯ್ತಿ ಸಭೆಯಲ್ಲಿ ಬ್ರಾಹ್ಮಣ ಸಮಾಜಕ್ಕೇ ಧಿಕ್ಕಾರ ಹೇಳಿ ಹೊರಬಂದದ್ದು ನನಗೆ ನೆನಪಿದೆ. ಮೂರನೇ ದಿನ, ವರದಾ ನದಿಯಲ್ಲಿ ತನ್ನ ಜನಿವಾರ ತೆಗೆದು ಎಸೆದ ದೃಶ್ಯ ಅವಿಸ್ಮರಣೀಯ ಎನ್ನಿಸಿದೆ.

ಅನಂತರದ ದಿನಗಳಲ್ಲಿ ಎಷ್ಟೋ ಅಂತರ್‌ಜಾತೀಯ, ಅಂತರ್ ಧರ್ಮೀಯ, ವಿವಾಹಗಳಿಗೆ ನಾವು ನೈತಿಕ ಬೆಂಬಲವಾಗಿ ನಿಂತೆವು. ಅಂತಹ ಒಂದು ಸಂದರ್ಭದಲ್ಲಿ ಕ್ರಿಶ್ಚಿಯನ್ ಹುಡುಗನೊಬ್ಬ ಹಿಂದೂ ಹುಡುಗಿಯನ್ನು ಪ್ರೀತಿಸಿದ್ದ. ಮದುವೆಯನ್ನು ತಾಲ್ಲೂಕು ಕಛೇರಿಯಲ್ಲಿ ಮಾಡಿಸಿದ್ದ ಸುದ್ದಿ ಪತ್ರಿಕೆಯಲ್ಲಿ ಬಂದಿತ್ತು. ದಸಂಸ ನೇತೃತ್ವದಲ್ಲಿ ನಡೆದದ್ದರಿಂದ ನನ್ನನ್ನು ಹುಡುಗಿಯ ಸಹೋದರರು ಸಾಗರದಲ್ಲಿ ಹುಡುಕಾಡಿದ್ದಾರೆ – ಅದರಲ್ಲಿ ಒಬ್ಬ ಕುಖ್ಯಾತ ರೌಡಿ ಇದ್ದ. ಪುರಸಭೆ ಎದುರು ನಾನು ಮತ್ತು ನನ್ನ ಗೆಳೆಯರು ಮಾತನಾಡುತ್ತ ನಿಂತಿದ್ದಾಗ ಒಂದು ಪತ್ರಿಕೆ ಹಿಡಿದುಕೊಂಡು ಅವರು ಬಂದು ನನ್ನನ್ನು ಕೇಳಿದರು. 'ನೀವೇ ಏನ್ರಿ ಶಿವಾನಂದ ಕುಗ್ವೆ, ನನ್ನ ತಂಗಿ ಮದುವೆ ಮಾಡಿಸೋದಕ್ಕೆ ನೀವು ಯಾರು? ನಾವು ಸಾಕಿ ಸಲುಹಿದ ನಮ್ಮ ತಂಗಿಗೆ ಮದುವೆ ಮಾಡಿಸೋ ಕೆಲಸ ನಮ್ಮದ್ರಿ – ನಿಮಗೆ ಚಾಕು ಹಾಕಿಬಿಡುತ್ತೇವೆ' ಎಂದು ರೌಡಿತರಹ ಇದ್ದವನೊಬ್ಬ ಎರಗಿ ಬಂದು, ಕಾಲ್‌ಕೆದರಿ ಜಗಳಕ್ಕೆ ಬಂದ. ಆಗ ನನ್ನೊಡನೆ ಇದ್ದ ಕೆಲ ಸ್ನೇಹಿತರು ತಡೆದರು. ನನ್ನ ಮೈ ಮುಟ್ಟಿದರೆ ಇನ್ನೂ ದೊಡ್ಡದಾಗುತ್ತೆ ಅಂತ ಸುಮ್ಮನಾದರು. ನಂತರ ಕೆಲವೇ ತಿಂಗಳಲ್ಲಿ ಆ ಸಹೋದರರು ತಂಗಿ ಮತ್ತು ಆಕೆಯ ಗಂಡನನ್ನು ಮನೆಗೆ ಕರೆಸಿ ಚೆನ್ನಾಗಿ ಉಪಚರಿಸಿದ್ದರು. ನಾವೇ ದೂರಾಗಿದ್ದೆವು. ಇದರಿಂದ ನನಗೆ ಸಂತಸವೇ ಆಗಿದೆ. ಬದಲಾವಣೆಯನ್ನೂ

ನಮ್ಮ ಜನ ತಕ್ಷಣಕ್ಕೆ ಒಪ್ಪದಿದ್ದರೂ ನಿಧಾನಗತಿಯಲ್ಲಿ ಒಪ್ಪುತ್ತಾರೆ. ಆದರೆ ಈ ನಿಧಾನಗತಿ ಎಂಬುದು ಕತ್ತಲಲ್ಲಿ ಕರಗಿ ಹೋಗುವ ಮಿಣುಕು ದೀಪದಂತಾಗಿದೆ.

ಈ ಕಾರಣಕ್ಕಾಗಿ ಬಹು ಜಾತಿ, ಮತ, ದೇವರು, ಮೂಢನಂಬಿಕೆ ಉಳ್ಳ ನಮ್ಮ ಸಮಾಜದಲ್ಲಿ ಚಳುವಳಿಗಳು ಹುಟ್ಟುತ್ತವೆ. ಅವು ಶೀಘ್ರಗತಿಯಲ್ಲಿ ಬೆಳೆಯಲಾರವು. ಬಹುಪಾಲು ಚಳುವಳಿಗಳು ಬೆಳೆಯಲಾರದೆ ಕತ್ತಲಲ್ಲಿ ಕರಗಿ ಹೋಗುತ್ತಿವೆ.

ಇವತ್ತು ಹಣ ಪ್ರಧಾನ ಪಾತ್ರ ವಹಿಸುತ್ತಿದೆ. ವಾಣಿಜ್ಯ ಸಂಸ್ಥೆಗಳು ಕೃಷಿಯನ್ನು ತನ್ನ ಕಪಿಮುಷ್ಟಿಯಲ್ಲಿ ಹಿಡಿಯಲೆತ್ನಿಸುತ್ತಿವೆ ಎಂಬ ಮಾತು ಕೇಳಿ ಬರುತ್ತಿದೆ. ಇದು ಅಸತ್ಯವೇನಲ್ಲ. ಆದರೆ ಪೂರ್ಣ ಸತ್ಯವೂ ಅಲ್ಲ. ಉದಾಹರಣೆಗೆ ಯಾವುದೇ ಊರಿನ ಮಾರಿಜಾತ್ರೆ ಅಥವಾ ದೇವಸ್ಥಾನದ ಕಾರ್ಯಕ್ರಮ ಗಮನಿಸಿ, ಇಲ್ಲಿ ಹಣಕ್ಕಿಂತ ಭಕ್ತಿ, ನಂಬಿಕೆ, ಭಯ, ಧಾರ್ಮಿಕತೆ ಇವೇ ಹೆಚ್ಚು ಮುಖ್ಯವಾಗಿರುತ್ತದೆ. ಇವುಗಳ ಪ್ರಾಮುಖ್ಯತೆಯಲ್ಲಿ ಹಣ ಶ್ರಮರಹಿತವಾಗಿ ಸಂಗ್ರಹವಾಗಿ ದೇವರ ಸ್ಥಳದಲ್ಲಿ ಮನುಷ್ಯರ ಭ್ರಷ್ಟತೆ ಪ್ರಾರಂಭವಾಗುತ್ತದೆ !

ನಾನು ಬೆಳೆಯುವ ಕಾಲದಲ್ಲಿ ಸಮಾಜವಾದಕ್ಕೆ ಉಜ್ವಲ ಭವಿಷ್ಯದ ಕನಸು ಕಂಡಿದ್ದೆ. ಕರ್ನಾಟಕದಲ್ಲಿ ಭೂ ಸುಧಾರಣಾ ಕಾಯ್ದೆ ಜಾರಿಗೆ ಬರುವವರೆಗೂ, ಜನತಾ ಪಕ್ಷ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಾಗಲೂ, ಆ ಕಾವು ಉಳಿದಿತ್ತು. ಆದರೆ ಬಿ.ಜೆ.ಪಿ ಬೆಳೆಯುತ್ತಿದ್ದಂತೆ ನನ್ನೆಲ್ಲಾ ಕನಸುಗಳೂ ಕಮರಿವೆ.

ಆದರೆ ಕರ್ತವ್ಯ ಪ್ರಜ್ಞೆ ಇನ್ನೂ ಹೆಚ್ಚಾಗಿ ಜಾಗೃತಗೊಂಡಿದೆ. ಸಾಮಾಜಿಕ ನ್ಯಾಯಕ್ಕಾಗಿ ಹೋರಾಟ ಮಾಡುವ ಮನಸ್ಸುಗಳನ್ನು ಸಂಘಟಿಸಿ ಸಮಾಜದಲ್ಲಿ ಜಾಗೃತಿ ಉಂಟುಮಾಡಬೇಕಾದ್ದು ನಿರಂತರ ಕಾಯಕವಾಗಿದೆ. ಈ ಕಾಯಕದಲ್ಲಿ ಪಾಲ್ಗೊಳ್ಳುವ ವಾತಾವರಣವನ್ನು ನಿರ್ಮಿಸಬೇಕಾದ್ದು ನಮ್ಮ ಕರ್ತವ್ಯವಾಗಿದೆ.

*

---

**ಶಿವಾನಂದ ಕುಗ್ವೆ, ಕುಗ್ವೆ, ಸಾಗರ – 577 401**

# ರಮೇಶ ಬಂದಗದ್ದೆಯವರೊಡನೆ ಒಡನಾಟ

**–ಮನೋಹರ ಮಂಡ್ರಿ**

ನನಗಾಗ ಇಪ್ಪತ್ತರ ಹರೆಯ. ಹಳ್ಳಿಯ ಕಾನನದ ಗದ್ದೆ–ತೋಟ, ಆಟ–ಪಾಠಗಳ ನಡುವೆ ಬಾಲ್ಯ ಕಳೆದು ಹರೆಯಕ್ಕೆ ಕಾಲಿಟ್ಟಿದ್ದೆ. ಅಷ್ಟರಲ್ಲಿಯೇ ಸಮಾಜವಾದಿ, ರಾಜಕೀಯ ಮುಖಂಡ ಹಾಗೂ ನನ್ನ ಸೋದರಮಾವನಾದ ರಮೇಶ ಬಂದಗದ್ದೆ ನನ್ನ ಅಪ್ಪನಿಗೊಂದು ಕಾಗದ ಬರೆದು ನನ್ನನ್ನು ಅವನು ಆಗಷ್ಟೇ ಶುರುಮಾಡಿದ್ದ ಅವನ ಫ್ಯಾಕ್ಟರಿ ನೋಡಿಕೊಂಡಿರಲು ಬೇಕಾಗಿದ್ದರಿಂದ ಬೆಂಗಳೂರಿಗೆ ಕಳಿಸಿಕೊಡುವಂತೆ ಬರೆದಿದ್ದ. ದೇಹದ ತುಂಬಾ ಹುಡುಗು–ತುಡುಗು, ತಮಾಷೆ–ಕೀಟಲೆಗಳನ್ನೇ ತುಂಬಿಕೊಂಡಿದ್ದ ನನಗೆ, ನನ್ನ ಮಾವನ ಶಿಸ್ತು, ಅವನ ಮಾತುಗಾರಿಕೆ, ಹಟ–ಸಿಟ್ಟು, ಅವನ ರಾಜಕೀಯ ಸಂಬಂಧಗಳು, ಸಂಘಟನೆ ಮತ್ತು ಸಮಾಜವಾದ ಸಿದ್ಧಾಂತಗಳು ನನ್ನ ಜೀವನಕ್ಕೆ ಹೊಸ ಭಾಷ್ಯವನ್ನೇ ಹುಟ್ಟಿಸಿತ್ತು.

ಕಾಲೇಜು ದಿನಗಳಿಂದಲೂ ರಮೇಶ ಬಂದಗದ್ದೆ ವಿದ್ಯಾರ್ಥಿ ಚಳುವಳಿಗಳಲ್ಲಿ ತೊಡಗಿ ಸಮಾಜವಾದಿ ತತ್ತ್ವಕ್ಕೆ ತನ್ನನ್ನು ತೊಡಗಿಸಿಕೊಂಡಿದ್ದರಿಂದ ಮತ್ತು ತುರ್ತುಪರಿಸ್ಥಿತಿಯ ದಿನಗಳಲ್ಲಿ ಜೈಲುವಾಸ ಅನುಭವಿಸಿದ್ದರಿಂದ ರಾಜ್ಯ ರಾಜಕೀಯ, ಸಮಾಜವಾದಿ ಮುಖಂಡರು ಹಿರಿಯ ಕಾರ್ಯಕರ್ತರೊಂದಿಗೆ ದೇಶಾದ್ಯಂತ ಅಪಾರವಾದ ಪರಿಚಯ ರಮೇಶರವರಿಗಿತ್ತು. ಎಷ್ಟೆಂದರೆ, ಹಿರಿಯ ಸಮಾಜವಾದಿ ದಿ॥ ಸುರೇಂದ್ರ ಮೋಹನ್ ರವರು ಬೆಂಗಳೂರಿಗೆ ಬರುತ್ತಾರೆಂದರೆ ಅವರಿಗೆ ಉಳಿಯುವ ವ್ಯವಸ್ಥೆಯಿಂದ ಹಿಡಿದು ಊಟ, ಓಡಾಟದ ಅಷ್ಟೂ ಕೆಲಸಗಳನ್ನು ರಮೇಶ ಬಂದಗದ್ದೆ ಮಾಡಿಕೊಡುತ್ತಿದ್ದರು. 85 ವರ್ಷದ ವಯೋವೃದ್ಧರಾಗಿದ್ದ ಸುರೇಂದ್ರ ಮೋಹನ್‌ರವರಿಗೆ ಕೆಲವೊಮ್ಮೆ ಪೈಜಾಮ–ಜುಬ್ಬಾ ಹಾಕಿಕೊಳ್ಳಲೂ ಆಗದಷ್ಟು ನಿತ್ರಾಣವಿರುತ್ತಿತ್ತು. ರಮೇಶ್, ಅವರಿಗೆ ಬಟ್ಟೆ ತೊಡಿಸಿ ಊಟ ಮಾಡಿಸಿ ಕಾರಿನಲ್ಲಿ ಅವರನ್ನು ಕರೆದುಕೊಂಡು ಹೋಗಿ ಅವರ ಕೆಲಸ ಕಾರ್ಯಗಳನ್ನು ಪೂರೈಸುತ್ತಿದ್ದುದನ್ನು ನಾನೂ ಅವರ ಜೊತೆಗೆ ಸಹಾಯಕನಾಗಿ ಕೆಲಸ ಮಾಡಿದ್ದನ್ನು ಮರೆಯಲಾರೆ.

ಆಗಷ್ಟೇ ಕೊಟ್ಟಾಯಂನಿಂದ ಉಪಕುಲಪತಿಗಳಾಗಿ ನಿವೃತ್ತಿಹೊಂದಿ ವಾಪಸ್ ಬಂದಿದ್ದ ಡಾ॥ ಯು.ಆರ್. ಅನಂತಮೂರ್ತಿಯವರ ಕಾರ್ ಡ್ರೈವಿಂಗ್ ಲೈಸೆನ್ಸ್‌ನಲ್ಲಿ ಚೇಂಜ್ ಆಫ್ ಅಡ್ರೆಸ್ ಮತ್ತು ರಿನ್ಯೂವಲ್ ಮಾಡಿಸಿ ಕೊಡುವಂತಹ ಕೆಲಸಗಳನ್ನೂ ಸಹ ಯಾವ ಸಂಕೋಚವಿಲ್ಲದೆ ಯಾವ ಅಭಿಲಾಷೆ ಇಲ್ಲದೆ ಮಡಿಕೊಡುವ – ಮಾಡಿಸಿಕೊಟ್ಟ ಅಪರೂಪದ ವ್ಯಕ್ತಿ ರಮೇಶ್ ಬಂದಗದ್ದೆ.

1997ರ ಮೇ ತಿಂಗಳಿನ ಒಂದು ದಿನ ಸಂಜೆ ಬಿ.ಎಂ.ಎಸ್. ಕಾಲೇಜಿನ ಪ್ರಾಂಶುಪಾಲರಾಗಿದ್ದ ಚಲನಚಿತ್ರ ನಟ ಮಾನುರವರನ್ನು ಫೋನ್ ಮಾಡಿ ತಮ್ಮ ಮನೆಗೆ ಬರಲು ಹೇಳಿ ತಮ್ಮ ಕಾರಿನಲ್ಲಿಯೇ ಕೂರಿಸಿಕೊಂಡು ನನ್ನನ್ನೂ ಬರಹೇಳಿ "ಮನೋಹರ್ ಸೀದಾ ರಾಮಕೃಷ್ಣ ಹೆಗಡೆಯವರ ಮನೆ 'ಕೃತ್ತಿಕ'ಗೆ ಹೋಗೋಣ" ಎಂದರು ಮಾವ.

ಆ ದಿನಗಳಲ್ಲಿ ಬೆಂಗಳೂರಿನ ಶಿಕ್ಷಕರ ಕ್ಷೇತ್ರದಿಂದ ಜನತಾದಳದಿಂದ ಸ್ಪರ್ಧಿಸಲು ಅನೇಕರು ಉತ್ಸುಕರಾಗಿದ್ದರು. ಅವರಲ್ಲಿ ನಟ ಮಾನು ಸಹ ಒಬ್ಬರು. ಆದರೆ ದೇವೇಗೌಡರು (ಆಗ ಮುಖ್ಯಮಂತ್ರಿ) ಪ್ರೊ॥ ರಾಧಾಕೃಷ್ಣ ಎಂಬುವವರಿಗೆ ದಳದ ಟಿಕೆಟ್‌ನ್ನು ಅಖೈರುಗೊಳಿಸಿದ್ದರು. ಅಧಿಕೃತವಾಗಿ ಪ್ರಕಟವಾಗಿರಲಿಲ್ಲ ಅಷ್ಟೆ. ಆದ್ದರಿಂದ ರಾಮಕೃಷ್ಣ ಹೆಗಡೆಯವರ ಮೂಲಕ ಒತ್ತಡ ಹೇರಿ ಹೇಗಾದರೂ ಮಾಡಿ ನಟ ಮಾನುರವರಿಗೆ ಆ ಟಿಕೆಟ್ ಕೊಡಿಸಬೇಕೆಂದು ರಮೇಶ್ ಮಾವ ಹಟಕ್ಕೆ ಬಿದ್ದಿದ್ದರು. ಇದಕ್ಕೆ ಕಾರಣವೂ ಇತ್ತು. ಏನೆಂದರೆ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಕ್ಷೇತ್ರವನ್ನು ಪ್ರನಿಧಿಸುತ್ತಿದ್ದ ಡಿ.ಬಿ. ಚಂದ್ರೇಗೌಡರು ತೀರ್ಥಹಳ್ಳಿಯಲ್ಲಿ ಸೋತು, ಪಕ್ಕದ ಶೃಂಗೇರಿ ಕ್ಷೇತ್ರದತ್ತ ಮುಖಮಾಡಿದ್ದರು. ತೆರವಾಗಿದ್ದ ಅವರ ಜನತಾದಳದ ಸ್ಥಾನಕ್ಕೆ ಅದೇ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ದೇವಂಗಿಯವರಾದ ಮಾನುರವರನ್ನು ಮುಂಚೂಣಿಗೆ ತರಲು ಈ ಬೆಂಗಳೂರಿನ ಶಿಕ್ಷಕರ ಕ್ಷೇತ್ರದ ವಿಧಾನ ಪರಿಷತ್ತಿನ ಚುನಾವಣೆಯನ್ನು ಮೊದಲ ಮೆಟ್ಟಿಲಾಗಿ ಉಪಯೋಗಿಸುವ ತಂತ್ರವನ್ನು ರಮೇಶ್ ಉಪಯೋಗಿಸಲು ಬಯಸಿದ್ದರು. ಮತ್ತು ಈ ಸಲುವಾಗಿ ಮಾತಾಡಲು ರಾಮಕೃಷ್ಣ ಹೆಗಡೆಯವರನ್ನು ಭೇಟಿ ಮಾಡಲು ಪ್ರಯತ್ನಿಸಿದಾಗಲೆಲ್ಲ ಹೆಗಡೆಯವರು ವಿದೇಶ ಪ್ರವಾಸದಲ್ಲಿರುತ್ತಿದ್ದರು.

ನಾವು ಹೆಗಡೆಯವರ ಮನೆ 'ಕೃತ್ತಿಕಾ' ಮುಟ್ಟಿದಾಗ ಅವರ ಮನೆಯ ತುಂಬಾ ಮತ್ತು ಹೊರಗಡೆ ಜನಜಂಗುಳಿಯೇ ನೆರೆದಿತ್ತು. ಹಿಂದಿನ ದಿನವಷ್ಟೇ ವಿದೇಶ ಪ್ರವಾಸದಿಂದ ಹಿಂದಿರುಗಿದ್ದ ಹೆಗಡೆಯವರು ಇಂದು ಮತ್ತೆ ಆಸ್ಟ್ರೇಲಿಯಾಗೆ ಅಲ್ಲಿನ ವಿಶ್ವವಿದ್ಯಾಲಯಗಳಿಗೆ ವಿಶೇಷ ಉಪನ್ಯಾಸ ನೀಡಲು ಹೊರಟುನಿಂತಿದ್ದರು.

ಆ ಜನಜಂಗುಳಿಯ ನಡುವೆಯೇ ಹೊರಟುನಿಂತಿದ್ದ ಹೆಗಡೆಯವರನ್ನು ರಮೇಶ್ 'ಸರ್ ನಿಮ್ಮ ಬಳಿ ಎರಡು ನಿಮಿಷ ಮಾತನಾಡಕ್ಕಿದೆ' ಎಂದರು. 'ಹೇಳು ರಮೇಶ್ ಅದೇನದು?' ಎಂದಾಗ ಮಾನುರವರ ವಿಷಯವನ್ನು ಪ್ರಸ್ತಾಪಿಸಿ, ದೇವೇಗೌಡರು ಪ್ರೊ॥ ರಾಧಾಕೃಷ್ಣರವರಿಗೆ ಟಿಕೆಟ್ ನೀಡುವ ಆಶ್ವಾಸನೆಯನ್ನು ವಿವರಿಸಿ ಆ ಟಿಕೆಟ್ ಅನ್ನು ಮಾನುರವರಿಗೆ ಕೊಡಿಸುವಂತೆ ಮಾಡಬೇಕೆಂದು ವಿನಂತಿಸಿದರು. 'ಅಲ್ಲಯ್ಯಾ ರಮೇಶ್, ಈ ಪ್ರಕ್ರಿಯೆಗಳೆಲ್ಲಾ ಶುರುವಾಗಿ ಈಗಾಗಲೇ ಎರಡು ತಿಂಗಳಾದವು. ಈಗ ಬಂದು ಟಿಕೆಟ್ ಬೇಕು ಎಂದು ಪ್ರಸ್ತಾಪ ಮಾಡ್ತಾ ಇದಿರಲ್ಲಾ.... ಮುಂಚೆನೆ ಆಗಿದ್ದಿದ್ದರೆ ಏನಾದರೂ ಮಾಡಬಹುದಿತ್ತು. ಈಗ ನೀನೇ ಹೇಳಿದಂತೆ ಪ್ರೊ॥ ರಾಧಾಕೃಷ್ಣ ಅವರಿಗೆ ಟಿಕೆಟ್ ಅಂತಿಮಗೊಳಿಸಿದ ಮೇಲೆ ನಾನೇನು ಮಾಡಲಯ್ಯ? ಬಾ ನನ್ನ ಜೊತೆ ಏರ್‌ಪೋರ್ಟಿನವರೆಗೂ. ನನ್ನ ಕಾರಿನಲ್ಲಿಯೇ ಮಾತಾಡುತ್ತಾ ಹೋಗೋಣವಂತೆ' ಎಂದು ಕೈ ಹಿಡಿದು ಹೊರಡಿಸಲು ಎದ್ದುಬಿಟ್ಟರು. ಎಲ್ಲಿತ್ತೋ ಸಿಟ್ಟು? ಯಾರಿದ್ದಾರೆ, ಯಾರಿಲ್ಲ ಎಂದೆಣಿಸದೆ ರಮೇಶ್ ಮಾವ ಹೆಗಡೆಯವರಿಗೆ ಜೋರು ಬಾಯಲ್ಲಿ 'ಸರ್ ಸತತ ಎರಡು ತಿಂಗಳಿನಿಂದ ನಿಮ್ಮನ್ನು ಭೇಟಿ ಮಾಡಲು, ದೂರವಾಣಿಯಲ್ಲಿ ಮಾತನಾಡಲು ನಿಮ್ಮ ಪಿಎ ಗಳಾದ ನಾಗರಾಜ, ರಾಜಣ್ಣರವರಿಗೆ ಎಷ್ಟು ಬಾರಿ ಫೋನ್ ಮಾಡಿದ್ದೇನೆಂದು ಕೇಳಿ....

ನೀವು ಆಸ್ಟ್ರೇಲಿಯಾ, ಆಕ್ಸ್‌ಫರ್ಡ್ ಎಂದು ಪ್ರಪಂಚ ಪರ್ಯಟನೆ ಮಾಡುತ್ತಿರುತ್ತೀರಿ. ನಾವಿಲ್ಲಿ ನಿಮ್ಮನ್ನು ನಂಬಿಕೊಂಡು ರಾಜಕೀಯದ ಜಪ ಮಾಡಿಕೊಂಡಿರುತ್ತೇವೆ... ಅದೇನು ಮಾಡುತ್ತೀರೋ ಗೊತ್ತಿಲ್ಲ ಮಾನುರವರಿಗೆ ಟಿಕೆಟ್ ಕೊಡಿಸಲೇಬೇಕು ಇಲ್ಲದಿದ್ದರೆ ನಾನು ಕೇಳುವವನೇ ಅಲ್ಲ' ಎಂದೆಲ್ಲಾ ಕೂಗಾಡುತ್ತಿದ್ದರೆ, ಅಲ್ಲಿದ್ದ ಜನರೆಲ್ಲಾ ದಂಗಾಗಿ ಹೋಗಿದ್ದರು.

ಹೆಗಡೆಯವರು ಮಾತ್ರ ರಮೇಶ ಮಾವನ ಮಾತನ್ನು ಕೇಳುತ್ತಾ ಮುಗುಳ್ನಗುತ್ತಿದ್ದರು. 'ರಮೇಶ್ ಬಾ... ಬಾ ಮಾತಾಡೋಣ, ನಡಿ ಕಾರು ಹತ್ತು ಎಂದು' ಅವರ ಕಾರನ್ನು ಹತ್ತಿಸಿಕೊಂಡು ಏರ್‌ಪೋರ್ಟ್‌ನತ್ತ ಹೊರಟು ಹೋದರು. ನಾನು ಮಾನುರವರನ್ನು ನಮ್ಮ ಕಾರಿನಲ್ಲಿ ಹತ್ತಿಸಿಕೊಂಡು ಹೆಗಡೆಯವರ ಕಾರನ್ನು ಹಿಂಬಾಲಿಸಿ ಏರ್‌ಪೋರ್ಟ್‌ನತ್ತ ಹೊರಟೆ. ಮುಂದೆ ನಡೆದ ಚುನಾವಣೆಯಲ್ಲಿ ಬಿಜೆಪಿ ಅಭ್ಯರ್ಥಿ ಗೆದ್ದು, ಪ್ರೊ। ರಾಧಾಕೃಷ್ಣ ಅವರೂ ಸೋತರು. ಮಾನು ಪಕ್ಷೇತರರಾಗಿ ಸ್ಪರ್ಧಿಸಿ ಸೋತುಹೋದರು. ನಂತರ ನಡೆದ ಬೆಳವಣಿಗೆಗಳಲ್ಲಿ ದೇವೇಗೌಡರು ಪ್ರಧಾನಿಯಾಗಿ ರಾಮಕೃಷ್ಣ ಹೆಗಡೆಯವರನ್ನು ದಳದಿಂದ ಉಚ್ಚಾಟಿಸಿ, ಹೆಗಡೆಯವರು 'ಕರ್ನಾಟಕ ನವ ನಿರ್ಮಾಣ ವೇದಿಕೆ' ಕಟ್ಟಿದರು. ಅದರ ಕಾರ್ಯನಿಮಿತ್ತ ಓಡಾಡುವಾಗ ರಮೇಶ್ ಬಂದಗದ್ದೆ ಮತ್ತು ಮಾನು ಕಾರು ಅಪಘಾತದಲ್ಲಿ ಮೃತರಾದರು.

ರಮೇಶ್ ಬಂದಗದ್ದೆ ಈಗ ನಮ್ಮೊಂದಿಗಿಲ್ಲ ನಿಜ. ಆದರೆ ಅವರು ಅವರಂತಹವರನ್ನು ಹತ್ತಿರದಿಂದ ಬಲ್ಲವರಿಗೆ ಅವರ ಆದರ್ಶ, ಹೋರಾಟ, ಪ್ರಾಮಾಣಿಕತೆಗಳು ದಾರಿಯಾಗಬೇಕೆಂಬುದು ಒಂದು ಆಶಯ. ಹೋರಾಟ-ನಿಷ್ಕಳಂಕದ ಜಾಯಮಾನದವರು. ಎಂತಹ ಸಂದರ್ಭಗಳಲ್ಲಿಯೂ ಯಾರೊಂದಿಗಾದರೂ ಎಷ್ಟೇ ದೊಡ್ಡ ಅಧಿಕಾರದಲ್ಲಿದ್ದವರಿಗೂ ತಮ್ಮ ನಿಲುವು ಹಕ್ಕನ್ನು ಪ್ರತಿಪಾದಿಸಲು ಅಧಿಕಾರ ಹೊಂದಿರುತ್ತಾರೆ ಎಂಬುದಕ್ಕೆ ರಾಮಕೃಷ್ಣ ಹೆಗಡೆಯವರಿಗೆ ರಮೇಶ್ ಎಲ್ಲರೆದುರು ಗಟ್ಟಿಯಾಗಿ, ಜೋರಾಗಿ ಮಾತಾಡಿದರು ಎಂಬುದೊಂದು ನಿದರ್ಶನವಾದರೆ, ಮಾವನ ವಿಚಾರಧಾರೆಗಳಿಂದ ಪ್ರಭಾವಿತರಾದ ಶಿವಕುಮಾರ್ ಇಂದು ಕೆಂಗೇರಿಯಲ್ಲಿ ಡಾ॥ ರಾಮಮನೋಹರ ವಿಚಾರ ವೇದಿಕೆಯೊಂದನ್ನು ಹುಟ್ಟುಹಾಕಿ ಆ ಮೂಲಕ 'ಮಾಹಿತಿ ಹಕ್ಕು' ಮತ್ತು 'ಭ್ರಷ್ಟಾಚಾರ ನಿರ್ಮೂಲನೆ' ಎಂಬ ಸಂಘಟನೆಯಡಿಯಲ್ಲಿ ಅಪಾರ ಕೆಲಸ ಮಾಡುತ್ತಿದ್ದಾರೆ ಎಂಬುದು ಹೆಮ್ಮೆಯ ಸಂಗತಿ. ಯಡಿಯೂರಪ್ಪನವರ ಭ್ರಷ್ಟಾಚಾರ ಲೋಕಾಯುಕ್ತಕ್ಕೆ ದೂರು ಹೋದಾಗ ಅವರ ಅನೇಕ ಭ್ರಷ್ಟಾಚಾರದ ದಾಖಲೆಗಳನ್ನು ಒದಗಿಸಿದ್ದು ಡಾ॥ ರಾಮಮನೋಹರ ವಿಚಾರ ವೇದಿಕೆಯ ಶಿವಕುಮಾರ್‌ರವರು.

ರಮೇಶ್ ಮಾವನಿಗೆ ಡಾ। ರಾಮಮನೋಹರ ಲೋಹಿಯಾ ವಿಚಾರಧಾರೆಯಲ್ಲಿ ಅಪಾರ ವಿಶ್ವಾಸ, ಅಭಿಮಾನ. ಇಂದು ನನ್ನ ಹೆಸರು ಮನೋಹರ ಎಂದಿರಲು ಕಾರಣ ಕೂಡ ಮಾವ. ದೊಡ್ಡವರ ಹೆಸರಷ್ಟೇ ಇಂದು ನಮಗಿದೆ. ಆ ಹೆಸರಿನಿಂದ ಸಮಾಜದೊಳಿತಿಗಾಗಿ ಒಂದಷ್ಟು ಕೆಲಸ ಮಾಡಲು ಸ್ಫೂರ್ತಿ ಆಗಬೇಕಾಗಿದೆ.

ಹಿರಿಯರ ಒಳ್ಳೆಯ ಗುಣಗಳು ನಮ್ಮ ವ್ಯಕ್ತಿತ್ವಕ್ಕೂ ಅಂಟಿ ನಮ್ಮ ವ್ಯಕ್ತಿತ್ವ ಗಟ್ಟಿಯಾಗಿ ರೂಪಗೊಳ್ಳಲು ಅವರೊಂದಿಗೆ ಕಳೆದ ದಿನಗಳ ಅನುಭವಗಳು ನೆರವಿಗೆ ಬರಲೆಂದು ಆಶಿಸುವೆ.

*

ಮನೋಹರ್, ಕೆಳದಿ (ಮಂಡ್ರಿ) ಹರಿದ್ರಾವತಿ, ಹೊಸನಗರ, ಶಿವಮೊಗ್ಗ. ದೂ: 9448817232



# ನೀರು ನೀರೆಂದರೆ...

**–ಬಂದಗದ್ದೆ ರಾಧಾಕೃಷ್ಣ**

ನೀರು ಅಂದಾಕ್ಷಣ ಮನಸ್ಸು ವಿಷಯ ಸರಳವಾದುದು ಅನ್ನುತ್ತದೆ. ಕಬ್ಬಿಣ, ಬಂಗಾರ ಅಂದಾಕ್ಷಣ ಮನಸ್ಸಲ್ಲಿ ಕಠಿಣವಾದದ್ದು, ಅಪೂರ್ವವಾದದ್ದು ಎಂಬ ಭಾವ ಸುಳಿಯುತ್ತದೆ. ಬೇರೆಲ್ಲರಿಗಿಂತಲೂ ಕೃಷಿಕನಿಗೆ ನೀರಿನ ಮಹತ್ವದ ಅರಿವು ಚೆನ್ನಾಗಿರುತ್ತದೆ. ಮಲೆನಾಡಿನ ಕೃಷಿಕರಿಗಂತೂ ನೀರು ವರವೂ ಹೌದು, ಉಪದ್ವ್ಯಾಪವೂ ಹೌದು! ಮಳೆಗಾಲದಲ್ಲಿ ನೀರನ್ನು ಹೊಳೆ ಹಳ್ಳಕ್ಕೆ ಕಳಿಸಿ ಮನೆ, ಗದ್ದೆ, ತೋಟ ಕಾಪಾಡಬೇಕು. ಬೇಸಿಗೆಯಲ್ಲಿ ತಗ್ಗಿನಿಂದ ನೀರನ್ನು ಮೇಲೆತ್ತಿ ಗಿಡಗಳನ್ನು, ಸಸಿಗಳನ್ನು ಕಾಪಾಡಬೇಕು.

ವಿಫುಲವಾದ ಕಾಡು ನಾಶವಾಗುತ್ತಿದ್ದಂತೆ ಅಬ್ಬಿನೀರು, ಬೆಟ್ಟಗಳಿಂದ ಹರಿವ ನೀರು ಕಣ್ಮರೆಯಾಗುತ್ತಿದೆ. ಕೆರೆ, ಬಾವಿಗಳಲ್ಲಿ ಅಂತರ್ಜಲ ಕೆಳಗಿಳಿಯುತ್ತಿದೆ. ಇದು ಒಂದು ಹಂತದ ನೀರಿನ ಬವಣೆ.

ಹರಿವ ನದಿಗಳಿಗೆ ಅಣೆಕಟ್ಟು ನಿರ್ಮಾಣದಿಂದ ಮುಳುಗಡೆ, ಸ್ಥಳಾಂತರದಿಂದ ಜನ ಜಾನುವಾರುಗಳ ಅತಂತ್ರ ಬದುಕು, ಅಧಿಕಾರಶಾಹಿಯಲ್ಲಿ ಬ್ರಷ್ಟಾಚಾರ, ವಿದ್ಯುತ್‌ನ ದುರ್ಬಳಕೆ, ಮುಳುಗಡೆ ಪ್ರದೇಶದಲ್ಲಿ ಕಳ್ಳನಾಟಾ ದಂಧೆ, ಒಟ್ಟೂ ನದೀ ಸುತ್ತಲ ಕಾಡು ನಾಶ, ಮಣ್ಣು ಸವಕಳಿ ಹೀಗೆ ಸೂಕ್ಷ್ಮ ಪ್ರದೇಶದ ಸರ್ವನಾಶದ ಮುನ್ನುಡಿ ಪ್ರಾರಂಭವಾಗುವುದು. ನದೀ ನೀರು ಹಂಚಿಕೆಗಳಲ್ಲಿ ರಾಜ್ಯ ರಾಜ್ಯಗಳ ನಡುವೆ ಮನಸ್ತಾಪ, ರಸ್ತೆ ತಡೆ, ಬಂದ್– ಹೀಗೆ ಸದಾ ಆತಂಕದ ವಾತಾವರಣ ಮತ್ತು ಸಮಾಜದಲ್ಲಿ ಕಲುಷಿತ ವಾತಾವರಣ ನಿರ್ಮಾಣವಾಗುತ್ತಿದೆ.

ಕುಡಿವ ನೀರಿನ ಬಾಟಲ್, ಬಿರುಡೆ, ಹೀಗೆ ಮಾರುಕಟ್ಟೆಯ ಪ್ರಾರಂಭ ಗುಣಾವಗುಣಗಳನ್ನು ಹೊಂದಿದೆ. ಎಲ್ಲೆಲ್ಲೂ ಬ್ರ್ಯಾಂಡೆಡ್ ಕುಡಿವ ನೀರು ಸಿಗುತ್ತಿದೆ. ರೋಗ ರುಜುನಾದಿಗಳು, ಇನ್‌ಫೆಕ್ಷನ್ ಆಗದು ಎಂಬ ನಂಬಿಕೆಯನ್ನು ತಂದಿದೆ. ಆದರೆ ಈ ಬಾಟಲ್‌ಗಳು ಎಲ್ಲೆಲ್ಲೂ ಪ್ಲಾಸ್ಟಿಕ್ ಕಸವಾಗಿ ಇದರ ನಿರ್ವಹಣೆ ಹೇಗೆ ಎಂಬ ಪ್ರಶ್ನೆ ಎದ್ದಿದೆ. ಹಣಕ್ಕೆ ಶುದ್ಧ ನೀರು ಸಿಗುವಾಗ ಹಣವಿಲ್ಲದೆ ಶುದ್ಧ ನೀರು ಕಾಪಿಡುವ ವ್ಯವಸ್ಥೆಗಳೇ ಇಲ್ಲದೆ ಹಣ ನೀಡಿ ನೀರು ಪಡೆಯಲಾರದವರು ಪರಿತಪಿಸುವಂತಾಗಿದೆ.

ಶುದ್ಧ ನೀರು ಮತ್ತು ಆಹಾರ ಈಗ ಬಂಗಾರಕ್ಕಿಂತ ಹೆಚ್ಚು ಬೇಡಿಕೆಯ ವಸ್ತುವಾಗುತ್ತಿದೆ. ನೀರು ಅಂದಾಕ್ಷಣ ಮನಸ್ಸು ಸರಳವಾದುದು ಅನ್ನುತ್ತಿಲ್ಲ ಈಗ. ನೀರೆಂಬುದು ಈಗ ತುಂಬಾ ಸಂಕೀರ್ಣ ವಸ್ತು. ಭೌತಿಕವಾಗಿ ಮಾತ್ರವಲ್ಲ. ಭಾವನಾತ್ಮಕವಾಗಿ ಕೂಡಾ. ಮುಂದೆ ಪ್ರಸ್ತಾಪಿಸಿದ ಗಂಗಾ ನದಿಯ ಉಳಿವಿಗಾಗಿ ಜ್ಞಾನ ಸ್ವರೂಪ ಸಾನಂದರು - ಜಿ.ಡಿ ಅಗರ್‌ವಾಲರು ನಡೆಸುತ್ತಿರುವ ಹೋರಾಟ ನಮಗೊಂದು ಮಾದರಿ. ಈ ದೇಶದ ಯಾವುದೇ ನದಿಯ ಕತೆಯೂ ಗಂಗಾ ನದಿಯ ಕತೆಯೇ ಆಗಿದೆ.

ಗಂಗಾಸ್ನಾನಂ, ತುಂಗಾ ಪಾನಂ ಎಂದು ನಮ್ಮಲ್ಲಿ ಹೇಳೋದುಂಟು. ಗಂಗೆಯಲ್ಲಿ ಮಿಂದರೆ ಹಲವರಿಗೆ ಧನ್ಯತೆಯ ಭಾವ. ತುಂಗಾ ನದಿ ನೀರು ಕುಡಿಯಲು ಬಲು ರುಚಿಯೆಂಬುದು ಅನುಭವಸ್ಥರ ಮತ. ಇಂಥ ಹಲವಾರು ನದಿಗಳು ನಮಗುಂಟು. ವರದಾ ನದೀ ದಂಡೆಯಲ್ಲಿ ಬದುಕುವ ನನಗೆ ಈ ನದಿ ಕುರಿತು ಇರುವ ನಂಬಿಕೆಗಳು, ಕತೆಗಳು ಮತ್ತು ಜನರು ನದೀ ಹೆಸರನ್ನೇ ಮಕ್ಕಳಿಗೆ ಇಟ್ಟು ಸಂಭ್ರಮಿಸುವ ಪರಿ - ಈ ಎಲ್ಲದರ ಅನುಭವವಾಗಿದೆ. ಆಯಾ ಪ್ರದೇಶದ ನದಿಗಳು ಅಲ್ಲಿನ ಜನರಲ್ಲಿ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ನಂಟನ್ನು ಬೆಳೆಸಿವೆ. ಹೀಗಾಗಿ ನೀರೆಂಬುದು ಕೇವಲ ಭೌತಿಕ ವಸ್ತುವಲ್ಲ. ಜನರಲ್ಲಿ ಒಂದು ಕಡೆ ಈ ರೀತಿಯ ಸೆಳೆತಗಳಿದ್ದರೂ ಇಂಥ ನದಿಗಳನ್ನು ನಾವು ಕಲುಷಿತಗೊಳಿಸುತ್ತಿದ್ದೇವೆ. ನಗರದ ಹೊಲಸುಗಳು, ಕಾರ್ಖಾನೆಗಳ ತ್ಯಾಜ್ಯಗಳು, ಮುಂತಾದವುಗಳನ್ನು ನದಿಗೆ ಸೇರಿಸಿ ಜಲಚರಗಳ ಸಾವಿಗೆ, ನದಿಯ ಕೆಳಹರಿವಿನ ಜನರ ಸಂಕಷ್ಟಗಳಿಗೆ ಕಾರಣರಾಗುತ್ತಿದ್ದೇವೆ. ಏಕೆ ಈ ವೈರುಧ್ಯ?

## ನೀರು–ಮಾತೆ ಹೌದೇ ನಮಗೆ?

ಭಾರತಕ್ಕೆ ಸ್ವಾತಂತ್ರ್ಯ ಲಭಿಸುವುದು, ಅರಸೊತ್ತಿಗೆ ಉಳಿಯುವುದಿಲ್ಲ ಎಂದು ತಿಳಿದಾಗ ಸ್ಥಳೀಯ ಸಂಸ್ಥಾನಿಕ ಅರಸರು ಅರಣ್ಯವನ್ನು ಗುತ್ತಿಗೆದಾರರಿಗೆ ನೀಡುತ್ತಾರೆ. ಗುತ್ತಿಗೆದಾರರು ಮರಗಿಡಗಳನ್ನು ಕಡಿದು ಸಾಗಿಸುತ್ತಾರೆ. ಜೀವಸಂಕುಲಕ್ಕೆ ಆಶ್ರಯವಾಗಿದ್ದ ಮರಗಳು ಮಾಯವಾದಾಗ ಪಶು ಪಕ್ಷಿಗಳು ಮತ್ತು ನೀರೂ ಮಾಯವಾಯಿತು. ಮಳೆ ಬಿದ್ದಾಗ ಮಾತ್ರ ಹಳ್ಳದಲ್ಲಿ ನೀರು ಹರೀತಿತ್ತು. ಮರಗಳಿಲ್ಲದ ಕಾರಣ ಜೀವಾಣುಗಳ ಆಗರವಾಗಿದ್ದ ಮೇಲ್ಮಣ್ಣು ತೊಳೆದು ಹೋಯ್ತು. ಭೂಮಿ ಬರಡಾಗಿ ನದಿಗಳು ಒಣಗಿದವು. ಜಾನುವಾರುಗಳು ನೀರಿಲ್ಲದೇ ಒದ್ದಾಡಿದವು. ಕ್ರಮೇಣ ಹಳ್ಳಿಯ ಜನ ಪಟ್ಟಣಗಳಿಗೆ ಗುಳೇ ಹೋಗಲಾರಂಭಿಸಿದರು. ನಗರದಲ್ಲಿ ಕೂಲಿ ಮಾಡುವವರ ಸಂಖ್ಯೆ ಅಧಿಕವಾಯಿತು. ಕೆಲವೇ ಶ್ರೀಮಂತರು ಮತ್ತು ಬಹು ಬಡವರಿಂದ ನಗರ ತುಂಬಿ ತುಳುಕಿತು!

ಇತ್ತ ಶೋಚನೀಯ ಸ್ಥಿತಿ ತಲುಪಿದ ಗೋಪಾಲಪುರ ದಿಕ್ಕುಕಾಣದಾಗಿತ್ತು. ಶಿಕ್ಷಣ ನೀಡುತ್ತೇವೆ ಎಂದು ಬಂದ ತರುಣ ಭಾರತ ಸಂಘದ ಅಧ್ಯಕ್ಷರಿಗೆ ಅನುಭವೀ ವೃದ್ಧ ಮಂಗಾಲಾಲ್ ಪಟೇಲ್ ಮೊದಲು ಈ ಊರಿಗೆ ನೀರಿನ ವ್ಯವಸ್ಥೆ ಮಾಡಿ. ಆ ಮೇಲೆ ಶಿಕ್ಷಣ ಎಂದ. ಹಿರಿಯಜ್ಜನ ಮಾತಿಗೆ ಬೆಲೆ ನೀಡಿ ರಾಜೇಂದ್ರ ಸಿಂಗ್ ನೀರಿನ ಕುರಿತು ತೀವ್ರ ಚಿಂತನೆ ನಡೆಸಿದರು. ಭಾರತದಲ್ಲಿ ಎಲ್ಲೆಲ್ಲೂ ಪಾರಂಪರಿಕ ಮಳೆ ನೀರು ಸಂಗ್ರಹಣಾ ಕ್ರಮವೆಂದರೆ ಕೆರೆಗಳು. ರಾಜೇಂದ್ರ ಸಿಂಗ್ ಕೂಡಾ ಗೋಪಾಲಪುರದಲ್ಲಿ ಕೆರೆ ಅಗೆಯಲು ಆರಂಭಿಸಿದರು. ಊರಲ್ಲಿ ನೀರಿಲ್ಲದೇ ಪಟ್ಟಣಕ್ಕೆ ಹೋಗಿ ಕೂಲಿ ಮಾಡಿದ ಗೋಪಾಲಪುರದ ಜನರು ಮಳೆಗಾಲ ಆರಂಭವಾಗುತ್ತಿದ್ದಂತೆ ಊರಿಗೆ ಬಂದರು. ರಾಜೇಂದ್ರ ಸಿಂಗ್ ಊರವರನ್ನು ಸಂಘಟಿಸಿ ನೀರಿನ ಮಹತ್ವ ತಿಳಿಸಿದರು. ಕೆರೆ ಕೆಲಸವನ್ನು ಶ್ರದ್ಧೆಯಿಂದ ಮಾಡಿದರೆ ಕೂಲಿ ಕೆಲಸ ಮಾಡುವ ಅಗತ್ಯವಿರುವುದಿಲ್ಲ ಎಂದು ಮನವರಿಕೆ ಮಾಡಿದರು. ಇದರ ಫಲವಾಗಿ 423 ಮೀ. ಉದ್ದದ ಕೆರೆ ಗೋಪಾಲಪರದಲ್ಲಿ ನಿರ್ಮಾಣವಾಯಿತು. ನೀರು ತುಂಬಿ ನಿಂತ ಕೆರೆ ಆ ಊರಿನ ಜೀವನಾಡಿಯಾಯಿತು. ಕಣ್ಣಿಗೆ ಹಬ್ಬವಾಯಿತು.

## ನೀರಿನ ಹಬ್ಬ

ಗೋಪಾಲಪುರದಲ್ಲಿ ನೀರು ನಿಂತ ಕೆರೆಯಿದೆ ಎಂಬುದೇ ಸುತ್ತಮುತ್ತಲ ಹಳ್ಳಿಗಳಿಗೆ ದೊಡ್ಡ ಸುದ್ದಿಯಾಯಿತು. ಗೋಪಾಲಪುರದ ಬೀಗತನ ಮಾಡಿದ್ದ ಸುತ್ತಮುತ್ತಲಿನ 45 ಹಳ್ಳಿಗಳ ಬೀಗರನ್ನು ಹೊಸ ಕೆರೆ ನೀರು ಕುಡಿಯಲು ಆಮಂತ್ರಿಸಿದರು. ಇದೊಂದು ದೊಡ್ಡ ಹಬ್ಬವೇ ಆಯಿತು. ಈ ಹಬ್ಬದ ವಾತಾವರಣದಿಂದ ರಾಜೇಂದ್ರ ಸಿಂಗ್ ಮತ್ತು ತರುಣ ಭಾರತ ಸಂಘಕ್ಕೆ ಬಲ ಬಂತು. ಜನರ ವಿಶ್ವಾಸದಿಂದ ಧೈರ್ಯಬಂತು. ಸುತ್ತಮುತ್ತಲ ಊರುಗಳಲ್ಲಿ ಕೆರೆ, ಕಟ್ಟೆ, ಚೆಕ್‌ಡ್ಯಾಮ್ ನಿರ್ಮಿಸಲು ಆಹ್ವಾನಗಳು ಬಂದವು.

ಗೋವಿಂದಪುರ, ಹಮೀದ್‌ಪುರ, ಆಳ್ವಾರ ಜಯಪುರ, ದೌಸ, ಕರೋಲಿ, ಸವಾಯಿ ಮಾಧವಪುರ, ಉದಯಪುರ, ಜಯಸಲ್‌ಮೋರ್, ಈ ಜಿಲ್ಲೆಗಳಲ್ಲಿ 650 ಹಳ್ಳಿಗಳಲ್ಲಿ 3,000 ಕೆರೆಗಳು, ಚೆಕ್ ಡ್ಯಾಮ್‌ಗಳು ಸಿದ್ಧವಾದವು. ಮಳೆಗಾಲದಲ್ಲಿ ಮಾತ್ರ ಹರಿಯುವ ನೀರು ಕಾಣುತ್ತಿದ್ದ ಜಾಗದಲ್ಲಿ ಸದಾಕಾಲವೂ ನೀರು ಹರಿಯಲು ಪ್ರಾರಂಭವಾಯಿತು. ರೂಪರೇವಾ ಉಪನದಿ ತುಂಬಿ ಹರಿಯಲು ತೊಡಗಿತು. ಈ ನದೀ ಪ್ರದೇಶಗಳು ಮತ್ತೆ ಹಸಿರಾದವು. ಜಬ್ಬಾರ್ ಪಕ್ಷಿಗಳು ಮತ್ತೆ ಕಾಣತೊಡಗಿತು. ಮೊದಲಿನಂತೆ ಅಭಯಾರಣ್ಯ ನಿರ್ಮಾಣವಾಯಿತು. ಇದೊಂದು ಅಸಾಧಾರಣ ಬೆಳವಣಿಗೆಯಾಗಿ ಕಂಡಿತು. ಕರ್ನಾಟಕದಲ್ಲಿ ಚೆನ್ನಬಸಪ್ಪ, ಶಿವಪ್ಪ ಕಂಬಳಿ ರಾಣಿಬೆನ್ನೂರು, ಮಲ್ಲಣ್ಣ ನಗರಲ್ಲ, ಹುನಗುಂದ ಸಿದ್ದು ನ್ಯಾಮನಗೌಡ ಮುಂತಾದವರು ಭಗೀರಥನಂತೆ ಕೆಲಸ ಮಾಡಿದ್ದಾರೆ.

## ಆ ಇಬ್ಬರು ಮುದುಕಿಯರು

ಈ ರೀತಿಯ ಸಾಹಸಗಾಥೆಗಳ ಹಿಂದೆ ರೋಚಕ ಕಥೆಗಳು ಇರ್ತವೆ. ರೂಪರೇಖಾ ನದಿಯ 90 ಕಿ.ಮೀ. ಉದ್ದದ ಪ್ರದೇಶ ಹಸಿರಾಗಲು ಇಬ್ಬರು ಮುದುಕಿಯರು ಬಹುವಾಗಿ ಶ್ರಮಿಸಿದರು.

ಸರಿಸ್ಕಾ ಬೆಟ್ಟದ ಮೇಲೆ ಹಳ್ಳಿ ದೂರಾ ತೋಲಾವಾ. ಈ ಹಳ್ಳಿಯಲ್ಲಿ ಉಳಿದಿದ್ದವರು ಇಬ್ಬರು ಮುದುಕಿಯರು ಮಾತ್ರ. ಇವರ ಹೆಸರು ಗ್ಯಾರ್ಸಿ ಮತ್ತು ಘೂಲಾ. ಬುಡಕಟ್ಟು ಜನಾಂಗದ ಈ ಮುದುಕಿಯರು 1982ರಲ್ಲಿ ರೂಪರೇಖಾ ನದಿಗೆ ನೀರು ಒದಗಿಸುವ ಸಣ್ಣ ತೊರೆಯೊಂದಕ್ಕೆ ಅಡ್ಡಲಾಗಿ ಕಟ್ಟೆ ಕಟ್ಟಲು ಆರಂಭಿಸಿದರು. ಮೊದಲ ವರ್ಷ ಮೂರು ತಿಂಗಳು ಮಾತ್ರ ನೀರು ನಿಂತಿತು. ಎರಡು ವರ್ಷ ಕಳೆದ ಮೇಲೆ ವರ್ಷಪೂರ್ತಿ ನೀರು ನಿಂತಿತು. ನೀರು ನೆಲದೊಳಗೆ ಜಿನುಗಿ ಕಾಡು ಬೆಳೆಯಲು ಪೂರಕ ವಾತಾವರಣ ನಿರ್ಮಿಸಿತ್ತು. ಈ ಸುಳಿವಿನಿಂದ ರೂಪರೇಖಾ ನದೀ ಪತ್ರದಲ್ಲಿ 350 ಕಟ್ಟೆಗಳು ಸಿದ್ಧವಾದವು. ಆಗ ನದಿಗೆ ಜೀವ ಬಂತು. 90 ಕಿ.ಮೀ. ಉದ್ದದ ಒಣಗಿದ ನದಿ ಹರಿಯಲಾರಂಭಿಸಿತು. ಬೋಳಾಗಿದ್ದ ಗುಡ್ಡಗಳಲ್ಲಿ ಹಸಿರು ಕಂಡಿತು.

ಕೆರೆಗಳು ಸುಸ್ಥಿತಿಯಲ್ಲಿದ್ದರೆ ಊರಿನ ಬಾವಿಗಳಲ್ಲಿ ಸದಾ ನೀರು ಇರುವಂತಾಗುತ್ತದೆಂದು ರಾಜಸ್ಥಾನದ ಹಳ್ಳಿಗರಿಗೆ ಮನದಟ್ಟಾಯಿತು. ಬಾವಿಗಳ ನೀರಿನ ಮಟ್ಟ ಸುಧಾರಿಸಿದಾಗ ಈ ನೀರು ಬಳಸಿ ವ್ಯವಸಾಯ ಮಾಡಲಾಯಿತು. ಪಟ್ಟಣಕ್ಕೆ ಕೂಲಿ ಮಾಡಲು ಹೋಗಬೇಕಾದ ಅನಿವಾರ್ಯತೆಯಿಂದ ಬಹುಜನರು ಪಾರಾದರು.

ರಾಜಾಸ್ಥಾನದಲ್ಲಿ ಈ ರೀತಿಯ ಬೆಳವಣಿಗೆ ಆಗಿದ್ದು ದೊಡ್ಡ ಪವಾಡದಂತೆ ಕಂಡುಬಂತು. ನೀರಿನ ಕುರಿತು ಜಾಗೃತಿ, ಸಂಘಟನೆ ಮತ್ತು ಕೆಲಸ ಪ್ರಾರಂಭಿಸಿ ಯಶಸ್ಸು ಕಾಣಲು ರಾಜೇಂದ್ರ ಸಿಂಗರ ಶ್ರಮ ಅಪಾರವಾದದ್ದು. 377 ಕೋರ್ಟ್ ಕೇಸುಗಳನ್ನು ರಾಜೇಂದ್ರ ಸಿಂಗರು ಎದುರಿಸುತ್ತಿದ್ದಾರೆಂದರೆ ಸಾರ್ವಜನಿಕ ಭೂಮಿಯ ಕಬಳಿಕೆ ವಿರುದ್ಧ ಕಾರ್ಯಾಚರಣೆ ನಡೆಸಿದ್ದರ ಫಲವಿದು ಎಂದು ಊಹಿಸಬಹುದಾಗಿದೆ.

## ಗಂಗಾನದೀ ಉಳುವಿನ ಹೋರಾಟ

ಕೇಂದ್ರ ಸರ್ಕಾರ ಲೋಹಾರಿ ನಾಗ್‌ಪಾಲ ಯೋಜನೆಯ ಸಾಧಕ ಬಾಧಕಗಳನ್ನು ವಿಮರ್ಶಿಸಲು ಸಮಿತಿಯೊಂದನ್ನು ರಚಿಸಿ ಮೂರು ತಿಂಗಳ ಕಾಲಾವಕಾಶ ನೀಡಿದ ನಂತರವೇ ಜಿ ಡಿ ಅಗರ್‌ವಾಲರು (ಈಗ ಸಾನಂದ ಸ್ವಾಮೀಜಿ) ತಾವು ಹಿಡಿದ ಉಪವಾಸ ಸತ್ಯಾಗ್ರಹವನ್ನು ನಿಲ್ಲಿಸಿದ್ದು. ಇವರ ಏಳುದಿನಗಳ ಉಪವಾಸಕ್ಕೆ ಸ್ಪಂದಿಸಿದ ಉತ್ತರಾಖಂಡ್ ರಾಜ್ಯ ಸರ್ಕಾರ ಭೈರೋಘಾಟಿ ಮತ್ತು ಪಾಲಾ ಮನೇರಿ ಯೋಜನೆಗಳನ್ನು ಕೈಬಿಟ್ಟಿತು. ಆದರೆ ಕೇಂದ್ರ ಸರ್ಕಾರ ಮೂರು ತಿಂಗಳ ಕಾಲಾವಕಾಶವನ್ನೂ ಆರು ತಿಂಗಳವರೆಗೆ ವಿಸ್ತರಿಸಿದಾಗ ಜಿ.ಡಿ. ಅಗರ್‌ವಾಲರು ಪುನಃ ಆಮರಣಾಂತ ಉಪವಾಸ ಕೈಗೊಂಡರು. 37ದಿನಗಳ ನಂತರ ಪ್ರಧಾನಿ ಕಛೇರಿ ಮಧ್ಯಸ್ಥಿಕೆ ನಡೆಸಿತು. ಲೋಹಾಖನಾಗ್ ಪಾಲ ಯೋಜನೆ ಕೈ ಬಿಡುವ ಆದೇಶ ಹೊರಡಿಸಿತು. 38ನೇ ದಿನ ಅಗರ್‌ವಾಲರು ಉಪವಾಸ ನಿಲ್ಲಿಸಿದರು. 37 ದಿನಗಳ ಕಾಲ ಉಪವಾಸ ಇರಬಲ್ಲ ಶಕ್ತಿ ಹೊಂದಿದ್ದಾರೆಂದರೆ ಅಗರವಾಲರು ಸಾಮಾನ್ಯದವರಲ್ಲ ಎಂದು ತಿಳಿಯುತ್ತದೆ. ಇತ್ತೀಚೆಗಷ್ಟೇ ಅವರು ಸನ್ಯಾಸ ದೀಕ್ಷೆ ಪಡೆದು ಸ್ವಾಮಿ ಜ್ಞಾನಸ್ವರೂಪ ಸಾನಂದರಾಗಿದ್ದಾರೆ. ಆದರೆ ಸನ್ಯಾಸ ದೀಕ್ಷೆ ಪಡೆಯುವ ಮೊದಲೂ ಅವರ ಜೀವನ ಕ್ರಮ ಸ್ವಾಮಿಯೊಬ್ಬರ ಜೀವನದಂತಿತ್ತು ಎಂದು ಬಲ್ಲವರು ಹೇಳುತ್ತಾರೆ.

ಗಂಗೋತ್ರಿ ಮತ್ತು ಉತ್ತರ ಕಾಶಿ ನಡುವಿನಲ್ಲಿ ಮೂರು ಭಾರೀ ಯೋಜನೆಗಳನ್ನು

ನಿಲ್ಲಿಸಲು ಪುನಃ ಉಪವಾಸ ಸತ್ಯಾಗ್ರಹ ಮಾಡಬೇಕಾಯಿತು. ಸರ್ಕಾರ ಈ ಸ್ಥಳಗಳನ್ನು ಸೂಕ್ಷ್ಮ ಪರಿಸರದ ತಾಣ ಎಂದು ಘೋಷಿಸಿದೆ. ಗಂಗಾ ನದಿಯನ್ನು ರಾಷ್ಟ್ರೀಯ ನದಿ ಎಂದು ಘೋಷಿಸಿದೆ.

ಶಿವನ ಜಡೆಯಿಂದ, ಹರನ ಮುಡಿಯಿಂದ ಭಗೀರಥ ಇಳಿಸಿದ ಗಂಗಾ ನದಿ ಎಂದು ಪುರಾಣ ಪುಣ್ಯಕಥೆಗಳ ಹಿನ್ನೆಲೆಯಿಂದಲೇ ನಾವು ನೋಡುವ ಗಂಗಾನದಿ ಇಂದು ಏನಾಗಿದೆ?

30ವರ್ಷಗಳ ಹಿಂದೆ ಭಾಗೀರಥಿ ನದಿಗೆ ಅಣೆಕಟ್ಟು ನಿರ್ಮಿಸಲಾಯಿತು. ಇದನ್ನು ಮನೇರಿ ಭಾಲಿ ಯೋಜನೆ ಎಂದು ಕರೆಯಲಾಗಿತ್ತು. ಮೂವತ್ತು ವರ್ಷಗಳ ನಂತರ ಮನೇರಿ ಭಾಲಿಯ ಕೆಲ ಪ್ರದೇಶದಲ್ಲಿ ಭಾಗೀರಥಿ ನದಿಯೇ ಇರಲಿಲ್ಲ. ಅಣೆಕಟ್ಟಿನಿಂದ ಕಾಲುವೆಗಳ ಮೂಲಕ ನದಿಯ ನೀರನ್ನು ಬೇರೆಡೆ ಹರಿಸಲಾಗುತ್ತಿತ್ತು. ಅಣೆಕಟ್ಟಿನ ಕೆಳಗಿನ ಜನರು, ಜಾನುವಾರು, ಪಶುಪಕ್ಷಿ ಮುಂತಾಗಿ ವೈವಿಧ್ಯಮಯ ಜೀವರಾಶಿಗಳು, ಸಸ್ಯ ಸಂಕುಲಗಳು ನದೀಯೇ ಇಲ್ಲದೆ ಒಣಗಿ ಸಾಯಬೇಕು. ಪ್ರಕೃತಿ ದತ್ತವಾದ ನೀರಿನ ಹಕ್ಕು ಬೇರೆ ಯಾವುದೋ ಸ್ಥಳದವರ ಲಾಭಕ್ಕಾಯಿತು. ನಮ್ಮ ಸರ್ಕಾರದ ನೀತಿ ಹೀಗಾದಾಗ ಹಳ್ಳಿ ಜನರು ಹೋರಾಟದ ಶಕ್ತಿಯನ್ನು ಪಡೆಯದೇ ಹತಾಶರಾಗಿ, ನಿರ್ಗತಿಕರಾಗಿ ನಗರಗಳಲ್ಲಿ ಶ್ರೀಮಂತರ ಸೇವಕರಾಗಿ ಬದುಕಬೇಕಾದ ಸ್ಥಿತಿ ಉಂಟಾಗುತ್ತಿದೆ. ಅಗರವಾಲರಂಥವರ ಹೋರಾಟಗಳು ಹಕ್ಕುಳ್ಳ ಜನರಿಗೆ ದಿಕ್ಕು ತೋರುವುದಾಗಿದೆ.

'ಎಲ್ಲೆಡೆಯೂ ಗಂಗೆಯ ಹರಿವು ಕ್ಷೀಣಿಸುತ್ತಿದೆ. ಎಲ್ಲ ಕಾರ್ಖಾನೆಗಳ ತ್ಯಾಜ್ಯಗಳಿಂದ ಹಿಡಿದು ನಗರಗಳ ಮಲಮೂತ್ರಗಳೂ ಗಂಗಾನದಿ ಸೇರುತ್ತಿವೆ. ಗಂಗಾನದಿಯ ಅವಿಚ್ಛಿನ್ನ ಪ್ರವಾಹಕ್ಕೆ ಅಣೆಕಟ್ಟು ಕಟ್ಟುತ್ತಿದ್ದೇವೆ. ಭಾಗೀರಥಿಯ ಉಗಮದಿಂದ ಸುಮಾರು 135 ಕಿ.ಮೀ. ವರೆಗಿನ ಉತ್ತರ ಕಾಶಿಯವರೆಗೆ ಮಾತ್ರ ಉಳಿದಿರುವ ಭಾಗೀರಥಿಯ ಪ್ರವಾಹಕ್ಕೂ ಈಗಿನ ಸರ್ಕಾರಗಳು ಅಣೆಕಟ್ಟು ಯೋಜನೆ ರೂಪಿಸುತ್ತಿವೆ. ಗಂಗೋತ್ರಿಯ ಹತ್ತಿರವೇ ಅಣೆಕಟ್ಟು ನಿರ್ಮಿಸ ಹೊರಟಿದ್ದಾರೆ. ಉಳಿದಿರುವ ಒಂದಷ್ಟು ದೂರದ ನದಿಯನ್ನು ನಮ್ಮ ಸರ್ಕಾರಗಳು ಉಳಿಸುವ ದಿಕ್ಕಿನತ್ತ ಯೋಚಿಸುತ್ತಿಲ್ಲ. ಇದನ್ನೆಲ್ಲಾ ನೋಡುತ್ತಾ ಸುಮ್ಮನಿರುವುದಾದರೂ ಹೇಗೆ?' – ಹೀಗೆ ಪ್ರಶ್ನಿಸುವ ಜಿ.ಡಿ. ಅಗರ್‌ವಾಲರು ಗಂಗಾನದಿಯ ಉಳಿವಿಗಾಗಿ ಹೋರಾಟ ಮಾಡುತ್ತಲೇ ಇದ್ದಾರೆ.

(ಹಿಮಾಲಯದ ತಪ್ಪಲಿನಲ್ಲಿ ಪರ್ಯಾಯ ಹಾಗೂ ಪ್ರಕೃತಿ ಸಹಜ ವೈಜ್ಞಾನಿಕ ಅನ್ವೇಷಣೆಯಲ್ಲಿ ತೊಡಗಿದ ಡಾ॥ ರವಿಚೋಪ್ರಾ, ಡೌನ್ ಟು ಅರ್ಥ್ ಖ್ಯಾತಿಯ ಸುನಿತಾ ನಾರಾಯಣ್, ನೊಂದವರ ಸೇವೆಯಲ್ಲಿ ತೊಡಗಿದ ಧನುರಾಯ್, ಡಾ. ಅನಿಲ್ ಅಗರವಾಲ್, ನೀರಿನ ಗಾಂಧಿ ಎಂದೇ ಪ್ರಖ್ಯಾತರಾದ, ಮ್ಯಾಗ್ಸೆಸೇ ಪುರಸ್ಕೃತ ರಾಜೇಂದ್ರ ಸಿಂಗ್ ಇವರೆಲ್ಲರಿಗೆ ಗುರುಗಳು ಜಿ.ಡಿ. ಅಗರವಾಲ್ ಜ್ಞಾನ ಸ್ವರೂಪ ಸಾನಂದರು. 1932ರಲ್ಲಿ ಉತ್ತರ ಪ್ರದೇಶದ 'ಮುಜಾಫರ್ ನಗರ ಜಿಲ್ಲೆಯ ಕಂಧ್ಲಾ ಊರಲ್ಲಿ ಕೃಷಿ ಕುಟುಂಬದಲ್ಲಿ ಜನಿಸಿದ ಅಗರ್‌ವಾಲರು ರೂರ್ಕಿ ವಿಶ್ವವಿದ್ಯಾಲಯದಲ್ಲಿ ಸಿವಿಲ್ ಇಂಜಿನಿಯರ್ ಪದವಿ ಪಡೆದರು. ವಿನ್ಯಾಸ ಅಭಿಯಂತರಾಗಿ ಉತ್ತರ ಪ್ರದೇಶದ ನೀರಾವರಿ ಇಲಾಖೆಯಲ್ಲಿ ಕೆಲಸ ಪ್ರಾರಂಭಿಸಿದ ಇವರು ನಂತರ ಅಮೆರಿಕಾದ ಪ್ರತಿಷ್ಠಿತ ವಿದ್ಯಾಸಂಸ್ಥೆ

ಯೂನಿವರ್ಸಿಟಿ ಆಫ್ ಕ್ಯಾಲಿಫೋರ್ನಿಯಾದಲ್ಲಿ ಪಿ.ಎಚ್.ಡಿ. ಮಾಡಿದರು. ಆಗಿನಿಂದಲೇ ಅವರು ವಿಶ್ವವೇ ಗುರುತಿಸಿರುವ ಎನ್ವಿರಾನ್ಮೆಂಟಲ್ ಇಂಜಿನೀರ್. ನಂತರ ಐ ಐ ಟಿ. ಕಾನ್ಪುರದಲ್ಲಿ ಪ್ರಾಧ್ಯಾಪಕರಾಗಿ, ವಿಭಾಗ ಮುಖ್ಯಸ್ಥರಾಗಿ, ಡೀನ್ ಆಗಿಯೂ ಸೇವೆ ಸಲ್ಲಿಸಿ ವೈಜ್ಞಾನಿಕ ಲೇಖನ ಬರೆದರು. ಭಾರತ ಸರ್ಕಾರದ ಕೇಂದ್ರೀಯ ಮಾಲಿನ್ಯ ನಿಯಂತ್ರಣ ಮಂಡಳಿ (Central Pollution Control Board) ಸದಸ್ಯ ಕಾರ್ಯದರ್ಶಿಯಾದರು. ಮಾಲಿನ್ಯ ನಿಯಂತ್ರಣ ಹಾಗೂ ಪರಿಸರ ರಕ್ಷಣೆಯ ಕುರಿತಾದ ಕಾಯ್ದೆಗಳ ರಚನೆಯಲ್ಲಿ ಪ್ರಮುಖ ಪಾತ್ರ ನಿರ್ವಹಿಸಿದರು.)

ಇದನ್ನೊಂದು ಮಾದರಿಯಾಗಿ ನಾವು ನೋಡಬಹುದಾಗಿದೆ. ಇದೇ ಸ್ಥಿತಿ ಭಾರತದ ಬಹುತೇಕ ರಾಜ್ಯದಲ್ಲಿದೆ. ವ್ಯತ್ಯಾಸವೆಂದರೆ ಅಲ್ಲಿ ರಾಜೇಂದ್ರ ಸಿಂಗ್‌ರು ಬತ್ತಿದ ನದಿಗಳಿಗೆ ಜೀವದುಂಬಿದರು. ಉಳಿದೆಡೆ ನದಿಗಳು ಬತ್ತಿವೆ. ಬತ್ತುವ ಸ್ಥಿತಿ ತಲುಪಿವೆ. ಮರುಜೀವ ನೀಡುವ ರಾಜೇಂದ್ರ ಸಿಂಗ್‌ರಂಥವರಿಗೆ ಅಪಾರ ಕೆಲಸಗಳ ಅವಕಾಶಕ್ಕೆ ಕಾದು ಕುಳಿತಿವೆ. ದೇಶದ ಎಲ್ಲಾ ನದಿಗಳಿಗೂ, ಅಭಯಾರಣ್ಯಗಳಿಗೂ ಅಲ್ಲಲ್ಲೇ ರಾಜೇಂದ್ರಸಿಂಗರು ಉದಿಸಬೇಕಾಗಿದೆ.

ರಾಜೇಂದ್ರ ಸಿಂಗ್‌ರ ಯಶಸ್ಸಿನ ಕಥೆ ಗಮನಿಸಿದಾಗ ನಮ್ಮ ಕರ್ನಾಟಕದ ಶರಾವತಿ ನದೀ ಪಾತ್ರದಲ್ಲಿ ನಾವು ಸಾಗುತ್ತಿರುವ ವಿರುದ್ಧ ದಿಕ್ಕಿನ ಅರಿವಾಯಿತು.

ತೀರ್ಥಹಳ್ಳಿಯ ಅಂಬುತೀರ್ಥದಲ್ಲಿ ಉದಿಸಿ ಅರಬ್ಬೀ ಸಮುದ್ರ ಸೇರುವ ಅಂದಾಜು 131 ಕಿ.ಮೀ. ಹರಿಯುವ ಶರಾವತೀ ನದಿಯು ಅಭಯಾರಣ್ಯದ ನಡುವೆಯೇ ಹರಿಯುತ್ತಿದೆ.

ಜೋಗದ ಸಿರಿ ಬೆಳಕಿನಲ್ಲಿ
ತುಂಗೆಯ ತೆನೆ ಬಳುಕಿನಲಿ
ಸಹ್ಯಾದ್ರಿಯ ಲೋಹದದಿರು ಉತ್ತುಂಗದ ನಿಲುಕಿನಲಿ.......

ಇಂಥ ಹಾಡು ನಿಸ್ಸಾರ್ ಅಹಮದರ ಮನದಲ್ಲಿ ಚಿಮ್ಮಿದೆ! ಇಂಥಲ್ಲಿ ಶರಾವತಿ ನದಿಗೆ ಲಿಂಗನಮಕ್ಕಿಯಲ್ಲಿ ಬೃಹತ್ ಅಣೆಕಟ್ಟು ನಿರ್ಮಾಣವಾಯಿತು. (1964ರಲ್ಲಿ) ನಾಡು ಬೆಳಕಾಯಿತು! ಕೆ ಇ ಬಿ ಇಂಜಿನಿಯರ್, ಶರಾವತಿ ಅಭಯಾರಣ್ಯದಲ್ಲೇ ಕಾರ್ಗಲ್ ಸಮೀಪದ ಹಳ್ಳಿ ಹುಕ್ಲುನಲ್ಲಿ ಹುಟ್ಟಿ ಬೆಳೆದ ಗಜಾನನ ಶರ್ಮ 'ಬೆಳಕಾಯಿತು ಕರ್ನಾಟಕ" ಎಂಬ ಪುಸ್ತಕ ರಚಿಸಿದ್ದಾರೆ. ವಿದ್ಯುತ್ ಶಕ್ತಿಯ ಇತಿಹಾಸ, ಅಣೆಕಟ್ಟು ನಿರ್ಮಾಣಕ್ಕೆ ತ್ಯಾಗ, ಬಲಿದಾನ ಹೀಗೆ ಬೆಳಕಿನ ವಿರುದ್ಧದ ಕರಾಳ ಮುಖಗಳನ್ನು ಈ ಪುಸ್ತಕದಲ್ಲಿ ಕಾಣಿಸಿದ್ದಾರೆ. ಬೃಹತ್ ಅಣೆಕಟ್ಟು ನಿರ್ಮಾಣಕಿಂತ ಸಣ್ಣ ಸಣ್ಣ ಯೋಜನೆಗಳನ್ನು ನಿರ್ಮಿಸುವುದರ ಆಲೋಚನೆಯಲ್ಲಿ ಇರುವ ತೊಡಕುಗಳತ್ತಲೂ ಅವರು ಅನುಭವದಿಂದ ಉಪಯುಕ್ತ ಮಾಹಿತಿ ನೀಡುತ್ತಾರೆ. ಶರಾವತಿ ಅಣೆಕಟ್ಟನಿಂದ ಜೋಗ, ಲಿಂಗನಮಕ್ಕಿ ಪಟ್ಟಣಗಳು ನಿರ್ಮಾಣವಾದವು. ಸಣ್ಣ ಯೋಜನೆಗಳಿಂದ ಬಹಳ ಸ್ಥಳಗಳಲ್ಲಿ ಅದೆಷ್ಟೋ ಕಾಡುಗಳ ನಡುವೆ ಹಳ್ಳಿಗಳ ನಿರ್ಮಾಣ, ಇದರ ಸಂಪರ್ಕಕ್ಕಾಗಿ ಕಾಡು ಕಡಿದು ರಸ್ತೆ ನಿರ್ಮಾಣ–ಹೀಗೆ ಲೆಕ್ಕ ಹಾಕಿದಾಗ ಬೃಹತ್ ಯೋಜನೆಗಳಿಗಿಂತ ಸಣ್ಣ ಯೋಜನೆಗಳಿಗೆ ಹೆಚ್ಚು ಖರ್ಚು ಕಂಡು ಬಂದಿತಂತೆ. ಆದ್ದರಿಂದ ನಮಗೆಲ್ಲ ಎಷ್ಟು ವಿದ್ಯುತ್‌ಶಕ್ತಿ ಬೇಕು

ಎಂದು ನಿರ್ಧರಿಸುವುದೇ ಮುಖ್ಯವಾದುದು. ಎಲ್ಲೆಲ್ಲಿ ಯೋಜನೆ ರೂಪಿಸಲು ಬರುತ್ತೆ ಎನ್ನುವುದಕ್ಕಿಂತ ಕಡಿಮೆ ಯೋಜನೆ ರೂಪಿಸಲು ಚಿಂತಿಸುವುದು ಅಗತ್ಯ. ತೆಹರಿ ಅಣೆಕಟ್ಟಿನ ಕೆಳಗೆ ಗಂಗಾನದಿಯೇ ಮಾಯವಾಗಿದ್ದು ಬೃಹತ್ ಯೋಜನೆಯಿಂದ. ಪ್ರಗತಿಗೆ ವಿದ್ಯುತ್ ಶಕ್ತಿ ಎಷ್ಟು ಅಗತ್ಯವೋ ಅಷ್ಟೇ ನದಿಯೊಂದು ಹರಿಯುವುದೂ ಅಗತ್ಯವಾದದ್ದು ಎಂಬ ಎಚ್ಚರದಲ್ಲಿ ನಮ್ಮ ಸರ್ಕಾರಗಳು ಕಾರ್ಯರೂಪಿಸಬೇಕಾಗಿದೆ ಎಂಬುದು ಗಜಾನನಶರ್ಮರ ನಿಲುವು.

ಶರಾವತಿ ಕಣಿವೆಗಳಲ್ಲಿ, ಗುಡ್ಡಗಾಡುಗಳಲ್ಲಿ ಜನರು ಊರು ಮನೆ ತ್ಯಜಿಸಿ ಮತ್ತೆಲ್ಲೋ ನೆಲೆ ಕಾಣಲು ಇಂದಿಗೂ ಪರದಾಡುತ್ತಲೆ ಇರುವರು. ಹೊಸನಗರ, ಸಾಗರ ತಾಲ್ಲೂಕುಗಳಲ್ಲಿ ಕೆಲಹಳ್ಳಿಗಳಲ್ಲಿ ಇಂದಿಗೂ ದೋಣಿಯಲ್ಲಿ ಹೋಗಬೇಕಾದ ಸ್ಥಿತಿಯಿದೆ. ತುಮರಿ, ಬ್ಯಾಕೋಡು ಜನರು ಇಂದಿಗೂ ಲಾಂಚ್‌ಗಳಲ್ಲಿ ಕಷ್ಟಪಟ್ಟು ಓಡಾಡಬೇಕಾಗಿದೆ. ಸರಿಯಾದ ಸಂಪರ್ಕ ವ್ಯವಸ್ಥೆಗಳಿಲ್ಲದೇ ಮಕ್ಕಳ ವಿದ್ಯಾಭ್ಯಾಸ, ಆರೋಗ್ಯ, ಮುಂತಾದ ವಿಷಯಗಳಿಗೆ ಅವರ ಪಡಿಪಾಟಲು ಹೇಳತೀರದು.

ಈ ಪ್ರದೇಶದಲ್ಲಿ ಪಿ.ಡಬ್ಲ್ಯು.ಡಿ. ಇಲಾಖೆಯಲ್ಲಿ ಕೆಲಸ ಮಾಡುತ್ತಾ ರೈತರನ್ನೂ, ಇಂಜಿನೀಯರಗಳನ್ನೂ, ಗುತ್ತಿಗೆದಾರರನ್ನೂ ಸೂಕ್ಷ್ಮವಾಗಿ ಗಮನಿಸುತ್ತ, ಕತೆ, ಕಾದಂಬರಿ ಬರೆದವರು ನಾ. ಡಿಸೋಜ. ಗಟ್ಟಿ ನೆಲವನ್ನು ನೀರು ಹೇಗೆ ನುಂಗುತ್ತದೆಂದು ಅವರು ಈ ನೆಲ ಈ ಜಲ, ದ್ವೀಪ, ಮುಳುಗಡೆ, ಒಡ್ಡು ಮುಂತಾಗಿ ಕಾದಂಬರಿ ಬರೆದರು. ನೆಲವನ್ನು ನುಂಗುವುದೆಂದರೆ ಜನರ ಬದುಕು ಪಲ್ಲಟಗೊಂಡು ಬದುಕಿದರೂ ಸತ್ತಂತೆ! ಮೂಲ ಊರುಗಳನ್ನೂ, ಆ ಪರಿಸರದ ನೆಲದ ವಾಸನೆಯ ಬದುಕಿನಿಂದ ದೂರಾದ ಮಾನಸಿಕ ಹಿಂಸೆ, ಮತ್ತೆಲ್ಲೋ ಸುವ್ಯವಸ್ಥಿತ ಮನೆ, ಮಾರು ಕಾಣದೆ ಬದುಕಬೇಕಾದ ದೈಹಿಕ ಹಿಂಸೆ – ಅಧಿಕಾರಿಗಳು, ರಾಜಕಾರಣಿಗಳು, ಸ್ಥಳಾಂತರ ವ್ಯವಸ್ಥೆಯಲ್ಲಿ ಜನರಿಂದ ಹಣ ನುಂಗುವ ನೋಟಗಳು, ಅಣೆಕಟ್ಟು ನಿರ್ಮಾಣದಲ್ಲಿ ಗುತ್ತಿಗೆದಾರರು,ಅಧಿಕಾರಿಗಳು ಸರ್ಕಾರದ ಹಣ ನುಂಗುವುದು ಮತ್ತು ನೌಕರರು ಉತ್ತಮ ಸಂಬಳದ ಜೊತೆಗೆ ಗಿಂಬಳ ಪಡೆಯುವುದು – ಹೀಗೆ ನಾನಾ ಮುಖಗಳನ್ನು ಲೇಖಕರು ಕಾಣಿಸುತ್ತಾರೆ.ಇದೊಂದು ಉದಾಹರಣೆ ಅಷ್ಟೆ. ಕೆರೆಗೆ ಹಾರ, ಓಲ್ಗಾ ಗಂಗಾ–ಹೀಗೆ ಅಯಾಯ ನದೀ ಪ್ರದೇಶಗಳಲ್ಲಿ ವಾಸಿಸುವುದರಿಂದ ಕಾವ್ಯ, ಕಥೆ, ನಾಟಕ, ಲೇಖನ ಹೀಗೆ ಬರಹಗಳು ಉಂಟಾಗುತ್ತವೆ. ಅಂದರೆ ನದಿಗೆ, ನೆಲಕ್ಕೆ ಅಂಟಿದ ಬದುಕಿನಲ್ಲಿ ಭಾವನಾತ್ಮಕವಾಗಿ ಕಥೆ, ಕಾವ್ಯ ಹುಟ್ಟುವಷ್ಟು ಅನುಭವ ಸಮೃದ್ಧತೆ ಇರುತ್ತದೆ.

ಹಿನ್ನೀರು ಪ್ರದೇಶದ ಕಾಡಿನಲ್ಲಿ ಬೀಟೆ, ಗಂಧ, ತೇಗ, ಹೊನ್ನೆ ಮುಂತಾದ ಬೆಲೆ ಬಾಳುವ ಮರಗಳು ಶ್ರೀಮಂತರು ಮತ್ತು ಇಲಾಖೆಯ ಜನರಿಂದಲೇ ನಾಶವಾಗಿರುವ ನಿದರ್ಶನಗಳಿವೆ. ನಿತ್ಯ ಹರಿದ್ವರ್ಣ, ಸಸ್ಯಶಾಮಲೆ ಮುಂತಾಗಿ ಕವಿಗಳಿಂದ ಹೊಗಳಲ್ಪಡುವ, ನಿಜದಲ್ಲೂ ಸಂಪದ್ಭರಿತ ಮಣ್ಣಾದ ಇಂಥ ಅನೇಕ ನದಿ ಪ್ರದೇಶಗಳು ಮನುಷ್ಯನ ಅತ್ಯಾಚಾರದಿಂದ ನರಳುತ್ತಿದೆ.

## ವರದಾ ನದೀ ಮೂಲಕ....

ಸಾಗರ ತಾಲ್ಲೂಕಲ್ಲಿ ವರದಾಮೂಲವಿದೆ. ವರದಾನದಿಯ ಉಗಮ ಸ್ಥಾನವದು. ವರದಾತಾಯಿಯ ದೇವಸ್ಥಾನದಲ್ಲಿ ಮಾಹಿತಿ ಐತಿಹ್ಯವಿದೆ. ವರದಾ ತಾಯಿಯ ಪದತಲದಲ್ಲಿ ನೀರುದಿಸುತ್ತದೆ. ದೇವಾಲಯದ ಮುಂದಿರುವ ಕೊಳದಲ್ಲಿ ಶುದ್ಧನೀರು ಹರಿದುಬರುತ್ತದೆ. ಪಕ್ಕದಲ್ಲಿ ದೊಡ್ಡ ಕೊಳವಿದೆ. ಅಲ್ಲಿಂದ ಅಡಕೆ ತೋಟಗಳ ನಡುವೆ ಕಾಲುವೆಯಾಗಿ ಹರಿದು ಮುಂದೆ ದೊಡ್ಡ ಹಳ್ಳವಾಗಿ, ನದಿಯಾಗಿ ಬನವಾಸಿ ದಾಟಿ, ಬಯಲು ಸೀಮೆಯಲ್ಲಿ ಗೋಂದಿ ನದಿಯಾಗಿ ಹಕ್ಕಿ ಪಕ್ಷಿ, ಜನ ಜಾನುವಾರು, ಕೃಷಿ, ಮೀನು ಮೊಸಳೆ, ಕಪ್ಪೆ, ಮರ, ಗಿಡ, ಬಳ್ಳಿ ಹೀಗೆ ವೈವಿಧ್ಯಮಯ ಜೀವಿಗಳಿಗೆ ಜೀವನಾಡಿಯಾಗಿ ಹರಿಯುತ್ತದೆ. ನದೀ ತೀರಗಳಲ್ಲಿ ಜನರು ತಮ್ಮ ಬದುಕು ರೂಪಿಸಿದ್ದಾರೆ.

ಗುಡ್ಡ ಬೆಟ್ಟಗಳು, ಕಣಿವೆಗಳಲ್ಲಿ ಅಡಿಕೆ ತೋಟ, ಅಲ್ಲೇ ಸಾಂಬಾರ ಪದಾರ್ಥಗಳು, ಬಾಳೆ,ನಿಂಬೆ ಹಣ್ಣುಗಳೂ, ಕಾಫಿ, ಕೋಕೋ ಮುಂತಾದ ಬೆಳೆಗಳು, ಗದ್ದೆಗಳಲ್ಲಿ ಶುಂಠಿ, ಕಬ್ಬು, ಭತ್ತ, ಉದ್ದು, ಎಳ್ಳು, ಹೀಗೆ ವೈವಿಧ್ಯ ಬೆಳೆಗಳು, ಕಾಡುಗಳಲ್ಲಿ ಉಪ್ಪಾಗೆ, ಹುಳಿಮುರಗಲು, ದಾಲ್ಚಿನಿ, ವಾಟೆ, ಮುಂತಾಗಿ ವನಸ್ಪತಿಗಳು ವಿವಿಧ ರುಚಿಯ ವಾಸನೆಯ ಮಾವು, ಹಲಸು, ಮುಂತಾದ ಹಣ್ಣುಗಳು, ಈಗೀಗ ದೇಶದ ಅತ್ಯಗತ್ಯ ವಸ್ತು ರಬ್ಬರು, ಇವೆಲ್ಲವನ್ನೂ ಬೆಳೆಯುವ ರೈತರೊಂದಿಗೆ ಒಡನಾಟವಿರುವ ನನಗೆ ಈ ಬೆಳೆಗಳ ಹಿಂದೆ ಇರುವ ಕಷ್ಟನಷ್ಟಗಳ, ಲಾಭ ಲುಕ್ಸಾನುಗಳ ಅರಿವಿದೆ. ಈ ಪ್ರದೇಶದಲ್ಲಿ ಹರಿವ ಸಣ್ಣಮಟ್ಟ ಹೊಳೆ ಹಳ್ಳ ನದಿಗಳ ಪಾತ್ರ ನಮಗೆ ಅರಿವಾಗಬೇಕು. ಇವೆಲ್ಲಾ ಎಲ್ಲೆಲ್ಲೋ ಸೇರಿ ಸೇರಿ ದೊಡ್ಡ ನದಿಗಳಾಗಿ ಸಂಸ್ಕೃತಿಯನ್ನೇ ಬೆಳೆಸುತ್ತ ಸಮುದ್ರ ಸೇರುತ್ತವೆ. ಸಮುದ್ರದ ಜೊತೆ ನಂಟು ಹೊಂದಿ ಬದುಕಿ ರೂಪಿಸುವುದೂ ಮತ್ತೊಂದು ತರದ ಸ್ವಾರಸ್ಯಕರ ಕಥೆಯಾಗಿದೆ.

ನದಿಗಳಿಗೆ ಬೃಹತ್ ಅಣೆಕಟ್ಟು ನಿರ್ಮಾಣವನ್ನು ನಾವು ವಿರೋಧಿಸಬೇಕು. ಮುಳುಗಡೆ ಆಗದಂತೆ ಹರಿಯುವ ನೀರಿಗೆ ಚೆಕ್‌ಡ್ಯಾಮ್ ನಿರ್ಮಿಸಿ ಕೃಷಿಗೆ ಬಳಸುವ ಕೌಶಲವನ್ನು ರೂಢಿಸಿದರೆ ಸಾಕು. ಸಾಧ್ಯವಾದಲ್ಲಿ ವಿದ್ಯುತ್ ಉತ್ಪಾದಿಸಿದರೆ ಒಳಿತೆ ಅಲ್ಲವೇ? ಇಂಥ ಪ್ರಶ್ನೆಯ ಎದುರು ಪ್ರಗತಿಯ ವಾದವಿದೆ. ಪ್ರಗತಿ ಮಾಡುವಾಗ ಒಂದಷ್ಟು ನಾಶವಾಗುತ್ತದೆ; ಬಹಳಷ್ಟು ಉಪಯೋಗವಾಗುತ್ತದೆ. ಒಂದಷ್ಟು ನಾಶವನ್ನು ಸಹಿಸಬೇಕು ಎನ್ನುತ್ತಾರೆ. 'ಒಂದಷ್ಟು ನಾಶ' ಅಂದರೇನು? ಇದು ಎಷ್ಟು ಎಕರೆ ಎಂಬ ಪ್ರಶ್ನೆಯಲ್ಲ. ಸಂಪದ್ಭರಿತ ಕಾಡು ನಾಶ ಎಷ್ಟೇ ಆದರೂ ಸುತ್ತಮುತ್ತಲ ನೂರಾರು ಎಕರೆ ಸ್ಥಳದಲ್ಲಿ ಹಕ್ಕಿ ಪಕ್ಷಿ, ಕ್ರಿಮಿ ಕೀಟ, ಮಣ್ಣಿನ ಸೂಕ್ಷ್ಮತೆ ಹಾಳಾಯಿತೆಂದರೆ ಅದು ಒಟ್ಟಾರೆ ವಿನಾಶದ ಮುನ್ನುಡಿ.

ಈಗ ಶರಾವತಿ, ತುಂಗಾ, ಕಾವೇರಿ, ಕುಮದ್ವತಿ, ಗಂಗಾ, ಯಮುನಾ ಮುಂತಾದ ಭಾರತದ ನದೀ ಪಾತ್ರಗಳು ವಿನಾಶದ ಮುನ್ನುಡಿಯಲ್ಲಿವೆ. ರಾಜಾಸ್ಥಾನದಲ್ಲಿ ಅರಾವತಿ, ರೂಪರೇಖಾ, ಜಹಾಜ್ವೈಲಿ, ಬಾಗಟ್ಕಲ್ಲಾ ನದಿಗಳು ನಾಶವಾದವು. ನಾಶವಾದ ನಂತರವೇ ನಿರ್ಮಾಣ ಮಾಡಬೇಕೇ? ಬರಗಾಲ ಬರುವುದಕ್ಕೆ ಮೊದಲೇ ಬರದ ವಿರುದ್ಧ ಯುದ್ಧ ಹೂಡಬೇಕು. ಅದಕ್ಕಾಗಿ ಹೊಲದ ಮಣ್ಣು ಹೊಲದಲ್ಲಿ ಉಳಿಯುವಂತೆ, ಕೊಚ್ಚಿ ಹೋಗದಂತೆ ನೋಡಿಕೊಳ್ಳಬೇಕು. ಹೊಲದಲ್ಲಿ ಬೀಳುವ ಪ್ರತಿ ಹನಿ ನೀರು ಅಲ್ಲಿಯೇ ಇಂಗುವಂತೆ

ನೋಡಿಕೊಳ್ಳಬೇಕು. ಒಂದು ಹೆಕ್ಟೇರ್ ಪ್ರದೇಶದಲ್ಲಿ ಬೀಳುವ 100 ಮಿಲಿಮೀಟರ್ ಮಳೆ ಹತ್ತು ಲಕ್ಷ ಲೀಟರಿನಷ್ಟು ನೀರನ್ನು ಒದಗಿಸುವುದರಿಂದ ಭಾರತದ ಯಾವ ಭಾಗವೂ ನೀರಿನ ಕೊರತೆ ಅನುಭವಿಸಬಾರದು. ಬರಕ್ಕಂತೂ ಅವಕಾಶವೇ ಇರಬಾರದೆಂದು ರಾಜೇಂದ್ರಸಿಂಗ್ ಹೇಳುತ್ತಾರೆ.

ನಮಗೆ ಸಾಂಪ್ರದಾಯಿಕವಾಗಿ ಬಂದ ಜಲಸಂಪನ್ಮೂಲ ಅಭಿವೃದ್ಧಿ ವ್ಯವಸ್ಥೆಯೇ ಕೆರೆ, ಕಟ್ಟೆ, ಕೊಳ, ಬಾವಿಗಳು. ನದಿಗಳು ನಮಗೆ ತಾಯಿ– ದೇವರು. ಬುಡಕಟ್ಟು ಜನರಿಗೆ ನೀರೇ ದೇವರು.

ಗಂಗೇಚ ಯಮುನೇಚೈವ
ಗೋದಾವರಿ ಸರಸ್ವತಿ
ನರ್ಮದಾ ಸಿಂಧು ಕಾವೇರಿ,
ಜಲೇಸ್ಮಿನ್ ಸನ್ನಿಧಿಂ ಕುರು.

ಇದು ಭಾರತವನ್ನು ದಕ್ಷಿಣೋತ್ತರ ಒಂದುಗೂಡಿಸುವ ಶ್ಲೋಕವೂ ಹೌದು. ಪವಿತ್ರ ನದಿಗಳ ನೀರೆಲ್ಲವೂ ನಾನು ಬಳಸುವ ನೀರಿನಲ್ಲಿದೆ ಎಂಬ ಭಾವವೂ ಹೌದು. ಅನೇಕತೆಯಲ್ಲಿ ಏಕತೆಯೂ ಹೌದು. ಯಾವುದೂ ಬೇರೆ ಬೇರೆ ಅಲ್ಲ, ಸಕಲವೂ ನಿನ್ನಲ್ಲಿದೆ. ನಿನ್ನಲ್ಲಿ ಒಂದಾಗಿವೆ. ನೀನೇ ಸಕಲವೂ ಹೌದೆಂದು ಸಾರುವ ಅದ್ವೈತವೂ ಹೌದು.

ಹೀಗೊಂದು ದೊಡ್ಡ ದರ್ಶನವನ್ನೇ ನೀಡುವ ನದೀ ಮೂಲಗಳು, ಮತ್ತು ನದಿಗಳನ್ನು ತಾಯಿ ಎಂದು ಪೂಜಿಸುವ ನಾವು ನದಿಗಳ ಮಲಿನ, ಆಕ್ರಮಣ, ನದೀ ಪ್ರದೇಶಗಳ ಸಂರಕ್ಷಣೆ ಕುರಿತು ಜಾಗೃತಿ ಹೊಂದಿಲ್ಲವೇಕೆ? ಭಾರತವೆಂದರೆ ಪುಣ್ಯ ಭೂಮಿ. ಆಧ್ಯಾತ್ಮಿಗಳಿಗಿದು ಸ್ವರ್ಗ ಎಂದು ಶ್ಲೋಕಗಳನ್ನು ಉದ್ಧರಿಸುತ್ತ ಮಡಿಯಲ್ಲಿ ಕೂತರೆ ಸಾಕೇ? ಪುರದ ಹಿತ ಕಾಪಾಡುವ ಪುರೋಹಿತ ಉತ್ತಮ ಶಿಕ್ಷಕ. ಸಂಘಟಕನಾಗಲಿಲ್ಲವೇಕೆ? ಈ ಮುಂತಾದ ಪ್ರಶ್ನೆಗಳು ನನ್ನನ್ನು ಕಾಡುತ್ತವೆ.

ಮಳೆಗಾಲ, ಚಳಿಗಾಲ, ಬೇಸಗೆ ಮೂರು ಋತುಮಾನಗಳು, ಹಣ್ಣು ಹಂಪಲುಗಳು, ದವಸ ಧಾನ್ಯಗಳು, ತರಹೆವಾರಿ ಕಾಳುಕಡಿಗಳು, ಜನ, ಜಾನುವಾರು, ಪ್ರಾಣಿ ಪಕ್ಷಿಗಳು, ಹೊಳೆ ಹಳ್ಳ, ನದಿ, ಕೆರೆ, ಸಮುದ್ರ, ಕಟ್ಟೆ ಕಾಲುವೆ, ಬಾವಿಗಳು, ಜಲಚರಗಳು– ಇಷ್ಟೆಲ್ಲಾ ಸಂಪತ್ತುಳ್ಳ ಭಾರತದ ಹಲವು ರಾಜ್ಯಗಳು ನೀರನ ಬರ ಎದುರಿಸುತ್ತಾವೆಂದರೆ ಕಾರಣಗಳೇನು? ಮನುಷ್ಯ ಭೂಮಿಯ ಕುರಿತು ಹೊಂದಿರುವ ನಿಷ್ಕಾಳಜಿ ಮತ್ತು ಖಾಸಗಿ ಸಂಪತ್ತು ಗಳಿಸುವ ದುರಾಸೆಯಲ್ಲವೇ? (ಉದಾಹರಣೆಗೆ ಗಣಿಗಾರಿಕೆಯಿಂದ ಗಾಲಿ ಜನಾರ್ದನ ರೆಡ್ಡಿ ಗಳಿಸಿದ ಸಂಪತ್ತು, ಚಿನ್ನದ ಸಿಂಹಾಸನ, ದೇವರಿಗೆ ನೀಡಿದ ವಜ್ರದ ಕಿರೀಟ, ಹೊಂದಿದ ಹೆಲಿಕಾಪ್ಟರ್ ಇತ್ಯಾದಿ) ನೀರಿನ ಕುರಿತು ಬರೆಯುವಾಗ ಒಂದು ಕಡೆ ಜನಾರ್ಧನ ರೆಡ್ಡಿ, ಕಾಡುಗಳ್ಳ ವೀರಪ್ಪನ್‌ನಂಥ ಪಾತ್ರಗಳು ಮತ್ತೊಂದೆಡೆ ರಾಜೇಂದ್ರ ಸಿಂಗ್, ಸಿದ್ದು ನ್ಯಾಮನ ಗೌಡ, ಚೆನ್ನಬಸಪ್ಪ, ಶಿವಪ್ಪ ಕಾಂಬಳಿ, ಜಿ ಡಿ ಅಗರ್‌ವಾಲರಂಥ ಪಾತ್ರಗಳು ಕಾಣತೊಡಗುತ್ತವೆ. ಧರ್ಮ ಸಂಪ್ರದಾಯವೆಂದು ಚಿಂತಿಸುವ ಜಡತೆ, ಪ್ರಕೃತಿ ಕುರಿತು ಅಲಕ್ಷ್ಯ ಗೋಚರವಾಗುತ್ತದೆ.

ಡಾ. ರಾಜೇಂದ್ರ ಸಿಂಗರು ರಾಜಸ್ಥಾನದಲ್ಲಿ ಕಾಡು ಬೆಳೆಸಿ, ಭೂ ಸವಕಳಿ ತಪ್ಪಿಸಿ ಕೆರೆಕಟ್ಟೆ ನಿರ್ಮಿಸಿದ್ದರ ಫಲ–

1) ಅಂತರ್ಜಲ ಮಟ್ಟ 200 ಅಡಿಗಳಿಂದ ಈಗ 20 ಅಡಿಗೆ ಏರಿದೆ.

2) 1985ರಲ್ಲಿ ಶೇ. 80ರಷ್ಟಿದ್ದ ಭೂ ಸವೆತ ಈಗ ಶೇ.5ಕ್ಕೆ ಇಳಿದಿದೆ.

3) ಶೇ. 12ರಷ್ಟಿದ್ದ ಅರಣ್ಯ ಪ್ರದೇಶ ಈಗ ಶೇ. 50ರಷ್ಟಾಗಿದೆ.

4) ಜೋಳ, ಸಜ್ಜೆ, ಕಡಲೆ ಬೆಳೆಯುತ್ತಿದ್ದ ರೈತರು ಈಗ ಗೋಧಿ, ಜೀರಿಗೆ, ಕಾಯಿಪಲ್ಯೆ ಬೆಳೆಯುತ್ತಾರೆ. ಉತ್ಪಾದನೆ ಹತ್ತುಪಟ್ಟು ಹೆಚ್ಚಾಗಿದೆ.

5) ಶೇ. 80ರಷ್ಟು 17 ರಿಂದ 40 ವಯೋಮಾನದ ಪುರುಷರು ಸರಿಸ್ಕಾದಿಂದ ಪಟ್ಟಣಕ್ಕೆ ವಲಸ ಹೋಗುತ್ತಿದ್ದರು. ಈಗ ವಲಸೆ ಹೋಗುತ್ತಿಲ್ಲ. ಹೋದವರು ಹಳ್ಳಿಗೆ ಹಿಂದಿರುಗುತ್ತಿದ್ದಾರೆ.

6) ಹೆಣ್ಣುಮಕ್ಕಳು ಶಾಲೆಗೆ ಹೋಗುತ್ತಿರುವುದು ಗಮನಾರ್ಹ ಸಂಗತಿ.

7) ಮಹಿಳೆಯರು ಪೇಟೆಗೆ ಖರೀದಿಗೆ ಹೋಗುವ ಬದಲು ತಮ್ಮ ಉತ್ಪಾದನೆ ಮಾರಲು ಹೋಗುತ್ತಿದ್ದಾರೆ.

8) ಅಗಲಿದ ಕುಟುಂಬಗಳು ಒಂದಾಗಿವೆ.

9) ಜನರಲ್ಲಿ ಆತ್ಮವಿಶ್ವಾಸ, ಸ್ವಾವಲಂಬನೆ ಬಲಗೊಂಡಿದೆ.

– ಈ ಅಂಶಗಳು ನಮ್ಮ ಮುಂದಿನ ಪೀಳಿಗೆಗೆ ದಾರಿದೀಪ. ಮತ್ತು ಇಂಥ ಕೆಲಸಗಳು ನಾವು ಯಾವುದನ್ನು ಮಾಡಬೇಕು, ಮಾಡಬಾರದು ಮತ್ತು ಮಾಡಬಾರದ್ದನ್ನು ಮಾಡಿದರೆ ಏನಾಗುತ್ತದೆ ಎಂಬ ಎರಡೂ ಅಂಶಗಳನ್ನೂ ಇತಿಹಾಸ, ಕಾವ್ಯಗಳು ಹೇಳುತ್ತಿವೆ. ಆಯ್ಕೆ ನಮ್ಮದು!

*

ಬಂದಗದ್ದೆ ರಾಧಾಕೃಷ್ಣ, ಹೊಸಲೋಕ, ಹೆಗ್ಗೋಡು – 577 417

# ಹವಾಮಾನ ಬದಲಾವಣೆಯಲ್ಲಿ ಕೆರೆಗಳ ಪಾತ್ರ

–ಪೂರ್ಣಪ್ರಜ್ಞ ಬೇಳೂರು

## ಕೆರೆಗಳ ಇತಿಹಾಸ

ಒಂದು ಹಳ್ಳಿ ಜೀವಂತವಾಗಿದೆ ಎಂದರೆ ಅದಕ್ಕೆ ಕಾರಣ ಆ ಊರಿನ ಕೆರೆ. ಜನರ ನೆಲೆಗೆ, ಬದುಕಿನ ಸೆಲೆಗೆ ಕಾರಣ ಕೆರೆ. ಮುಂಗಾರು ಮಳೆಗೆ ತುಂಬುವ ಕೆರೆಗೆ ಬಾಗಿನ ಕೊಡುವುದು ಮಲೆನಾಡಿನ ಆಚರಣೆ. ಪ್ರತಿ ಊರಿನ ಕೆರೆಗೂ ಒಂದು ಇತಿಹಾಸವಿದೆ. ಜಾನಪದ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಕಾರಣಗಳಿಗೆ ಕೆರೆಗಳನ್ನು ಕಟ್ಟಿಸುತ್ತಿದ್ದರು. ಕೆರೆಯು ಪ್ರತಿದಿನದ ಬದುಕಿನ ಅವಿಭಾಜ್ಯ ಅಂಗವಾಗಿತ್ತು. ಕೆರೆಯ ಕುರಿತಾದ ಕತೆಗಳು, ಹಾಡುಗಳು, ಲಾವಣಿಗಳು ಜನರ ಬಾಯಿಂದ ಬಾಯಿಗೆ ಸಾಗಿಬಂದಿವೆ. ಕೆಳದಿ ಕೆರೆಗೆ ವಡ್ಡರ ತಿಮ್ಮಿ, ಕೊಟ್ಟೂರಿನ ಕೆರೆಗೆ ಗೌಡರ ಬೊಮ್ಮವ್ವ, ಹೊನ್ನಮ್ಮನ ಕೆರೆ, ಕೆಂಚಮ್ಮನ ಕೆರೆ, ಬೋಯಮ್ಮನ ಕೆರೆ, ಸೂಳೆ ಶಾಂತವ್ವಳ ಕೆರೆ–ಹೀಗೆ ಕೆರೆಗೆ ಬಲಿಯಾದ, ಕೆರೆ ಕಟ್ಟಿಸಿದ, ಕೆರೆಯ ನಿರ್ಮಾಣಕ್ಕೆ ಜೀವ ತೆತ್ತ ಸಾವಿರಾರು ಉದಾಹರಣೆಗಳು ಸಿಗುತ್ತವೆ.

ಕೆರೆಗಳ ನಿರ್ಮಾಣವನ್ನು ಕೇವಲ ರಾಜ–ಮಹಾರಾಜರುಗಳಷ್ಟೇ ಮಾಡಿದ್ದಲ್ಲ. ರಾಣಿಯರು, ಮಂತ್ರಿಗಳು, ವ್ಯಾಪಾರಿಗಳು, ಜನಸಾಮಾನ್ಯರು, ಸೂಳೆಯರು ಹಾಗೂ ಸನ್ಯಾಸಿಗಳೂ ಸಹ ಕೆರೆಗಳನ್ನು ಕಟ್ಟಿಸಿದ್ದಾರೆ. ಕೆರೆಗಳ ಕುರಿತಾದ ಶಾಸನಗಳು ಕ್ರಿಸ್ತಪೂರ್ವ 200ರಲ್ಲೇ ಸಿಗುತ್ತವೆ. ನಮ್ಮ ಕನ್ನಡ ರಾಜ ಕದಂಬರ ಮಯೂರವರ್ಮನ ಶಾಸನದ ಪ್ರಕಾರ ಚಿತ್ರದುರ್ಗದಲ್ಲಿರುವ ಚಂದ್ರವಳ್ಳಿಯ ಕೆರೆಯನ್ನು ಕ್ರಿಸ್ತಶಕ ನಾಲ್ಕನೇ ಶತಮಾನದಲ್ಲಿ ನಿರ್ಮಿಸಲಾಗಿದೆ. ಬಹುಶಃ ಕರ್ನಾಟಕದಲ್ಲಿ ದಾಖಲೆಗೆ ಸಿಕ್ಕ ಅತ್ಯಂತ ಹಳೆಯ ಕೆರೆಯಿದು. ವಿಜಯನಗರದ ಕೃಷ್ಣದೇವರಾಯನ ಕೃತಿ ಆಮುಕ್ತಮೌಲ್ಯದಲ್ಲಿ ರಾಜ್ಯದ ಬೊಕ್ಕಸ ತುಂಬುವುದು ಕೆರೆಗಳನ್ನು ಸುಸ್ಥಿರವಾಗಿಟ್ಟುಕೊಂಡು, ಅದಕ್ಕೆ ಕಾಲುವೆಗಳನ್ನು ನಿರ್ಮಿಸಿದಾಗ ಮಾತ್ರ ಎಂದು ಬರೆದಿದೆ. ಇದಕ್ಕೂ ಮೊದಲೇ ವಿಜಯನಗರದ ಎರಡನೇ ರಾಜನಾಗಿದ್ದ ಬುಕ್ಕನು ಕೆರೆ ಕಟ್ಟಿಸುವ ವಿಧಾನ ಹಾಗೂ ಅದಕ್ಕೆ ಬಳಸುವ ಸಾಮಗ್ರಿಗಳ ಕುರಿತ ಕೈಪಿಡಿಯೊಂದನ್ನು ಬರೆಸಿದ್ದನಂತೆ.

ರಾಜ್ಯದ ಕೈಫಿಯತ್ತುಗಳಲ್ಲಿಯೂ ಕೆರೆ ನಿರ್ಮಾಣದ ವಿಷಯಗಳಿವೆ. ಬಳ್ಳಾರಿ ಜಿಲ್ಲೆಯ ಕೊಕ್ಕನಸಮುದ್ರದಲ್ಲಿ ಗೊಲ್ಲರು ಕಟ್ಟಿಸಿದ ಕೊಕ್ಕಸಮುದ್ರ ಕೆರೆ, ಸೂಳೆಯೊಬ್ಬಳು ಕಟ್ಟಿಸಿದ ನಾಗಸಮುದ್ರ ಕೆರೆ–ಹೀಗೆ ನೂರಾರು ಕೆರೆಗಳ ಕುರಿತು ದಾಖಲೆಗಳು ಸಿಗುತ್ತವೆ.

ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ [973-1336] ಧಾರವಾಡ, ಬಳ್ಳಾರಿ, ಚಿತ್ರದುರ್ಗ ಹಾಗೂ ಶಿವಮೊಗ್ಗ ಪ್ರದೇಶಗಳಲ್ಲಿ ಸುಮಾರು 20 ಸಾವಿರಕ್ಕೂ ಹೆಚ್ಚು ಕೆರೆಗಳು ನಿರ್ಮಾಣಗೊಂಡವು. ಅವುಗಳನ್ನು ದ್ವಾರಸಮುದ್ರ, ವಿಷ್ಣುಸಮುದ್ರ, ಹೊಯ್ಸಳಸಮುದ್ರ ಎಂದೇ ಕರೆಯುವಷ್ಟು ದೊಡ್ಡದಾಗಿರುತ್ತಿದ್ದವು.

ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಬಂದಿದ್ದ ಪೇಯಿಸ್ ಎಂಬ ಪ್ರವಾಸಿಯು, ಸುಮಾರು 20 ಸಾವಿರಕ್ಕೂ ಹೆಚ್ಚು ಜನರು ಕೆರೆ ಕಟ್ಟುತ್ತಿದ್ದಾರೆ. ಇಂತಹ ವಿಶಾಲವಾದ ಕೆರೆಯಲ್ಲಿ ಕೆಲಸ ಮಾಡುತ್ತಿರುವ ಜನ ಇರುವೆಗಳಂತೆ ಕಾಣುತ್ತಿದ್ದಾರೆ. ಕೊಳವೆಗಳ ಮೂಲಕ ನೀರಾವರಿ ವ್ಯವಸ್ಥೆ ಮಾಡುತ್ತಿದ್ದಾರೆ. ತೋಟಗಳಿಗೆ, ಭತ್ತದ ಗದ್ದೆಗಳಿಗೆ ನೀರು ಹರಿಸಲು ಕಾಲುವೆಗಳಿವೆ. ಈ ದೇಶ ಸದಾ ಸುಭಿಕ್ಷವಾಗಿರಲು ಇಂತಹ ಕೆರೆಗಳೇ ಕಾರಣ ಎನ್ನುತ್ತಾರೆ.

ಕೆರೆಗಳನ್ನು ಕಟ್ಟುವಾಗ ಸಮುದಾಯಗಳು ಕಡ್ಡಾಯವಾಗಿ ಭಾಗವಹಿಸಬೇಕಿತ್ತು. ತಮ್ಮ ಎತ್ತುಗಳನ್ನು ಕೆಲಸಕ್ಕೆ ನೀಡಬೇಕಿತ್ತು. ಯಾವುದೇ ಪ್ರತಿಫಲ ಬಯಸದೇ ತಮ್ಮ ಪಾಲನ್ನು ನೀಡಬೇಕಿತ್ತು. ಇಲ್ಲದಿದ್ದರೆ ಜುಲ್ಮಾನೆ ಕೊಡಬೇಕಾಗುತ್ತಿತ್ತು.

ಕೆರೆಯ ನೀರನ್ನು ಖಾಲಿ ಮಾಡಿದರೆ, ತಮ್ಮ ಸರತಿಗೂ ಮೊದಲೇ ಬಳಸಿದರೆ, ಇತರರ ಗದ್ದೆಗೆ ನೀರು ಹೋಗುವುದನ್ನು ತಡೆದರೆ ಶಿಕ್ಷೆ ವಿಧಿಸಲಾಗುತ್ತಿತ್ತು. ಯಾರೇ ಆಗಲಿ, ಕೆರೆಗಳ ಸನಿಹ ಮಲಮೂತ್ರ ಮಾಡುವುದು, ಕೆರೆಗೆ ತ್ಯಾಜ್ಯಗಳನ್ನು ಸುರಿಯುವುದು, ಪಾದರಕ್ಷೆಸಹಿತ ನೀರಿಗೆ ಇಳಿಯುವುದು ಮಾಡಿದರೆ ದಂಡ ವಿಧಿಸಲಾಗುತ್ತಿತ್ತು.

ಮೈಸೂರಿನ ಮುಖ್ಯ ಇಂಜಿನಿಯರ್ ಆಗಿದ್ದ ಮೇಜರ್ ಆರ್.ಎಸ್. ಸ್ಯಾಂಕಿ ಬರೆಯುತ್ತಾರೆ: ಬರ ಪರಿಸ್ಥಿತಿ ಎದುರಾದರೆ ಮಾತ್ರ ಕೆರೆಯ ನೀರನ್ನು ಬಳಸಲು ಅನುಮತಿ ನೀಡಲಾಗುತ್ತಿತ್ತು; ಕೆರೆಗಳಲ್ಲಿ ನೀರಿದ್ದರೆ ಜಾನುವಾರುಗಳಿಗೆ ಮೇವು ಹಾಗೂ ಜನರಿಗೆ ಎರಡನೇ ಬೆಳೆಯನ್ನು ನೀರು ನೀಡದೇ ತೆಗೆಯಲು ಸಾಧ್ಯವಿದೆ; ಕೆರೆಗಳಿಂದಲೇ ಆಹಾರದ ಸೌಲಭ್ಯ ಹೆಚ್ಚಿ ಜನರ ಹಸಿವು ನೀಗುತ್ತದೆ; ದೇಶದ ಸಂಪತ್ತು ಹೆಚ್ಚುತ್ತದೆ; ಮಣ್ಣು ಸವಕಳಿ ಕಡಿಮೆಯಾಗುತ್ತದೆ; ಅನಾವೃಷ್ಟಿ ಹಾಗೂ ಅತಿವೃಷ್ಟಿಯಲ್ಲಿ ಸಂರಕ್ಷಣೆ ಸಿಗುತ್ತದೆ; ಊರಿನ ಬಾವಿಗಳಲ್ಲಿ ನೀರು ಸದಾ ತುಂಬಿರುತ್ತದೆ; ಕುಡಿಯುವ ನೀರಿಗೆ ತೊಂದರೆಯಾಗದು; ಊರಿನ ಪರಿಸರ ತಂಪಾಗಿರುತ್ತದೆ ಎಂದು ದಾಖಲಿಸಿದ್ದಾರೆ.

## ಕೆರೆಗಳ ಕುರಿತ ಅಂಕಿ-ಅಂಶಗಳು, ದಾಖಲಾತಿಗಳು

ರಾಜ್ಯದ 22,800 ಕೆರೆಗಳು ಲೋಕೋಪಯೋಗಿ ಇಲಾಖೆಯ ಅಧೀನದಲ್ಲಿದ್ದು, ಉಳಿದ 15,713 ಕೆರೆಗಳು ತಾಲ್ಲೂಕು ಅಭಿವೃದ್ಧಿ ಮಂಡಳಿಗಳ ಅಡಿಯಲ್ಲಿವೆ. ಇದು ಇಸವಿ 01-04-1976ರ ಅಂಕಿ ಅಂಶ. ಅಂದು ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿದ್ದ ಕೆರೆಗಳ ಸಂಖ್ಯೆ 596. ಇಂದು ಬೆಂಗಳೂರಿನಲ್ಲಿ ಉಳಿದಿರುವ ಕೆರೆಗಳ ಸಂಖ್ಯೆ 64 ಮಾತ್ರ. ಇದೇ ರೀತಿ ರಾಜ್ಯಾದ್ಯಂತ ಸುಮಾರು ಐದು ಸಾವಿರ ಕೆರೆಗಳು ಕಣ್ಮರೆಯಾಗಿವೆ. ಅಂದರೆ 33,474 ಕೆರೆಗಳು ವಸತಿಪ್ರದೇಶಗಳಾಗದೆ, ಕಾರ್ಖಾನೆಗಳೇಳದೆ ಉಳಿದಿವೆ. 336 ಕೆರೆಗಳು ತಲಾ 500 ಎಕರೆ ಪ್ರದೇಶಕ್ಕೆ ನೀರುಣಿಸುತ್ತಿದ್ದವು. 2,701 ಕೆರೆಗಳು 100ರಿಂದ 500

ಎಕರೆ ಪ್ರದೇಶಕ್ಕೆ ನೀರುಣಿಸುತ್ತಿದ್ದವು. ಈಗ ಕೆರೆಗಳಲ್ಲಿ ಹೂಳು ತುಂಬಿಕೊಂಡಿರುವುದರಿಂದ ಸುಮಾರು 2,19,305 ಎಕರೆ ಪ್ರದೇಶ ನೀರಿನಾಸರೆ ಕಳೆದುಕೊಂಡಿದೆ. ಇದರಿಂದಾಗಿ ಸುಮಾರು ಆರು ಲಕ್ಷ ಎಕರೆ ಪ್ರದೇಶವು ಬರಡಾಗಿದೆ. ಕೆರೆಗಳನ್ನು ಒತ್ತುವರಿ ಮಾಡಿರುವುದು ಇನ್ನೊಂದು ಪ್ರಮುಖ ಸಮಸ್ಯೆ. ಈ ಒತ್ತುವರಿಯ ಪ್ರಮಾಣ 42,674 ಎಕರೆಗಳಷ್ಟಿದೆ.

ಕೆರೆಗಳಿಂದ ಕೇವಲ ಬೆಳೆಗಳ ಉತ್ಪಾದನೆ ಸಾಧ್ಯತೆ ಮಾತ್ರವಲ್ಲ, ಇವು ಪರಿಸರ ಸ್ವಾಸ್ಥ್ಯದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಮಳೆನೀರನ್ನು ಅತ್ಯಂತ ದೊಡ್ಡ ಪ್ರಮಾಣದಲ್ಲಿ ಹಿಡಿದಿಡುವ ಭಾಂಡಾರವಿದು. ಗುಡ್ಡಗಳ ಕೆಳಭಾಗದಲ್ಲಿ ಕೆರೆಗಳಿರುವುದರಿಂದ ನೀರೆಲ್ಲಾ ಹರಿದು ಹೋಗದಂತೆ ನಿಲ್ಲಿಸುತ್ತವೆ. ಪ್ರವಾಹವನ್ನು ನಿಯಂತ್ರಿಸುತ್ತವೆ. ಮಣ್ಣೆಲ್ಲಾ ನದಿ-ಹೊಳೆಗಳ ಪಾಲಾಗಿ ಸಮುದ್ರ ಸೇರದಂತೆ ತಡೆಗಟ್ಟುತ್ತವೆ. 10ಕ್ಕೂ ಹೆಚ್ಚು ಜಾತಿಯ ಹುಲ್ಲುಗಳಿಗೆ ಕೆರೆಯೇ ಆಶ್ರಯತಾಣ. ಮೀನು, ಏಡಿ, ಕಪ್ಪೆ, ಹಾವು, ಹಕ್ಕಿ-ಪಕ್ಷಿಗಳಿಗೆ ಕೆರೆಯೇ ಜೀವನಾಧಾರ. ಕರ್ನಾಟಕದಲ್ಲಿ ಸುಮಾರು 20 ಸಾವಿರ ಕೆರೆಗಳಿಗೆ ದೇಶ-ವಿದೇಶಗಳ ಹಕ್ಕಿ-ಪಕ್ಷಿಗಳು ಬರುತ್ತವೆ. ನಮ್ಮ ಎಲ್ಲಾ ಪಕ್ಷಿಧಾಮಗಳೂ ಕೆರೆಗಳನ್ನೇ ಅವಲಂಬಿಸಿವೆ. ಜೀವಿವೈವಿಧ್ಯದ ಪ್ರಮುಖ ಮೂಲ ಕೆರೆಗಳಾಗಿವೆ. ಅಮೇರಿಕಾದ ಬರ್ಕ್‌ವೈಟ್ 1947ರಲ್ಲಿ ಚಿತ್ರದುರ್ಗಕ್ಕೆ ಭೇಟಿ ನೀಡುತ್ತಾರೆ. ಕಲ್ಲಹಳ್ಳಿಯ ಕೆರೆ ಬತ್ತಿರುವುದನ್ನು ನೋಡುತ್ತಾರೆ. ಬ್ರಿಟಿಷರ ಆಡಳಿತದಲ್ಲಿ ದೇಶದ ಯಾವ ಕೆರೆಗಳ, ಜಲಾಶಯಗಳ ದುರಸ್ಥಿ ನಡೆಯಲೇ ಇಲ್ಲ. ಅವರು ಸಂಪನ್ಮೂಲಗಳನ್ನು ಸಾಗಿಸಲು ರಸ್ತೆಗಳು, ರೈಲ್ವೆ ಹಳಿಗಳನ್ನು ತಮಗೆ ಬೇಕಾದಲ್ಲಿಗೆ ಹಾಕಿಸಿದರು. ಆದರೆ ರೈತರ ಅಭಿವೃದ್ಧಿ, ನೀರಿನ ಸಂಗ್ರಹಾಗಾರ ಹೀಗೆ ಯಾವುದಕ್ಕೂ ಸುಮಾರು 200 ವರ್ಷಗಳ ಕಾಲ ಗಮನ ಹರಿಸಲಿಲ್ಲ. ಪರಿಣಾಮ ಇಸವಿ 1946ರಲ್ಲಿ ಬಂದ ಮಳೆಗೆ ಹೂಳು ತುಂಬಿದ ಕಲ್ಲಹಳ್ಳಿಯ ಕೆರೆಯಲ್ಲಿ ನೀರು ತುಂಬಿತು. ಕೆರೆಯ ಏರಿ ಒಡೆಯಿತು. ಅದನ್ನು ಸರಿಪಡಿಸಲು ರೈತರ ಬಳಿ ಹಣವಿಲ್ಲ. ಸರ್ಕಾರ ಸರಿಪಡಿಸಲಿಲ್ಲ. ಪರಿಣಾಮ ಬರಗಾಲ. ಮಳೆಗಾಲ ಅಥವಾ ಮುಂಗಾರು ಸಮಯಕ್ಕೆ ಸರಿಯಾಗಿ ಬರದಿದ್ದರೂ ಸಹ ರೈತರು ಕೆರೆ ನಿರ್ಮಿಸಿಕೊಂಡು ನೀರು ಸಂಗ್ರಹಿಸುತ್ತಿದ್ದರು. ಸಾಗುವಳಿ ಮಾಡುತ್ತಿದ್ದರು. ಕಲ್ಲಹಳ್ಳಿಯಲ್ಲಿ ಹೆಚ್ಚು ಜಮೀನಿದ್ದ ಸಣ್ಣಲಿಂಗಪ್ಪ ಎನ್ನುವವರು ಹೇಳುತ್ತಾರೆ 'ಕೆರೆಯಲ್ಲಿ ನೀರು ಇದ್ದಿದ್ದರೆ ಈ ರೀತಿ ಬರ ಬರುತ್ತಿರಲಿಲ್ಲ. ಊರಿನ ತಾಪಮಾನ ಇಷ್ಟು ಹೆಚ್ಚುತ್ತಿರಲಿಲ್ಲ. ಯುವಕರೆಲ್ಲಾ ಊರನ್ನು ಬಿಟ್ಟು ಹೋಗುತ್ತಿರಲಿಲ್ಲ'.

## ಕೆರೆಯ ರಚನೆ, ವಿನ್ಯಾಸ

ಕೆರೆಯೆಂದರೆ ಕೇವಲ ನೀರು ನಿಲ್ಲುವ ಜಲಸಂಗ್ರಹಾಗಾರ ಮಾತ್ರವಲ್ಲ. 1) ಜಲಾನಯನ ಪ್ರದೇಶ 2) ಕೆರೆಯ ಅಂಗಳ 3) ಅಚ್ಚುಕಟ್ಟು ಪ್ರದೇಶ 4) ಕೆರೆ ಏರಿ 5) ತೂಬು-ಕೋಡಿ 6) ಕಾಲುವೆಗಳು ಸೇರಿವೆ.

ಕೆರೆಗಳನ್ನು ತಗ್ಗು ಪ್ರದೇಶದಲ್ಲಿ ನಿರ್ಮಿಸುತ್ತಿದ್ದರು. ಸುತ್ತಲೂ ಗುಡ್ಡ-ಬೆಟ್ಟಗಳು ಇರುತ್ತಿದ್ದವು. ಅಲ್ಲಿ ಬಿದ್ದ ಮಳೆನೀರು ಹರಿದು ಬಂದು ಕೆರೆ ಸೇರುತ್ತಿತ್ತು. ಹೀಗೆ ಕೆರೆಗೆ ನೀರು ಹರಿದು ಬರುವ ಪ್ರದೇಶಕ್ಕೆ ಜಲಾನಯನ ಪ್ರದೇಶ ಎನ್ನಲಾಗುತ್ತದೆ. ಇಂತಹ ಪ್ರದೇಶಗಳ ವಿಸ್ತೀರ್ಣವನ್ನು ಅವಲಂಬಿಸಿ ಕೆರೆಯ ವಿಸ್ತೀರ್ಣವನ್ನು ನಿರ್ಧರಿಸುತ್ತಿದ್ದರು. ಅಂದರೆ ದೊಡ್ಡಕೆರೆಗೆ ದೊಡ್ಡ ಜಲಾನಯನ ಪ್ರದೇಶವಿರುತ್ತಿತ್ತು. ಇಂತಹ ಜಲಾನಯನ

ಪ್ರದೇಶದಿಂದ ನೀರನ್ನು ಸೀದಾ ಹರಿದುಬರಲು ಬಿಡುತ್ತಿರಲಿಲ್ಲ. ಗಿಡಮರಗಳನ್ನು ಯಥೇಚ್ಛವಾಗಿ ಬೆಳೆಸಲಾಗುತ್ತಿತ್ತು. ಇದರಿಂದ ಬಿದ್ದ ಮಳೆಯು ಮೊದಲು ಇಂಗುತ್ತಿತ್ತು. ಮಳೆಯಿಂದಾಗಿ ಹುಲ್ಲು ಬೆಳೆಯುತ್ತಿತ್ತು. ಹೆಚ್ಚಾದ ನೀರು ಹರಿದುಬಂದು ಕೆರೆ ಸೇರುತ್ತಿತ್ತು. ಹುಲ್ಲು ಬೆಳೆದ ಮೇಲೆ ನೀರಿನ ಚಿಲುಮೆಗಳು ಚಿಮ್ಮಿ ಹರಿಯುತ್ತಿದ್ದ ಕಾರಣ ಮಣ್ಣಿನ ಸವಕಳಿಯಾಗುತ್ತಿರಲಿಲ್ಲ. ಕೆರೆಗಳಲ್ಲಿ ಹೂಳು ತುಂಬುತ್ತಿರಲಿಲ್ಲ. ಜಲಾನಯನ ಪ್ರದೇಶ ವರ್ಷಾವಧಿ ಹಸುರಿನಿಂದ ತುಂಬಿರುತ್ತಿತ್ತು. ಮರಗಿಡಗಳಿಂದಾಗಿ ಅಂತರ್ಜಲಮಟ್ಟ ಏರುತ್ತಿತ್ತು. ಕೆರೆ ವರ್ಷವೆಲ್ಲಾ ತುಂಬಿರುತ್ತಿತ್ತು. ಸಾಗುವಳಿಗೆ ನೀರನ್ನು ಬಳಸಿದರೂ ಕೆರೆ ಬತ್ತುತ್ತಿರಲಿಲ್ಲ. ಊರು ನೀರಿನ ಧಾರಾಳತೆಯಿಂದಾಗಿ ತಂಪಾಗಿರುತ್ತಿತ್ತು. ಊರಿನ ಸುತ್ತಲಿನ ಕಾಡಿನಿಂದಾಗಿ ತಾಪಮಾನ ಹಿತಕರವಾಗಿರುತ್ತಿತ್ತು. ಕೃಷಿಗೆ ಸೊಪ್ಪು, ಗೊಬ್ಬರ, ದರಕು ಸಿಗುತ್ತಿತ್ತು. ಕಾಡಿನ ಉಪಉತ್ಪನ್ನಗಳೂ ದೊರಕುತ್ತಿದ್ದವು. ಹೀಗೆ ಜಲಾನಯನ ಪ್ರದೇಶವೆಂಬುದು ಕಾಡೇ ಆಗಿರುತ್ತಿತು.

ಕಾಡು ಇಲ್ಲದ ಪ್ರದೇಶಗಳಲ್ಲಿ ಕೆರೆಗೆ ಬರುವ ನೀರಿಗೆ ಅಡ್ಡಲಾಗಿ ಕಟ್ಟೆ, ಕುಂಟೆ, ಸಣ್ಣಕೆರೆಗಳನ್ನು ನಿರ್ಮಿಸುತ್ತಿದ್ದರು. ಪ್ರಮುಖ ಕಾರಣ; ಮಣ್ಣಿನ ಸವಕಳಿಯನ್ನು ತಪ್ಪಿಸುವುದು; ಕೆರೆ ಹೂಳು ತುಂಬದಂತೆ ಮಾಡುವುದು; ಗುಡ್ಡದ ಇಳಿಜಾರಿನಲ್ಲಿ ಅಲ್ಲಲ್ಲಿ ನೀರಿಂಗಿಸುವುದು. ಇಂತಹ ಕಟ್ಟೆ-ಕುಂಟೆಗಳನ್ನು ದನ-ಕುರಿಗಳ ದಾಹ ನೀಗಿಸಲೂ ಸಹ ನಿರ್ಮಿಸುತ್ತಿದ್ದರು. ಗುಡ್ಡಬೆಟ್ಟಗಳಿಂದ ಇಳಿದ ನೀರು ಮೊದಲು ಇಲ್ಲಿ ತಂಗುತ್ತಿತ್ತು. ಇಲ್ಲಿ ನಿಂತು ತಿಳಿಯಾದ ನೀರು ಹರಿದು ಮುಂದಿರುವ ದೊಡ್ಡಕೆರೆಯನ್ನು ಸೇರುತ್ತಿತ್ತು. ಇಲ್ಲೆಲ್ಲಾ ಇಂಗಿದ ನೀರು ಊರಿನ ಹಾಗೂ ಹೊಲಗಳಲ್ಲಿರುವ ಬಾವಿಗಳಲ್ಲಿ ಅಂತರ್ಜಲವಾಗಿ ದೊರಕುತ್ತಿತ್ತು. ಹೀಗೆ ಗುಡ್ಡದಿಂದಿಳಿವ ನೀರಿಗೆ ತಡೆಯೊಡ್ಡುವುದರಿಂದಾಗಿ ಪ್ರವಾಹವಾಗಲೀ, ಅನಾಹುತಗಳಾಗಲೀ ಉಂಟಾಗುತ್ತಿರಲಿಲ್ಲ. ನೀರು ವ್ಯರ್ಥವಾಗಿ ಹರಿದುಹೋಗದೇ ಅಲ್ಲೇ ನಿಲ್ಲುತ್ತಿತ್ತು. ಹೀಗೆ ಜಲಾನಯನ ಪ್ರದೇಶವು ಜಲಸಂಪನ್ಮೂಲದ ಪ್ರಮುಖ ಅಂಗವಾಗಿತ್ತು. ಒಂದು ಊರಿನ ಹವಾಮಾನ ವ್ಯವಸ್ಥೆಯನ್ನು ಸುಸ್ಥಿತಿಯಲ್ಲಿಡಲು ಈ ಜಲಾನಯನ ಪ್ರದೇಶದ ಸುಸ್ಥಿರತೆ ಅತ್ಯವಶ್ಯಕ. ಜಲಾನಯನ ಪ್ರದೇಶವು ವಿಶಾಲವಾಗಿದ್ದು, ಸಮೃದ್ಧವಾಗಿದ್ದರೆ ಸುತ್ತಲಿನ ಹಸುರು ಹೊದಿಕೆಯೂ ಸುಸ್ಥಿರವಾಗಿರುತ್ತಿತ್ತು. ನೀರಿನ ಕೊರತೆ ಉಂಟಾಗುತ್ತಿರಲಿಲ್ಲ. ವಾತಾವರಣವು ತಂಪಾಗಿರುತ್ತಿತ್ತು. ತೋಟಗದ್ದೆಗಳಲ್ಲಿ ಫಸಲು ಹೆಚ್ಚಾಗಿ ಉತ್ಪಾದಕತೆ ಹೆಚ್ಚುತ್ತಿತ್ತು. ಜೀವವೈವಿಧ್ಯ ಅಧಿಕವಾಗಿರುತ್ತಿತ್ತು. ಆಹಾರದ ಕೊರತೆ ಯಾವ ಜೀವಿಗಳಿಗೂ ಉಂಟಾಗುತ್ತಿರಲಿಲ್ಲ.

## ಕೆರೆ ಅಂಗಳ

ಕೆರೆಯ ಸುತ್ತಲೂ ಏರಿಯನ್ನು ನಿರ್ಮಿಸಿದಾಗ ಮಧ್ಯಭಾಗವನ್ನೇ ಕೆರೆಯ ಅಂಗಳವೆಂದು ಕರೆಯುತ್ತಾರೆ. ಈ ಮಧ್ಯಭಾಗದ ಮಣ್ಣು ಜಿಗುಟಾಗಿದ್ದು, ಜೇಡಿ ಮಣ್ಣಾಗಿದ್ದರೆ ಒಳ್ಳೆಯದು. ಆಗ ಕೆರೆಗೆ ಬರುವ ನೀರು ಇಂಗದೇ ಅಲ್ಲಿಯೇ ಸಂಗ್ರಹವಾಗುತ್ತದೆ. ಜೇಡಿಮಣ್ಣು ಇಲ್ಲದಿದ್ದರೆ ನೀರೆಲ್ಲಾ ಇಂಗುತ್ತಾ ಕೆರೆ ಬೇಗ ಖಾಲಿಯಾಗುತ್ತದೆ. ಹೂಳು ನಿಂತಮೇಲೆ ಕೆರೆಯಲ್ಲಿ ನೀರೂ ನಿಲ್ಲತೊಡಗುತ್ತದೆ. ಕೆರೆಯಲ್ಲಿ ನೀರು ನಿಂತರೆ ಮಾತ್ರ ಜೀವಿಸಂಚಲನೆ ಪ್ರಾರಂಭವಾಗುತ್ತದೆ. ಇದನ್ನು ಮೂರು ವಲಯಗಳಾಗಿ ವಿಂಗಡಿಸಬಹುದು. ಲಿಟ್ಟೋರಲ್

ವಲಯ; ಅಂದರೆ ಕೆರೆಯ ಅಂಚಿನ ಪ್ರದೇಶ. ಇದು ದಡದ ಮೇಲಿನಿಂದ ತಳದವರೆಗೂ ಇರುವ ಪ್ರದೇಶ. ಬೇರಿರುವ ಸಸ್ಯಗಳು ಹೆಚ್ಚಾಗಿರುತ್ತವೆ. ಕಪ್ಪೆಗಳು, ನೀರುಹಾವುಗಳು, ಅನೇಕ ಕೀಟರಾಶಿಗಳು, ಲಾರ್ವಾಗಳು ಇಲ್ಲಿ ಜೀವಿಸಿರುತ್ತವೆ. ಕೆರೆಯ ಆರೋಗ್ಯ, ಈ ಮೂಲಕ ಪರಿಸರದ ಆರೋಗ್ಯವನ್ನು ನಿರ್ಧರಿಸುವ ತಾಣವಿದು. ಲಿಮ್ನೆಟಿಕ್ ವಲಯ: ಅಂದರೆ ಸೂರ್ಯನ ಬೆಳಕು ಪ್ರವೇಶಿಸುವವರೆಗಿನ ಆಳದವರೆಗೆ ವ್ಯಾಪಿಸಿದ ಪ್ರದೇಶ. ಇಲ್ಲಿ ಡಯಾಟಂ ಪಾಚಿಗಳು, ಹಸಿರು ಪಾಚಿ, ನೀಲಿ ಹಸಿರು ಪಾಚಿ, ಸೂಕ್ಷ್ಮ ಸಂಧಿಪದಿಗಳು, ಪ್ರೊಟೋಜೋವಾಗಳು, ದೊಡ್ಡ ಮೀನುಗಳು, ಉಭಯಜೀವಿಗಳು ಇರುತ್ತವೆ. ಪ್ರೊಫೌಂಡಲ್ ವಲಯ: ಅತ್ಯಂತ ತಳಭಾಗವಿದು. ಇಲ್ಲಿಗೆ ಸೂರ್ಯನ ಬೆಳಕು ಬೀಳುವುದಿಲ್ಲ. ವಿಘಟಕ ಜೀವಿಗಳು ವಾಸಿಸುತ್ತವೆ.

ಕೆರೆಯಂಗಳದ ನಿರ್ಮಾಣವನ್ನು ಆಯಾ ಭೂಪ್ರದೇಶಕ್ಕೆ ಅನುಗುಣವಾಗಿ ರೂಪಿಸುವುದೂ ಉಂಟು. ಮಲೆನಾಡಿನಲ್ಲಿ ಕೆರೆಗಳು ಮಧ್ಯದಲ್ಲಿ ಆಳವಾಗಿರುತ್ತವೆ. ಕೆರೆ ಏರಿಯ ಆಚೆ ಈಚೆ ಎರಡೂ ತುದಿಗಳಲ್ಲಿ ನೀರು ಹೊರಹೋಗಲು ಕೋಡಿಯ ವ್ಯವಸ್ಥೆಯಿರುತ್ತದೆ. ಬಯಲುಸೀಮೆಯಲ್ಲಿ ಕೆರೆಯಂಗಳದ ಸುತ್ತಲೂ ಕುದುರೆ ಲಾಳದ ಆಕಾರದಲ್ಲಿ ತಗ್ಗನ್ನು ಮಾಡುತ್ತಾರೆ. ಕೆಲವು ಕಡೆ ನಾಲ್ಕೂ ದಿಕ್ಕುಗಳಲ್ಲಿ ಹೊಂಡ ತೋಡಿರುತ್ತಾರೆ. ಕೆಲವು ಪ್ರದೇಶಗಳಲ್ಲಿ ಕೆರೆ ಏರಿಗೆ ಸಮಾನಾಂತರವಾಗಿ ನೀರು ಹರಿಯುವಂತೆ ಮಾಡಿರುತ್ತಾರೆ. ಮಳೆಯ ಪ್ರಮಾಣವನ್ನು ಅನುಸರಿಸಿ ಕೆರೆಯ ಆಳ, ಏರಿಯ ನಿರ್ಮಾಣ ಮಾಡುತ್ತಾರೆ. ಕೆಲವು ಬೃಹದಾಕಾರದ ಕೆರೆಗಳ ಮಧ್ಯೆ ತಂಗುದಾಣ, ದೇವಸ್ಥಾನಗಳನ್ನು ನಿರ್ಮಿಸಿರುತ್ತಾರೆ. ಒಟ್ಟಾರೆ ಆರು ಆಕಾರಗಳಲ್ಲಿ ಕೆರೆಗಳನ್ನು ವಿಂಗಡಿಸಬಹುದು. ವೃತ್ತಾಕಾರ, ಚೌಕಾಕಾರ, ಆಯತಾಕಾರ, ಅರ್ಧಚಂದ್ರಾಕಾರ, ವಕ್ರಾಕಾರ ಹಾಗೂ ತ್ರಿಕೋನಾಕಾರ. ಆದರೆ ಆಯತಾಕಾರದ ಕೆರೆಗಳೇ ಹೆಚ್ಚಾಗಿವೆ.

## ಜಲಾನಯನ ಪ್ರದೇಶದ ನಿರ್ವಹಣೆ ಹಾಗೂ ಬರ ಮತ್ತು ಪ್ರವಾಹಗಳನ್ನು ಎದುರಿಸುವಿಕೆ

ಜಲಾನಯನ ಪ್ರದೇಶವೊಂದರ ಭೂಮಿ, ನೀರು, ಸಸ್ಯಗಳ ಸಮರ್ಪಕ ಬಳಕೆಯಿಂದ ಗರಿಷ್ಠ ಉತ್ಪಾದನೆ ಪಡೆದು, ನೀರಿನ ಹಾಗೂ ಇತರ ಸಂಪನ್ಮೂಲಗಳ ಲಭ್ಯತೆಯನ್ನು ಹೆಚ್ಚಿಸಿ, ಬರ ಮತ್ತು ಪ್ರವಾಹಗಳನ್ನು ತಡೆಗಟ್ಟುವ ಕ್ರಮವೇ ಜಲಾನಯನ ಪ್ರದೇಶದ ನಿರ್ವಹಣೆ. ಇದರ ಮುಖ್ಯ ಉದ್ದೇಶ ನೈಸರ್ಗಿಕ ಸಂಪನ್ಮೂಲಗಳ ಅಭಿವೃದ್ಧಿ ಮತ್ತು ಸಮರ್ಥ ಉತ್ಪಾದನೆ, ಪಾರಿಸರಿಕ ಸಮತೋಲನವನ್ನು ಕಾಪಾಡುವುದು, ಭೂಮಿಯ ಉತ್ಪಾದಕತೆಯ ಹೆಚ್ಚಳ, ಈ ಮೂಲಕ ಸ್ಥಳೀಯ ಸಮುದಾಯಗಳಗೆ ಉದ್ಯೋಗಾವಕಾಶಗಳನ್ನು ಹೆಚ್ಚಿಸುವುದು–ಹೀಗೆ ಆಹಾರ, ಮೇವು, ಉರುವಲು, ಮರಮಟ್ಟು, ಉಪಉತ್ಪನ್ನಗಳನ್ನು ಪೂರೈಸಲು ಈ ಪ್ರದೇಶದ ಭೂ ಬಳಕೆ ಮಾಡುವುದು. ಇಸವಿ 1983ರಲ್ಲಿ ಪ್ರಾರಂಭವಾದ ಈ ಚಟುವಟಿಕೆಗಳು, ಅನಂತರದ ಏಳನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಕೊಂಡಿತು. ಎಂಟನೆಯ ಪಂಚವಾರ್ಷಿಕ ಯೋಜನೆಯಲ್ಲಿ [1992–1997] ಕರ್ನಾಟಕದಲ್ಲಿ 11 ಜಿಲ್ಲೆಗಳಲ್ಲಿ ಅಭಿವೃದ್ಧಿ ಕಾರ್ಯ ನಡೆಯಿತು. ಕರ್ನಾಟಕದ ಜಲಾನಯನ ಪ್ರದೇಶದ ವ್ಯಾಪ್ತಿ 19.05 ಮಿಲಿಯನ್ ಹೆಕ್ಟೇರ್ ಪ್ರದೇಶ. ಅದರಲ್ಲಿ ಅಭಿವೃದ್ಧಿಗೆ ಒಳಪಟ್ಟ ಪ್ರದೇಶ ಕೇವಲ 0.25 ಮಿಲಿಯನ್

ಹೆಕ್ಟೇರ್ ಪ್ರದೇಶ ಮಾತ್ರ!! ಅಭಿವೃದ್ಧಿಯಾಗಿದ್ದು 0.001 ಮಿಲಿಯನ್ ಹೆಕ್ಟೇರ್ ಪ್ರದೇಶ ಮಾತ್ರ!!! ಕಾರಣ ಸರ್ಕಾರವೊಂದೇ ಎಲ್ಲವನ್ನೂ ಮಾಡುತ್ತೇನೆ ಎಂದು ಹೊರಟಿತ್ತು. ಫಲತಾಂಶವು ಪಾಠ ಕಲಿಸಿತ್ತು.

ಜಲಾನಯನ ಅಭಿವೃದ್ಧಿ ಯೋಜನೆಯು ಕೇವಲ ಸರ್ಕಾರದ ಆದೇಶದಿಂದಾಗುವ ಕೆಲಸವಲ್ಲ. ಕೃಷಿ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ತಾಂತ್ರಿಕತೆ, ಪರಿಸರದ ಜ್ಞಾನ, ಪಾರಿಸರಿಕ ಹಾಗೂ ಭೌಗೋಳಿಕ ಮಾಹಿತಿ, ಹವಾಮಾನ ಹಾಗೂ ಮಳೆ ಪ್ರಮಾಣದ ಅಂಕಿಅಂಶಗಳು, ಮಾನವ ಸಂಪನ್ಮೂಲ ಹೀಗೆ ಅನೇಕ ವಿಷಯಗಳ ಪರಿಣತರು ಬೇಕು. ತೋಟಗಾರಿಕೆ, ಅರಣ್ಯ, ಮೀನುಗಾರಿಕೆ, ನೀರಾವರಿ, ಕೃಷಿ ಇಲಾಖೆಗಳ ಸಹಯೋಗ ಬೇಕು. ಸ್ವಯಂಸೇವಾ ಸಂಸ್ಥೆಗಳು, ಶೈಕ್ಷಣಿಕ, ಸಂಶೋಧನಾ ಸಂಸ್ಥೆಗಳು, ಸಮಾಜಸೇವಕರು ಹಾಗೂ ಸಮುದಾಯಗಳ ಸಹಕಾರ ಬೇಕು. ಇದನ್ನು ಯೋಜನಾ ತಜ್ಞರು ರೂಪಿಸಿದರು. ಕೇಂದ್ರದಿಂದ ತಾಲ್ಲೂಕು ಪಂಚಾಯ್ತಿ, ಜಿಲ್ಲಾ ಪರಿಷತ್ ಮಟ್ಟಕ್ಕೆ ಅಧಿಕಾರ ಹಸ್ತಾಂತರ ಮಾಡಿದರು. ಇಷ್ಟಾದರೂ ಸ್ಥಳೀಯ ರಾಜಕಾರಣಿಗಳ ಹಾಗೂ ಶಾಸಕರ ಕೈಯಲ್ಲಿ ಈ ಯೋಜನೆ ಸಿಲುಕಿ ನಲುಗುತ್ತಿದೆ.

ನಬಾರ್ಡ್ ಜಲಾನಯನ ಅಭಿವೃದ್ಧಿ, ಸುಜಲ ಜಲಾನಯನ ಅಭಿವೃದ್ಧಿ, ಜಲಸಂವರ್ಧನಾ ಯೋಜನೆ ಹೀಗೆ ಅನೇಕ ಕಾರ್ಯಕ್ರಮಗಳು ಕಳೆದ 20 ವರ್ಷಗಳಿಂದ ನಡೆಯುತ್ತಲೇ ಬರುತ್ತಿವೆ.

* ಸವಕಳಿಯನ್ನು ತಡೆಯಲು ಸಮಪಾತಳಿ ಟ್ರಂಚುಗಳ ಹಾಗೂ ಸಮಪಾತಳಿ ಬದುಗಳ ನಿರ್ಮಾಣ

* ಕಲ್ಲುಗಳ ಬಾಂದಾರುಗಳ ರಚನೆ, ಗಿಡಮರಗಳನ್ನು ಹಳ್ಳಗಳ ಪಕ್ಕ, ಕೆರೆ–ಕಾಲುವೆಗಳ ಪಕ್ಕ ನೆಡುವುದು, ಹೊಂಡಗಳ ನಿರ್ಮಾಣ.

* ಪರ್ಯಾಯ ಶಕ್ತಿ ಆಕರಗಳಾದ ಜೈವಿಕ ಇಂಧನ ಘಟಕ, ಸೋಲಾರ್, ತ್ಯಾಜ್ಯಗಳಿಂದ ವಿದ್ಯುತ್ ತಯಾರಿ ಮುಂತಾದವುಗಳಿಗೆ ಸಹಕಾರ.

ಇದಕ್ಕೊಂದು ಉದಾಹರಣೆ ಬೈಫ್ ಗ್ರಾಮೀಣಾಭಿವೃದ್ಧಿ [BAIF-K] ಸಂಸ್ಥೆಯ ಹಸಿರು ಹಬ್ಬ. ಇಸವಿ 1999ರಿಂದ ಸುಮಾರು ಐದು ವರ್ಷಗಳ ಕಾಲ ಹುಬ್ಬಳ್ಳಿ, ಧಾರವಾಡ, ಉತ್ತರಕನ್ನಡ, ತುಮಕೂರು ಜಿಲ್ಲೆಗಳ 100ಕ್ಕೂ ಹೆಚ್ಚು ಹಳ್ಳಿಗಳಲ್ಲಿ ಹಸಿರು ಹಬ್ಬವನ್ನು ಬೈಫ್ ಆಚರಿಸಿದೆ. ಈ ಮೂಲಕ ಜಲಾನಯನ ಪ್ರದೇಶಗಳಲ್ಲಿ 10 ಲಕ್ಷಕ್ಕೂ ಹೆಚ್ಚು ಸಸಿಗಳನ್ನು ನೆಟ್ಟು ಹಸಿರು ಕವಚ ತೊಡಿಸಿದೆ. ಬೋಳುಗುಡ್ಡಗಳನ್ನು, ಬರಡು ನೆಲವನ್ನು ಫಲವತ್ತಾಗಿಸಿದೆ. ಪರಿಣಾಮ ಇಸವಿ 2009ರ ಹೊತ್ತಿಗೆ ಅಂತರ್ಜಲ ಮಟ್ಟ ಹಿಂದಿಗಿಂತಲೂ ಎರಡು ಮೀಟರ್ ಹೆಚ್ಚಾಗಿದೆ. ಮಳೆಯಾಗುವ ದಿನಗಳ ಸಂಖ್ಯೆ 55 ದಿನಗಳಿಂದ 85 ದಿನಗಳಿಗೆ ಏರಿದೆ. ಎಂತಹ ಬರವನ್ನಾದರೂ ಎದುರಿಸಬಲ್ಲೆವು ಎನ್ನುವ ಧೈರ್ಯ ಅಲ್ಲಿನ ಜನರಲ್ಲಿ ಮೂಡಿದೆ. ಇದು ಅಲ್ಲಿನ ಜನರೇ ಬೈಫ್ ಪ್ರೇರೇಪಣೆಯಿಂದ ಮಾಡಿದ ಕೆಲಸ. ಜನರ ಸಹಭಾಗಿತ್ವ ಸಿಕ್ಕರೆ ಹವಾಮಾನದಲ್ಲಾಗುತ್ತಿರುವ ಏರುಪೇರುಗಳನ್ನು ನಿಧಾನವಾಗಿಯಾದರೂ ನಿಯಂತ್ರಿಸಬಹುದು ಎನ್ನಲು ಇದೊಂದು ಮಾದರಿ. ಈಗ ರಾಜ್ಯದಾದ್ಯಂತ ಅನೇಕ ಸಂಸ್ಥೆಗಳು ಹಸಿರು ಹಬ್ಬವನ್ನು ಮುಂದುವರೆಸುತ್ತಿವೆ. ಧಾರವಾಡದ ಸ್ಕೋಪ್ ಸಂಸ್ಥೆಯು

'ಅಗಿಹಬ್ಬ' ಎನ್ನುವ ಹೆಸರಿನಲ್ಲಿ ಕಳೆದ ಎರಡು ವರ್ಷಗಳಿಂದ ಹಸುರು ಹಚ್ಚುವ ಕೆಲಸ ಮಾಡುತ್ತಿದೆ. ತುಮಕೂರಿನ ಸಿದ್ಧಗಂಗಾ ಮಠವು ಲಕ್ಷ ಲಕ್ಷ ಗಿಡಗಳನ್ನು ನೆಡುತ್ತಿದೆ. ಗದಗದ ಕಪ್ಪತಗುಡ್ಡದಲ್ಲಿ ನಂದಿವೇರಿಮಠದ ಶಿವಕುಮಾರಸ್ವಾಮಿಗಳು ಗಿಡಗಳನ್ನು ಹಚ್ಚುತ್ತಿದ್ದಾರೆ. ಹೀಗೆ ಹಸುರು ಹೆಚ್ಚಿದಲ್ಲೆಲ್ಲಾ ಸಿಕ್ಕ ಸಕಾರಾತ್ಮಕ ಪರಿಣಾಮಗಳು ಎಲ್ಲರಿಗೂ ಕಾಣುತ್ತಿವೆ. ರಭಸದಿಂದ ಹರಿವ ನೀರು ಉಂಟುಮಾಡುತ್ತಿದ್ದ ಕೊರಕಲುಗಳು, ಸವಕಳಿ ಇವೆಲ್ಲಾ ನಿಂತಿದೆ. ಒಮ್ಮೆಲೇ ನೀರೆಲ್ಲಾ ನುಗ್ಗಿ ಉಂಟಾಗುತ್ತಿದ್ದ ಪ್ರವಾಹ ಈಗಿಲ್ಲ. ನದಿಯೋ, ಹಳ್ಳವನ್ನೋ ಸೇರಿಹೋಗುತ್ತಿದ್ದ ನೀರು ಇಂದು ಆಯಾ ಪ್ರದೇಶಗಳಲ್ಲೇ ಉಳಿಯುತ್ತಿದೆ. ಬರಡುಭೂಮಿಯಲ್ಲಿ ಜನರು ಬೀಳುಬಿಟ್ಟ ಭೂಮಿಯಲ್ಲಿ ಹಸುರು ಹೆಚ್ಚಿದ್ದಕ್ಕಾಗಿ ಕಾಡಿನ ಮೇಲಿನ ಅವಲಂಬನೆ ಕಡಿಮೆಯಾಗಿದೆ. ಉಪ ಉತ್ಪನ್ನಗಳು ಸಿಗುತ್ತಿವೆ. ನೆಲ ಫಲವತ್ತಾದ ಪರಿಣಾಮ ಇಳುವರಿ ಹೆಚ್ಚುತ್ತಿದೆ. ಜನರ ಜೀವನಮಟ್ಟದ ಸುಧಾರಣೆಯಾಗಿದೆ. ಜನರ ಅತಿಯಾದ ಆಸೆಗೆ ನಾಶವಾಗಿದ್ದ ಪ್ರದೇಶದ ನಿರ್ವಹಣೆಯಿಂದ ಉಂಟಾದ ಸುಧಾರಣೆಗಳಿವು. ಈ ಸುಧಾರಣೆಗಳೇ ಹವಾಮಾನ ವೈಪರೀತ್ಯಗಳನ್ನು ತಡೆಯುವ ಮಾರ್ಗವಾಗಿವೆ. ವಾರ್ಷಿಕ ಮಣ್ಣು ಕೊಚ್ಚಣೆಯ ಪ್ರಮಾಣ 11.609 ಟನ್‌ನಿಂದ 8.500 ಟನ್‌ಗೆ ಇಳಿದಿದೆ.

## ಕೆರೆಗಳ ಪುನರುಜ್ಜೀವನ ಹಾಗೂ ತಂಪಾದ ಹಳ್ಳಿಗಳು

ಬ್ರಿಟಿಷರ ಕಾಲದಿಂದಲೂ ನಿರ್ಲಕ್ಷ್ಯಕ್ಕೆ ಒಳಗಾದ ಕೆರೆಗಳು ಸ್ವಾತಂತ್ರ್ಯಾನಂತರ ಇನ್ನಷ್ಟು ಅವನತಿ ಕಂಡವು. ಜಲಾನಯನ ಪ್ರದೇಶದಲ್ಲಾದ ಕಾಡುನಾಶದಿಂದ ಕೆರೆಗಳಲ್ಲಿ ಹೂಳು ತುಂಬಿತು. ಜಲಕಳೆಗಳು ಹೆಚ್ಚಿದವು. ಒತ್ತುವರಿಯಾಗತೊಡಗಿತು. ಮೊದಲು ಜಲಾನಯನ ಪ್ರದೇಶಗಳಲ್ಲಿ ಜನವಸತಿ ಪ್ರಾರಂಭವಾಗಿ ಕೊನೆಗೆ ಕೆರೆಗಳನ್ನೇ ಆಪೋಶನ ತೆಗೆದುಕೊಂಡರು. ಕೆರೆ ತೀರಗಳು ಕಸದ ತೊಟ್ಟಿಯಾಗಿ ರೋಗರುಜಿನಗಳ ತಾಣಗಳಾದವು. ಹೀಗೆ ಕರ್ನಾಟಕದಲ್ಲಿ ನಾಶವಾದ ಕೆರೆಗಳ ಸಂಖ್ಯೆ 5,000ಕ್ಕೂ ಹೆಚ್ಚು. ಆಧುನಿಕ ಭಾರತದ ಪ್ರಗತಿಗೆ ಜಲಾಶಯಗಳೇ ದೇವಾಲಯಗಳು ಎಂದು ಸ್ವಾತಂತ್ರ್ಯಾನಂತರ ಬಂದ ಸರ್ಕಾರ ಪರಿಗಣಿಸಿತು. ಹೀಗಾಗಿ ಭಾರಿ ಭಾರಿ ಜಲಾಶಯಗಳು ನಿರ್ಮಾಣಗೊಂಡವು. ಇವುಗಳ ಕಾಲುವೆಗಳು ಕೆರೆಗಳನ್ನು ತುಂಬಿಸುವ ಕ್ರಮವನ್ನು ಕೈಗೊಳ್ಳಲಿಲ್ಲ. ಕೆರೆ ದುರಸ್ಥಿಗಾಗಿ ಇದ್ದ ವಿಶೇಷ ದತ್ತಿಗಳೆಲ್ಲಾ ಅನೂರ್ಜಿತಗೊಂಡವು. ಕೆರೆಗಳು ಸಣ್ಣ ನೀರಾವರಿ ಇಲಾಖೆಗೆ ಸೇರಿದವು. ಭಾರತದಲ್ಲಿದ್ದ ಹಳೆಯ ಆಚರಣೆಗಳು, ಪದ್ಧತಿಗಳೆಲ್ಲಾ ಅವೈಜ್ಞಾನಿಕ ಎಂದು ಪರಿಗಣಿಸಲಾಯಿತು. ಇಸವಿ 1970ರ ದಶಕದಲ್ಲಿ ಉಂಟಾದ ಬರ ಪರಿಸ್ಥಿತಿಯಿಂದಾಗಿ ಸರ್ಕಾರ ಕೆರೆಗಳ ಪುನರುಜ್ಜೀವನದ ಕುರಿತು ಚಿಂತಿಸಿತು. ದೊಡ್ಡದಾದ ಜಲಾಶಯಗಳ ನಿರ್ವಹಣೆಗಿಂತಲೂ ಕೆರೆಗಳಂತಹ ವಿಕೇಂದ್ರೀಕೃತ ಚಿಕ್ಕ ಜಲಸಂಗ್ರಹಾಗಾರಗಳು ಹೆಚ್ಚು ಉಪಯುಕ್ತವೆಂದು ಜನರಿಗೆ ಹಾಗೂ ಸರ್ಕಾರಕ್ಕೆ ತಿಳಿಯಿತು. ಪುಟ್ಟ ಪಟ್ಟ ಸಮುದಾಯಗಳ ಸಂಪನ್ಮೂಲವಾದ ಕೆರೆಗಳ ಮಹತ್ವ ಎಲ್ಲರಿಗೂ ಅರಿವಾಯಿತು. ಕೆರೆಗಳಿಂದಾಗಿ ಒಂದೊಂದೇ ಹಳ್ಳಿಗಳು ಸುಸ್ಥಿರವಾದರೆ ಕರ್ನಾಟಕದ ಒಟ್ಟಾರೆ ಜೀವನಮಟ್ಟ ಸಂಪೂರ್ಣ ಸುಧಾರಣೆಯಾಗುತ್ತದೆ ಎಂಬುದೂ ತಿಳಿಯಿತು. ಕೆರೆಗಳಲ್ಲಿ ಕಳೆಗಳ ನಿರ್ಮೂಲನೆ, ಹೂಳೆತ್ತುವಿಕೆ, ಸುತ್ತಲೂ ಬೇಲಿ ಹಾಕಿ ತ್ಯಾಜ್ಯಗಳನ್ನು ಸುರಿಯದಂತೆ ತಡೆಯುವಿಕೆ ಹೀಗೆ ಹಲವಾರು ಸಾಧ್ಯತೆಗಳ ಕುರಿತು ಯೋಜನೆಗಳನ್ನು ಸರ್ಕಾರ ರೂಪಿಸತೊಡಗಿತು. ಪ್ರತಿವರ್ಷ ಬರ ಪರಿಹಾರಕ್ಕೆಂದು ವಿನಿಯೋಗಿಸುವ ಅರ್ಧದಷ್ಟು ಹಣ ಕೆರೆಗಳ ಪುನರುಜ್ಜೀವನಕ್ಕೆ

ಸಾಕು ಎಂಬುದು ತಿಳಿಯಿತು. ಇದೇ ಸಮಯಕ್ಕೆ ಅಣೆಕಟ್ಟುಗಳ ನಿರ್ಮಾಣಕ್ಕೆ ಜನರ ಪ್ರತಿರೋಧ ಹೆಚ್ಚಿತು.

ಹೀಗಿರುವಾಗಲೇ ವಿಶ್ವಬ್ಯಾಂಕ್ ಧನಸಹಾಯ ಮಾಡಲು ಬಂದಿತು. ಇಸವಿ 1979–80ರಲ್ಲಿ ಮೊದಲನೆಯದಾಗಿ 6–9 ಕೋಟಿ ರೂಪಾಯಿಗಳು 165 ಕೆರೆಗಳಿಗಾಗಿ ಕರ್ನಾಟಕ ಸರ್ಕಾರ ಪಡೆದುಕೊಂಡಿತು. ಆದರೆ ಕೇವಲ 65 ಕೆರೆಗಳನ್ನು ಮಾತ್ರ ಸರಿಪಡಿಸಲು ಸಾಧ್ಯವಾಯಿತು. ಇಸವಿ 1988–89ರಲ್ಲಿ ಮತ್ತೆ 14 ಕೆರೆಗಳನ್ನು ಕೈಗೆತ್ತಿಕೊಂಡಿತು. ಹೀಗೆ ಪ್ರಾರಂಭವಾದ ಕಾರ್ಯಕ್ರಮ ಇಸವಿ 2012ರ ಹೊತ್ತಿಗೆ 3,710 ಕೆರೆಗಳ ಪುನರುಜ್ಜೀವನ ಮಾಡಿದೆ. ಇದಕ್ಕಾಗಿ ಸುಮಾರು 612.16 ಕೋಟಿ ರೂಪಾಯಿಗಳು ಖರ್ಚಾಗಿವೆ. 11.6 ಲಕ್ಷ ಜನರು ಇದರಲ್ಲಿ ಸಹಭಾಗಿಗಳಾಗಿದ್ದಾರೆ. ಇಸವಿ 2010ರಲ್ಲಿ 567 ಕೆರೆಗಳಲ್ಲಿ ಮೀನುಗಾರಿಕೆಗೆ ಅವಕಾಶ ನೀಡಲಾಗಿತ್ತು. ಅದರಿಂದ ಬಂದ ಆದಾಯ ಎರಡು ಕೋಟಿ ರೂಪಾಯಿಗಳು. 1,917 ಕೆರೆಗಳಲ್ಲಿ ಹಿಂದಿಗಿಂತಲೂ ಮೂರುಪಟ್ಟು ಹೆಚ್ಚು ನೀರು ಸಂಗ್ರಹವಾಗಿತ್ತು. ರೈತರು ಎರಡನೇ ಬೆಳೆಯನ್ನು ತೆಗೆಯಲು ಅನುಕೂಲವಾಗಿತ್ತು. ಹೀಗೆ ಸಿಕ್ಕ ಆದಾಯದ ಪ್ರಮಾಣ ಸುಮಾರು 23 ಕೋಟಿ ರೂಪಾಯಿಗಳು. ಜಲಾನಯನ ಪ್ರದೇಶದ ಬದಲಾವಣೆ, ಕೆರೆಯಲ್ಲಿ ನೀರು ನಿಂತಿದ್ದರಿಂದ ಹೆಚ್ಚಾದ ಅಂತರ್ಜಲ ಹೆಚ್ಚಳ ಹೀಗೆ ಪಾರಿಸರಿಕ ಬದಲಾವಣೆಗಳನ್ನು ಇನ್ನೂ ದಾಖಲಿಸಿಲ್ಲ. ಆದರೆ ಆದಾಯದಲ್ಲಾದ ಬದಲಾವಣೆಯು ಮತ್ತಷ್ಟು ಪರಿಸರಪೂರಕ ಚಟುವಟಿಕೆಗಳನ್ನು ಕೈಗೊಳ್ಳುವಂತೆ ಜನರನ್ನು ಪ್ರೇರೇಪಿಸುತ್ತದೆ. ಜೀವನಮಟ್ಟದ ಸುಧಾರಣೆಯಾಗುತ್ತದೆ.

ಇದಕ್ಕೂ ಆಕ್ಷೇಪಗಳು ಇಲ್ಲವೆಂದಲ್ಲ. ಕೆರೆಗಳೆಲ್ಲಾ ಸರ್ಕಾರದ ಸ್ವಾಮ್ಯದಲ್ಲೇ ಇದ್ದ ಕಾರಣ ಹಳ್ಳಿಯ ಜನರಿಗೆ ಬೇಕಾದಂತೆ ಕೆಲಸ ನಡೆದಿಲ್ಲ ಎನ್ನುವ ಆರೋಪಗಳಿವೆ. ಅಂದಾಜು ಮಾಡಿದ ಹಣಕ್ಕಿಂತ 10 ಪಟ್ಟು ಹೆಚ್ಚು ಅಂದರೆ ಒಂದು ಕೆರೆಗೆ 3,02,000 ರೂಪಾಯಿಗಳ ಬದಲು 34,00,000 ರೂಪಾಯಿಗಳು ಖರ್ಚಾಗಿವೆ. ಬರಪೀಡಿತ ಪ್ರದೇಶಗಳಿಗಿಂತಲೂ ಮಲೆನಾಡಿನ ಕೆರೆಗಳಿಗೆ ಆದ್ಯತೆ ನೀಡಿದೆ. ಕೆರೆ ಕಾಲುವೆಗಳಿಗೆ, ತೂಬು, ಕೋಡಿ ಎಲ್ಲಾ ಕಡೆ ಕಬ್ಬಿಣ ಮತ್ತು ಸಿಮೆಂಟ್‌ಗಳ ಬಳಕೆ ಹೆಚ್ಚಿದೆ. ಕಟ್ಟೆ, ಕುಂಟೆಗಳ ದುರಸ್ತಿ ಮಾಡುತ್ತಿಲ್ಲ. ಹೀಗೆ ಆಕ್ಷೇಪಣೆಗಳು ಸಾಕಷ್ಟಿವೆ. ಇದೆಲ್ಲದರ ಮಧ್ಯೆಯೂ ಸುಧಾರಣೆಗಳ ಸಹಿತ ಕೆರೆಗಳ ಪುನರುಜ್ಜೀವನ ಕಾರ್ಯ ನಡೆಯಬೇಕಿದೆ.

ಕೆರೆಯೊಂದರ ಪುನರುಜ್ಜೀನವೆಂದರೆ ಕೆರೆಯ ಹೂಳು ತೆಗೆಯುವುದಷ್ಟೇ ಅಲ್ಲ, ಏರಿ ಸಂರಕ್ಷಣೆ, ತೂಬಿನ ಸರಿಪಡಿಸುವಿಕೆ, ಕೋಡಿ ಹಾಗೂ ಕಾಲುವೆಗಳ ದುರಸ್ತಿ ಇವೆಲ್ಲಾ ಸಹ ಮುಖ್ಯ.

ಕೆರೆಯಂಗಳದಿಂದ ಎತ್ತಿದ ಹೂಳನ್ನು ಸಾಮಾನ್ಯವಾಗಿ ಕೆರೆಯ ಅಕ್ಕಪಕ್ಕದಲ್ಲೇ ಹಾಕುತ್ತಾರೆ. ಆಗಲೂ ಸಹ ಹೂಳು ಮತ್ತೆ ಕೆರೆಯನ್ನು ಸೇರುತ್ತದೆ. ಹೂಳ ಹೊರಹಾಕಲು ಜಾಗವೇ ಇಲ್ಲ ಎಂಬುದು, ತುಂಬಾ ದೂರ ಸಾಗಿಸಲು ಖರ್ಚು ಹೆಚ್ಚಾಗುತ್ತದೆ ಎಂಬುದು ಹೂಳೆತ್ತುವ ಗುತ್ತಿಗೆದಾರರ ಅಳಲು. ಹೀಗೆ ಪೂರ್ತಿ ಹೂಳೆತ್ತದೇ ಇರುವುದು, ತೂಬು ನಿರ್ಮಿಸುವಾಗ ಅದ್ದ ಕಾಲುವೆಗೆ ಕಳಪೆ ಸಿಮೆಂಟ್ ಬಳಕೆ ಇವನ್ನೆಲ್ಲಾ ಹಳ್ಳಿಯ ಸಮುದಾಯಗಳು ಆಗಾಗ ಎಚ್ಚರಿಕೆಯಿಂದ ಗಮನಿಸಿ ಸರಿಪಡಿಸಬೇಕು. ಆದರೆ ಹಳ್ಳಿಯ ರಾಜಕೀಯ ಇವನ್ನೆಲ್ಲಾ ಮಾಡದೇ ಮುಂದಿನ ಪೀಳಿಗೆಗೆ ಅನ್ಯಾಯ ಮಾಡುತ್ತಿದೆ.

## ಕೆರೆ ತಂದ ಸೌಭಾಗ್ಯ

ಶಿವಮೊಗ್ಗ ಜಿಲ್ಲೆಯ ರಾಗಿಹೊಸಳ್ಳಿಯ ಕೆರೆ ಐದು ಎಕರೆಗೂ ಹೆಚ್ಚು ವಿಶಾಲವಾಗಿದೆ. ಅಲ್ಲಿ ಯಾರೋ ಗುತ್ತಿಗೆದಾರರು 25 ವರ್ಷಗಳಿಂದ ಮೀನು ಗುತ್ತಿಗೆ ಹಿಡಿಯುತ್ತಿದ್ದರು. ಜಲಸಂವರ್ಧನಾ ಯೋಜನೆಯಲ್ಲಿ ಪುನರುಜ್ಜೀವನ ಪಡೆದ ಕೆರೆಯಲ್ಲಿ ಮೀನು ಸಾಕಾಣಿಕೆಯನ್ನು ಊರಿನ ಶ್ರೀಮಲ್ಲೇಶ್ವರಸ್ವಾಮಿ ಕೆರೆ ಬಳಕೆದಾರರ ಸಂಘ ಕೈಗೊಂಡಿತು. 10 ಸಾವಿರ ಮೀನುಮರಿಗಳನ್ನು 2011ರ ಸೆಪ್ಟೆಂಬರ್‌ನಲ್ಲಿ ಕೆರೆಗೆ ಬಿಡಲಾಯಿತು. ನಿರ್ವಹಣೆಗೆ ಊರಿನ ಮೀನುಗಾರ ಕುಟುಂಬಗಳಿಗೆ ವಹಿಸಲಾಯಿತು. ಗುಳೆ ಹೋಗಿದ್ದ 10 ಕುಟುಂಬಗಳು ಊರಿಗೆ ಮರಳಿದವು. ಏಪ್ರಿಲ್ 2012ರಲ್ಲಿ ಕೆರೆಬೇಟೆ ಎನ್ನುವ ಮೀನು ಬೇಟೆಯಾಡುವ ಕಾರ್ಯಕ್ರಮ ಏರ್ಪಡಿಸಿದರು. ಊರಿನ ಜನ 100 ರೂಪಾಯಿ ಪ್ರವೇಶಧನ ನೀಡಿ ಪಾಲ್ಗೊಂಡರು. ಸಂಘಕ್ಕೆ 52 ಸಾವಿರ ರೂಪಾಯಿಗಳ ಉಳಿತಾಯ. [ವ್ಯವಸ್ಥಾಪನಾ ಖರ್ಚು–ವೆಚ್ಚಗಳು ಕಳೆದು] ಊರಿನವರಿಗೆ ಸಮೃದ್ಧ ಮೀನಿನ ಔತಣ. ಈ ವರ್ಷ 25 ಸಾವಿರ ಮೀನುಮರಿಗಳನ್ನು ಬಿಟ್ಟಿದ್ದಾರೆ. ಶಿವಮೊಗ್ಗ ಜಿಲ್ಲೆಯ ನೆಗವಾಡಿಯ ಶ್ರೀಮಾರಿಕಾಂಬ ಸಂಘಕ್ಕೆ ಮೀನು ಸಾಕಾಣಿಕೆಯಿಂದ ಒಂದು ಲಕ್ಷ ರೂಪಾಯಿಗಳ ಆದಾಯ ಬಂದಿದೆ. ಲಕ್ಕಿನಕೊಪ್ಪದ ಮೀನುಗಾರರ ಕುಟುಂಬಗಳು ಸುಭದ್ರವಾಗಿವೆ.

ಶಿವಮೊಗ್ಗ ಜಿಲ್ಲೆಯ ಹಾರನಹಳ್ಳಿ ಗ್ರಾಮವು ಕುಂಬಾರಿಕೆಗೆ ಪ್ರಸಿದ್ಧ. ಮ್ಯಾಜಿಕ್ ದೀಪದ ಹಣತೆಗಳು, ಮಣ್ಣಿನ ಪಾತ್ರೆಗಳು, ಬಾನಿಗಳು, ಗಣಪತಿ ತಯಾರಿಕೆ ಹೀಗೆ ಜೇಡಿಮಣ್ಣಿನಿಂದ ವೈವಿಧ್ಯಮಯ ವಸ್ತುಗಳನ್ನು ತಯಾರಿಸುತ್ತಾರೆ. ಆದರೆ ಜನರು ಪ್ಲಾಸ್ಟಿಕ್ ಬಳಸಲು ಪ್ರಾರಂಭಿಸಿದ ಮೇಲೆ ಕುಂಬಾರಿಕೆ ಹಿಂದೆ ಬಿತ್ತು. ಜೇಡಿಮಣ್ಣಿನಿಂದಾಗಿ ಕೆರೆಯ ಹೂಳನ್ನು, ಮಡಕೆಯನ್ನು ಸುಡಲು ಕೆರೆಯ ಜೊಂಡುಹುಲ್ಲನ್ನು ಬಳಸುವುದು ನಿಂತಿತು. ಕೆರೆಯು ಹೂಳು, ಕಳೆಗಳಿಂದ ತುಂಬಿತು. ಕೆರೆಯ ಪುನರುಜ್ಜೀವನದೊಂದಿಗೆ ಕುಂಬಾರಿಕೆಗೂ ಚೈತನ್ಯ ನೀಡಲಾಯಿತು. ಅವರ ವಸ್ತುಗಳಿಗೆ ಮಾರುಕಟ್ಟೆ ಮಾಡಿಕೊಡಲಾಯಿತು. ಊರಿನ ಬಹುಸಂಖ್ಯಾತ ಕುಂಬಾರರು ವಾರ್ಷಿಕ 20 ಟ್ರ್ಯಾಕ್ಟರ್ ಹೂಳುಮಣ್ಣು ಬಳಸಿ ವಸ್ತುಗಳನ್ನು ತಯಾರಿಸುತ್ತಿದ್ದಾರೆ.

## ಕೆರೆಗಳ ಜೀವವೈವಿಧ್ಯ

ಕೆರೆಯಲ್ಲಿ ಕಮಲ, ಕೆರೆಹೂವು, ಕೆಸವು, ತಾವರೆ, ಆನೆಜೊಂಡು, ನೀರುಹಿಪ್ಪಲಿ ಹೀಗೆ 40ಕ್ಕೂ ಹೆಚ್ಚು ಜಲಸಸ್ಯಗಳು ಬೆಳೆಯುತ್ತವೆ. ಸಿಗಡಿ, ರೋಹು, ಕಾಟ್ಲ, ಗೆಂಡೆ, ಜಬ್ಬು, ಏಡಿ, ಕಪ್ಪೆ, ನೀರುಹಾವು, ಕೂಮ, ನಳ್ಳಿ ಹೀಗೆ ಪ್ರಾಣಿವೈವಿಧ್ಯಗಳು ಹೆಚ್ಚಿವೆ. ನೀರುಕಾಗೆ, ಬೆಳ್ಳಕ್ಕಿ, ಬಾತುಕೋಳಿ, ನೀರುಕೋಳಿ, ಮಿಂಚುಳ್ಳಿ, ಕೊಳದ ಬಕ ಮುಂತಾದ ಪಕ್ಷಿಗಳು ಕಾಣುತ್ತಿವೆ. ಹೀಗೆ 100ಕ್ಕೂ ಹೆಚ್ಚು ಕಣ್ಣಿಗೆ ಕಾಣುವ ಜೀವವೈವಿಧ್ಯಗಳು ಕೆರೆಯನ್ನು ಅವಲಂಬಿಸಿವೆ. ಇನ್ನೂ ಸೂಕ್ಷ್ಮಜೀವಿಗಳಾದ ಜೇಡ, ಏರೋಪ್ಲೇನ್ ಚಿಟ್ಟೆ, ಕೀಟಗಳು, ಹುಳುಗಳೂ ಲೆಕ್ಕವಿಲ್ಲದಷ್ಟು ಕಾಣಿಸುತ್ತವೆ. ಹವಾಮಾನ ಬದಲಾವಣೆಗೆ ಕಾರಣವಾಗುವ ಇಂಗಾಲವನ್ನು ಹೀರಿಕೊಳ್ಳುವ ಪಾಚಿಗಳಂತೂ ಅಸಂಖ್ಯ. ಹಾಗೇ ತುಂಬಿದ ಕೆರೆಯ ಮೇಲಿನ ಗಾಳಿ–ಕೆರೆಯ ದಂಡೆಯ ಮೇಲಿನ ಅರಳೀಮರಗಳು ಬಿಸಿಲಿನ ತಾಪವನ್ನು ಎದುರಿಸಿ ಹಳ್ಳಿಯನ್ನು ತಂಪಾಗಿಸುತ್ತಿವೆ.

## ಕೆರೆಯ ನೀರಿನ ನಿರ್ವಹಣೆ ಹಾಗೂ ಬರ ಎದುರಿಸುವಿಕೆ

ಕೆರೆಗಳಲ್ಲಿ ಹೂಳು ತುಂಬಿದಂತೆಲ್ಲಾ ಕೃಷಿಗೆ ನೀರು ಸಿಗುವುದು ಕಡಿಮೆಯಾಯಿತು. ಇದರಿಂದ ರೈತರು ತಮ್ಮ ಜಮೀನುಗಳಲ್ಲೇ ಬಾವಿಗಳನ್ನು, ಬೋರ್‌ವೆಲ್‌ಗಳನ್ನು ತೆಗೆಸತೊಡಗಿದರು. ಹೀಗೆ ನೆಲದೊಡಲನ್ನು ಬಗೆದು ನೀರನ್ನು ಮೇಲೆತ್ತಿದಂತೆಲ್ಲಾ ನೀರಿನ ಸಮಸ್ಯೆ ಹೆಚ್ಚಾಗತೊಡಗಿತು. ಅಂತರ್ಜಲ ಬರಿದಾದಂತೆ ಭೂಮಿ ಒಣಗತೊಡಗಿತು. ಭೂಮಿಗೆ ಮೋಡಗಳನ್ನು ಆಕರ್ಷಿಸುವ ಶಕ್ತಿ ಕಡಿಮೆಯಾಯಿತು. ಅರಣ್ಯದ ಮೇಲಿನ ಅವಲಂಬನೆ ಹೆಚ್ಚಾಗಿ ಅರಣ್ಯಗಳು ನಾಶವಾಗತೊಡಗಿದವು. ಹಳೆಯ ಕೃಷಿ ಪದ್ಧತಿಗಳೆಲ್ಲಾ ಕಣ್ಮರೆಯಾಗತೊಡಗಿದವು. ಕೆರೆಯಲ್ಲಿ ತುಂಬಿದಷ್ಟೇ ನೀರನ್ನು ಬಳಸಿ ಊರಿನವರೆಲ್ಲಾ ಬೆಳೆ ಬೆಳೆಯುತ್ತಿದ್ದ ಪದ್ಧತಿಗಳು ಮರೆತೇಹೋಯಿತು. ಜನರಲ್ಲಿ ಒಗ್ಗಟ್ಟು ಇಲ್ಲದಾಯಿತು.

ಚಿತ್ರದುರ್ಗ ಜಿಲ್ಲೆಯ ತಳಕಿನಲ್ಲಿ ನೀರಗಂಟಿಗಳು ಮೂರು ರೀತಿಯಲ್ಲಿ ನೀರು ಹಾಯಿಸುತ್ತಿದ್ದರು. ಕೆರೆಯಲ್ಲಿ ಕಾಲುಭಾಗಕ್ಕಿಂತ ಕಡಿಮೆ ನೀರಿದ್ದರೆ ಹೆಬ್ಬೆರಳು ತೇವಾಂಶ. ಅಂದರೆ ಹೆಬ್ಬೆರಳನ್ನು ಮಣ್ಣಿನಲ್ಲಿ ಊರಿದಾಗ ಉಗುರು ಪೂರ್ತಿ ಒಳಹೋಗುವಷ್ಟು ಒದ್ದೆಯಾಗುವುದು. ಇಂತಹ ಕಾಲದಲ್ಲಿ ಕೇವಲ ತರಕಾರಿಗಳು, ರಾಗಿ, ಕಿರುಧಾನ್ಯಗಳನ್ನು ಬೆಳೆಯಲು ಮಾತ್ರ ಸಾಧ್ಯವಿತ್ತು. ಕಾಲುಭಾಗಕ್ಕಿಂತ ಹೆಚ್ಚು, ಅರ್ಧಭಾಗಕ್ಕಿಂತ ಕಡಿಮೆಯಿದ್ದರೆ ವಾರಾವರ್ತಿ ಜಾರಿಯಾಗುತ್ತಿತ್ತು. ವಾರಾವರ್ತಿ ಎಂದರೆ ವಾರಕ್ಕೊಮ್ಮೆ ಮಾತ್ರ ನೀರು. ಇದು ಹೆಸರು, ಉದ್ದು, ಶೇಂಗಾ, ರಾಗಿ ಮುಂತಾದ ಬೆಳೆಗಳನ್ನು ಮಾತ್ರ ಬೆಳೆಯಲು ಸಾಕಾಗುತ್ತಿತ್ತು. ಅರ್ಧಕ್ಕಿಂತ ಹೆಚ್ಚು ನೀರಿದ್ದಾಗ ತೆಳು ಹರಡುವಿಕೆ ಅರ್ಥಾತ್ ಗದ್ದೆಯಲ್ಲಿ ತೆಳುವಾಗಿ ನೀರು ನಿಲ್ಲಿಸಬಹುದಿತ್ತು. ಆಗ ರೈತರು ಭತ್ತ ಬೆಳೆಯುತ್ತಿದ್ದರು.

ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನ ಕಪ್ಪಲಮಡಗು, ನೆಲ್ಲೂರು, ಬಾಳಸಂದ್ರ ಮೊದಲಾದ ಕಡೆ ದಾಮಾಷ ಎನ್ನುವ ಪದ್ಧತಿಯಿದೆ. ಕೆರೆಯಲ್ಲಿರುವ ನೀರಿನ ಪ್ರಮಾಣವನ್ನು ಪಂಚಾಯ್ತಿಯ ಹಿರಿಯರು ಅಂದಾಜಿಸುತ್ತಾರೆ. ಎಷ್ಟು ಭೂಮಿಗೆ ನೀರು ದಕ್ಕುತ್ತದೆ ಎಂಬುದನ್ನು ತೀರ್ಮಾನಿಸುತ್ತಾರೆ. ಅಚ್ಚುಕಟ್ಟಿನಲ್ಲಿ ಜಮೀನಿರುವ ಎಲ್ಲಾ ರೈತರನ್ನೂ ನಿಗದಿ ಮಾಡಿದ ದಿನ ಒಗ್ಗೂಡಿಸುತ್ತಾರೆ. ಕೆರೆಯಲ್ಲಿ ಅರ್ಧದಷ್ಟು ನೀರಿದ್ದರೆ ಅಚ್ಚುಕಟ್ಟು ಪ್ರದೇಶದ ಅರ್ಧಭಾಗ, ಕಡಿಮೆಯಿದ್ದರೆ ಕಾಲುಭಾಗ ಹೀಗೆ ನೀರ ಲಭ್ಯತೆಯನ್ನು ಅನುಸರಿಸಿ ಜಮೀನನ್ನು ಗುರುತಿಸುತ್ತಾರೆ. ಗುರುತಿಸಿದ ಜಮೀನು ಯಾರದೇ ಆಗಿರಲಿ ಅದು ಈಗ ಊರವರ ಸ್ವತ್ತು. ಆ ಜಾಗದಲ್ಲಿ ಅಚ್ಚುಕಟ್ಟಿನ ರೈತರಿಗೆಲ್ಲಾ ಅವರವರ ಜಮೀನಿಗೆ ತಕ್ಕಂತೆ ಅಳತೆ ಮಾಡಿ ಕೊಡುತ್ತಾರೆ. ಹೀಗೆ ಆ ಜಾಗದಲ್ಲಿ ಆ ವರ್ಷದ ಬೆಳೆ ತೆಗೆಯಲು ಮಾತ್ರ ಅವಕಾಶ. ಊರಿನ ಎಲ್ಲರಿಗೂ ನೀರು ದಕ್ಕುತ್ತದೆ. ಒಗ್ಗಟ್ಟಾಗಿ ಕೃಷಿ ಮಾಡುತ್ತಾರೆ. ಇಷ್ಟೇ ಅಲ್ಲ, ಕೆರೆ-ಕಾಲುವೆಗಳ ದುರಸ್ತಿ, ಜಲಾನಯನ ಪ್ರದೇಶದಲ್ಲಿರುವ ಕಟ್ಟೆ ಹಾಗೂ ಕುಂಟೆಗಳ ದುರಸ್ತಿಗಳನ್ನು ಮಾಡುತ್ತಾರೆ. ನೀರನ್ನು ಸ್ವಲ್ಪವೂ ವ್ಯರ್ಥ ಮಾಡುವುದಿಲ್ಲ.

ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನಲ್ಲಿ ಯಜಮಾನ್ ಪಣಗಾರ ಪದ್ಧತಿಯಿದೆ. ಯಜಮಾನ ಅಂದರೆ ಅಚ್ಚುಕಟ್ಟು ಪ್ರದೇಶದ ರೈತ. ಪಣಗಾರ ಅಂದರೆ ಕೆರೆಯ ನೀರಿನ ನಿರ್ವಾಹಕ. ಆರು ಊರುಗಳಿಗೆ ಸೇರಿದ ಕೆರೆ ಇಲ್ಲಿದೆ. ಇವರೆಲ್ಲಾ ಸೇರಿ 10 ಪಣಗಾರರನ್ನು ಆಯ್ಕೆ ಮಾಡುತ್ತಾರೆ. ಅವರು ಅಚ್ಚುಕಟ್ಟು ಪ್ರದೇಶದ ರೈತರನ್ನೆಲ್ಲಾ ಒಗ್ಗೂಡಿಸುತ್ತಾರೆ. ಕೆರೆಯಲ್ಲಿರುವ ನೀರನ್ನು ನೋಡಿ ಬೆಳೆಯನ್ನು ನಿರ್ಧರಿಸುತ್ತಾರೆ. ಕೆರೆ

ಪೂರ್ತಿ ತುಂಬಿದ್ದರೆ ಭತ್ತದ ಬೆಳೆ. ಅರ್ಧ ತುಂಬಿದ್ದರೆ ರಾಗಿ, ಶೇಂಗಾ ಮುಂತಾದವು. ಅದಕ್ಕೂ ಕಡಿಮೆಯಿದ್ದರೆ ಅಡಿಕೆ, ತೆಂಗಿನತೋಟಗಳಿಗೆ ಮಾತ್ರ ನೀರು. ರಾಜ ಕಾಲುವೆಯ ಹೂಳು ತೆಗೆಸುವುದು, ನೀರಿನ ಹರಿವು ಸುಗಮವಾಗಿರುವಂತೆ ನೋಡಿಕೊಳ್ಳುವುದು, ಕರವಸೂಲಿ, ನೀರು ಕದಿಯದಂತೆ ನಿಗಾ ವಹಿಸುವಿಕೆ ಇವೆಲ್ಲಾ ಪಣಗಾರರ ಕೆಲಸ.

ಕೋಲಾರದ ತುಕಡಿ ಪದ್ಧತಿ, ನಿಪ್ಪಾಣಿಯ ಫಡ್ ಪದ್ಧತಿ ಇವೆಲ್ಲಾ ಅಚ್ಚುಕಟ್ಟು ಪ್ರದೇಶದ ಬೆಳೆಗಾರರೇ ತಮ್ಮ ಅನುಕೂಲಕ್ಕೆ ಅನುಸರಿಸುವ ಪದ್ಧತಿಗಳಾಗಿದ್ದವು. ಇಂತಹ ಪಾರಂಪರಿಕ ಜಲನಿರ್ವಹಣಾ ಪದ್ಧತಿಗಳನ್ನು ಅನುಸರಿಸುವ ರೈತರು ಇಂದೂ ಸಹ ಬೋರ್‌ವೆಲ್ ಬಳಕೆ ಮಾಡುತ್ತಿಲ್ಲ. ಬರ ಪರಿಸ್ಥಿತಿಯಲ್ಲೂ ಸುಸ್ಥಿರವಾದ ಜೀವನವನ್ನೇ ಮಾಡುತ್ತಿದ್ದಾರೆ.

## ಅಚ್ಚುಕಟ್ಟು ಪ್ರದೇಶದ ನಿರ್ವಹಣೆ ಹಾಗೂ ಪರಿಸರ ಸಮತೋಲನ

ಸ್ವಾವಲಂಬಿ ಕೃಷಿ ಪದ್ಧತಿಗಳ ಅಭಿವೃದ್ಧಿ, ಗೋಮಾಳಗಳ ಸಂರಕ್ಷಣೆ, ಬಂಜರುಭೂಮಿಗೆ ಪುನಶ್ಚೇತನ ಇವು ಒಂದಕ್ಕೊಂದು ಪೂರಕವಾಗಿವೆ. ಯೋಜನೆಯಲ್ಲಿ ಹೊಲಗಳಲ್ಲಿ ಬದುಗಳ ನಿರ್ಮಾಣ, ಬದುಗಳ ಮೇಲೆ ಅರಣ್ಯ ಸಸಿಗಳನ್ನು ನೆಡುವಿಕೆ, ಕೃಷಿಹೊಂಡಗಳನ್ನು ನಿರ್ಮಿಸುವುದು, ಹಳ್ಳಗಳಿಗೆ ಬಾಂದಾರಗಳ ನಿರ್ಮಾಣ, ಹರಿವ ನೀರಿಗೆ ತಡೆಗಟ್ಟೆಗಳ ನಿರ್ಮಾಣ–ಈ ಮೂಲಕ ಅಂತರ್ಜಲ ಮರುಪೂರಣ ಮಾಡುವುದು. ತೋಟಗಾರಿಕೆಗೆ, ಹಣ್ಣಿನಗಿಡಗಳನ್ನು ಬೆಳೆಸಲು ಆದ್ಯತೆ, ಸಮಪಾತಳಿ ಉಳುಮೆ, ಮಿಶ್ರತಳಿ ಬೇಸಾಯ, ಕೃಷಿ ಅರಣ್ಯಗಳನ್ನು ಬೆಳೆಸುವಿಕೆ, ಜೈವಿಕ ಕೃಷಿಪದ್ಧತಿಗಳ ಅನುಷ್ಠಾನ, ಕೃಷಿ ಪೂರಕ ಚಟುವಟಿಕೆಗಳಾದ ಜೇನು ಸಾಕಾಣಿಕೆ, ಹೈನುಗಾರಿಕೆ, ಕುರಿ, ಕೋಳಿ, ಹಂದಿ, ಮೊಲಗಳ ಸಾಕಾಣಿಕೆ, ಮೀನು ಸಾಕಾಣಿಕೆಯಂತಹ ವಿವಿಧ ಚಟುವಟಿಕೆಗಳ ಮೂಲಕ ಜನರ ಆದಾಯವೃದ್ಧಿ ಹಾಗೂ ಸಂಪನ್ಮೂಲಗಳ ಸುಸ್ಥಿರ ಬಳಕೆ ಇವು ಮುಖ್ಯವಾದವುಗಳು.

ಇಸವಿ 1996ರಿಂದ ರಾಜ್ಯದಾದ್ಯಂತ ಈ ರೀತಿಯ ಪರಿಲ್ಪನೆಯನ್ನು ಇಟ್ಟುಕೊಂಡು ಅನೇಕ ಯೋಜನೆಗಳು ಕಾರ್ಯರೂಪಕ್ಕೆ ಬಂದಿವೆ. ಅವುಗಳಲ್ಲಿ ಬೈಫ್ ಸಂಸ್ಥೆಯ ಸುಸ್ಥಿರ ಗ್ರಾಮೀಣಾಭಿವೃದ್ಧಿ ಯೋಜನೆ ತುಂಬಾ ಪ್ರಖ್ಯಾತ. ಮೈಲಿನಹಳ್ಳಿ, ಆದಿಹಳ್ಳಿ, ಹುಣಕಟ್ಟೆ, ಗೊಲ್ಲರಹಟ್ಟಿ, ಹೊನ್ನಶೆಟ್ಟಿಹಳ್ಳಿ, ಎಂ. ಕೊಪ್ಪಲು, ಒಂಟಿಕಲ್ಲಟ್ಟಿ ಹಳ್ಳಿಗಳಲ್ಲಿ ಇಂದು ಬರದ ಮಾತಿಲ್ಲ. ಒಂದು ಕಾಲದಲ್ಲಿ ಇವರೆಲ್ಲಾ ಸೆಪ್ಟೆಂಬರ್ ತಿಂಗಳಲ್ಲಿ ಬರುವ ಮಳೆಯ ಎದುರುನೋಡುತ್ತಾ ನಿಲ್ಲುತ್ತಿದ್ದರು. ಬಾವಿ, ಬೋರ್‌ಗಳೆಲ್ಲಾ ಕೈಕೊಟ್ಟಿದ್ದವು. ಜನರೆಲ್ಲಾ ಜಮೀನನ್ನು ಹಾಳುಬಿಟ್ಟು ಊರು ಬಿಟ್ಟು ಹೋಗಿದ್ದರು. ಹಾಳು ಸುರಿಯುತ್ತಿದ್ದ ಊರಿನ ಚಿತ್ರಣ ಇಂದು ಸಂಪೂರ್ಣ ಬದಲಾಗಿದೆ. ಪ್ರತಿಯೊಬ್ಬರ ಹೊಲದ ಸುತ್ತಲೂ ಚರಂಡಿ ಹೊಂಡಗಳಿವೆ. ಒಟ್ಟು ವ್ಯಾಪ್ತಿ 455 ಹೆಕ್ಟೇರ್‌ಗಳು. ಪ್ರತಿಯೊಬ್ಬರ ಹೊಲದಲ್ಲೂ ಕೃಷಿಹೊಂಡವಿದೆ. 400ಕ್ಕೂ ಹೆಚ್ಚಿರುವ ಕೃಷಿಹೊಂಡಗಳ ವ್ಯಾಪ್ತಿ 160 ಹೆಕ್ಟೇರ್‌ಗಳು. ಕಲ್ಲುಗಳ ಕಟ್ಟೆ 31. ಸರಾಸರಿ ನೀರು ನಿಲ್ಲುವ ವ್ಯಾಪ್ತಿ 50 ಹೆಕ್ಟೇರ್‌ಗಳು. ಚೆಕ್‌ಡ್ಯಾಂಗಳು 22–ಸರಾಸರಿ 50 ಹೆಕ್ಟೇರ್‌ಗಳಲ್ಲಿ ನೀರು ನಿಲ್ಲುತ್ತದೆ. ಒಂದು ದೊಡ್ಡ ಬ್ಯಾರೇಜ್. ಇದರಲ್ಲಿ ನೀರಿಂಗಿಸುವ ಪ್ರಮಾಣ 2.47 ಕೋಟಿ ಲೀಟರ್‌ಗಳು. ಬದುಗಳ ಮೇಲೆ ಹುಲ್ಲು, ಕಾಡಿನ ಮರಗಳು, ಮೇವಿನ ಮರಗಳು ತುಂಬಿವೆ. ಇಂದು ಊರಿನ ಬಾವಿ ಬೋರ್‌ಗಳಲ್ಲಿ ನೀರು ತುಂಬಿದೆ. ಕೆರೆಯ ನೀರು ಯಾರಿಗೂ ಬೇಕಿಲ್ಲ.

ಊರಿನಲ್ಲಿ ಸ್ವ-ಉದ್ಯೋಗಸ್ಥರು ಹೆಚ್ಚಾಗಿದ್ದಾರೆ. ಊರುಬಿಟ್ಟು ಹೋಗುವ ಹಂಬಲ ಯಾರಿಗೂ ಇಲ್ಲ. ಇದು ಕೇವಲ ಅಚ್ಚುಕಟ್ಟು ಪ್ರದೇಶದಲ್ಲಿ ಜಲಾನಯನ ಪ್ರದೇಶದಲ್ಲಿ ನೀರಿಂಗಿಸಿದ ಪರಿಣಾಮ. ಮೈಲನಹಳ್ಳಿ ಗ್ರಾಮದ 3,500 ಮನೆಗಳ ಜನ-ಜಾನುವಾರುಗಳು ಇಂದು ಪ್ರಗತಿಪರರು. ಒಟ್ಟು 11 ಮಹಿಳಾ ಸ್ವಸಹಾಯ ಸಂಘಗಳ ಉಳಿತಾಯ ರೂಪಾಯಿ 10 ಲಕ್ಷಕ್ಕೂ ಹೆಚ್ಚು. ಜಲ ಸುಸ್ಥಿರತೆಯು ಮೊದಲು ನೆಲವನ್ನು ತಂಪು ಮಾಡಿತು. ತಂಪಾದ ನೆಲದಲ್ಲಿ ಜೀವಿವೈವಿಧ್ಯದ ರಾಶಿಯು ಹೆಚ್ಚಿತು. ಮಿಶ್ರಕೃಷಿ, ಸುಸ್ಥಿರ ಕೃಷಿ ಹಾಗೂ ಜೈವಿಕ ಕೃಷಿ ವಿಧಾನಗಳನ್ನು ರೈತರು ನಿರ್ವಹಿಸಿದರು. ಇಳುವರಿ ಹೆಚ್ಚಿದಂತೆ ಆದಾಯವೂ ಹೆಚ್ಚಿತು. ಮರಗಿಡಗಳು ಅರಣ್ಯದ ಮೇಲಿನ ಅವಲಂಬನೆ ತಪ್ಪಿಸಿದವು. ಇಂದು ಹಳ್ಳಿಗಳಿಗೆ ರಸ್ತೆಯಿದೆ. ನಲ್ಲಿ ಇದೆ. ಸಾರಿಗೆ ವ್ಯವಸ್ಥೆ, ಟೆಲಿಫೋನ್, ಕೃತಕ ಗರ್ಭಧಾರಣಾ ಕೇಂದ್ರ, ಆರೋಗ್ಯ ಘಟಕ, ಹೈಸ್ಕೂಲ್ ಹೀಗೆ ಎಲ್ಲಾ ಬಂದಿದೆ. ಜನರೂ ವಿದ್ಯಾವಂತರಾಗುತ್ತಿದ್ದಾರೆ. ತಮ್ಮ ಹಕ್ಕುಗಳ ಅರಿವನ್ನು ಹೊಂದಿದ್ದಾರೆ. ಪ್ರಖ್ಯಾತ ಮನಶಾಸ್ತ್ರಜ್ಞ ಅಬ್ರಾಹಂ ಮ್ಯಾಸ್ಲೊ ತಮ್ಮ ಲೇಖನ 'ಹೈರಾರ್ಕಿ ಆಫ್ ನೀಡ್ಸ್'ನಲ್ಲಿ ಬರೆಯುತ್ತಾರೆ. ಜನರ ಮೂಲಭೂತ ಅಗತ್ಯಗಳ ಪೂರೈಕೆಯಾದಾಗ ಅವರಿಗೆ ಯೋಜನೆಗಳ ವಿಶಾಲ ಆಕಾಶ ಎದುರಾಗುತ್ತದೆ. ಅಲ್ಲಿ ತಮ್ಮ ಅವಶ್ಯಕತೆಗಳಿಗೆ ಉತ್ತರ ಕಂಡುಕೊಳ್ಳುತ್ತಾರೆ. ಹೆಚ್ಚಿನ ಸಾರಿ ಮೂಲಭೂತ ಅವಶ್ಯಕತೆಗಳಿಗೋಸ್ಕರವೇ ನೈಸರ್ಗಿಕ ಸಂಪನ್ಮೂಲಗಳ ಲೂಟಿ ನಡೆಯುತ್ತದೆ. ಆದರೆ ಹೊಟ್ಟೆ ತುಂಬುವ ಮಾರ್ಗ ಸುಸ್ಥಿರವಾಗಿದ್ದರೆ ನೈಸರ್ಗಿಕ ಸಂಪನ್ಮೂಲಗಳೂ ಹೆಚ್ಚಿ ಪರಿಸರ ಸಮತೋಲನ ಸಾಧ್ಯವಾಗುತ್ತದೆ. ಮ್ಯಾಸ್ಲೋರವರ ಈ ಮಾತುಗಳು ಮೈಲನಹಳ್ಳಿಯಲ್ಲಿ ಅಕ್ಷರಶಃ ಸಾಕಾರವಾಗಿದೆ. ಬೇಸಿಗೆಯಲ್ಲಿ ಹೊಲ ಹೊಲಗಳಲ್ಲಿ ತುಂಬಿದ ಮರಗಿಡಗಳೇ ಏರಿದ ತಾಪಮಾನದ ಪರಿಣಾಮವನ್ನು ನಿಯಂತ್ರಿಸುತ್ತಿವೆ. ಜಲದ ಮಟ್ಟ ಮೇಲೇರಿದ ಕಾರಣ ಊರಿನ ಉಷ್ಣಾಂಶ 2ರಿಂದ 3 ಡಿಗ್ರಿಗಳಷ್ಟು ಕಡಿಮೆಯಾಗಿದೆ. ಬಹುಶಃ ಜೀವನಮಟ್ಟದ ಸುಧಾರಣೆ ಪ್ರತಿಯೊಬ್ಬರ ಮನೆ ಹೊಕ್ಕರೆ ಗೋಚರವಾಗುತ್ತದೆ. ಅವರು ಬಾಯಿ ತೆರೆದು ಹೇಳುವುದೇ ಬೇಕಿಲ್ಲ. ಕೇವಲ ಅಚ್ಚುಕಟ್ಟು ಪ್ರದೇಶದ ಸಮರ್ಥ ನಿರ್ವಹಣೆಯಿಂದ ಇಡೀ ಪರಿಸರವೇ ಬದಲಾದ ಯಶೋಗಾಥೆಯಿದು. ಈ ರೀತಿಯ ಬದಲಾವಣೆಗಳನ್ನು ರಾಜ್ಯದಾದ್ಯಂತ ಅನೇಕ ಸ್ವಯಂಸೇವಾ ಸಂಸ್ಥೆಗಳು ಕೈಗೊಂಡಿವೆ. ನಬಾರ್ಡ್‌ನ ಸಹಕಾರದಲ್ಲಿ ಇಂತಹ ಬದಲಾವಣೆಗಳು ಸಾಧ್ಯವಾಗಿವೆ.

ಜಲಸಂವರ್ಧನಾ ಯೋಜನೆಯಲ್ಲೂ ಇದೇ ರೀತಿಯ ಅನೇಕ ಯಶೋಗಾಥೆಗಳಿವೆ. ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಚಿಕ್ಕನಾಗಾವ್‌ಕೆರೆಯ ಕಾಲುವೆಗಳ ಅಭಿವೃದ್ಧಿಪಡಿಸಲಾಯಿತು. ಕೆರೆಯ ಹೂಳೆತ್ತಿ ಕಾಲುವೆಗಳಲ್ಲಿ ನೀರು ಹರಿಯುವಂತೆ ಮಾಡಲಾಯಿತು. ಸುಮಾರು 259 ಹೆಕ್ಟೇರ್ ಪ್ರದೇಶಕ್ಕೆ ಇಂದು ನೀರಾವರಿ ಮಾಡಬಹುದಾಗಿದೆ. 800 ಅಡಿ ಆಳಕ್ಕೆ ತಲುಪಿದ್ದ ಬೋರ್‌ವೆಲ್‌ಗಳಲ್ಲಿ 200 ಅಡಿಗಳಿಗೆ ನೀರು ಸಿಗುತ್ತಿದೆ. ಮೀನು ಸಾಕಾಣಿಕೆಯಿಂದ 2010-11ರಲ್ಲಿ 65 ಸಾವಿರ ರೂಪಾಯಿಗಳನ್ನು ಸಂಗ್ರಹಿಸಿದ್ದಾಗಿ ಕೆರೆ ಬಳಕೆದಾರರ ಸಂಘದ ಅಧ್ಯಕ್ಷರಾದ ಬಸವರಾಜ ವೀರಭದ್ರಪ್ಪ ಬಿರಾದಾರ ಹೆಮ್ಮೆಯಿಂದ ಹೇಳುತ್ತಾರೆ. ಉದ್ದು, ತೊಗರಿ, ಜೋಳ, ಹೆಸರಿನೊಂದಿಗೆ ಬಾಳೆ ಹಾಗೂ ಕಬ್ಬಿನ ತೋಟವನ್ನು ಮಾಡಿದ್ದಾರೆ. ಮೂರೇ ಇದ್ದ ಕಬ್ಬಿನಗಾಣಗಳ ಸಂಖ್ಯೆ ಒಂಭತ್ತಕ್ಕೇರಿದೆ. ಕೃಷಿಕರು ಹಾಗೂ ಕೂಲಿಕಾರ್ಮಿಕರ ವಲಸೆ ತಪ್ಪಿದೆ. ಬಿಜಾಪುರ ಕೃಷಿ ಮಹಾವಿದ್ಯಾಲಯದ ವಿಜ್ಞಾನಿ ಡಾ. ರಾಜೇಂದ್ರ ಪೊದ್ದಾರ್‌ರವರು 'ಜಿಲ್ಲೆಯಲ್ಲಿ 44 ಕೆರೆಗಳ

ಅಭಿವೃದ್ಧಿಯಿಂದಾಗಿ ಇಡೀ ವಾತಾವರಣವೇ ಬದಲಾಗಿದೆ. ಸಾವಿರಾರು ಎಕರೆ ಪ್ರದೇಶವು ಬೇಸಿಗೆಯಲ್ಲೂ ಹಸುರು ಹೊದಿಕೆಯಿಂದ ಕಂಗೊಳಿಸುತ್ತಿದೆ. ಜಲಸಂರಕ್ಷಣೆ ಮಾಡಿದರೆ, ಅದೇ ನೆಲವನ್ನು ಸಂರಕ್ಷಿಸುತ್ತದೆ. ಹಸುರು ಹೊದಿಕೆಯೊಂದೇ ತಾಪಮಾನದ ಹೆಚ್ಚಳವನ್ನು ಎದುರಿಸುವ ಸುಲಭ ಮಾರ್ಗ' ಎನ್ನುವ ಮಾತನ್ನು ಸೇರಿದ ಕೆರೆ ಬಳಕೆದಾರರ ಸಂಘದ 1500 ಜನ ಸದಸ್ಯರಿಗೆ ವಿವರಿಸಿದರು.

ಊರಿಗೊಂದು ಕೆರೆ, ಕೆರೆಯ ಜಲಾನಯನ ಪ್ರದೇಶ, ಕೆರೆಯಂಗಳ, ಅಚ್ಚುಕಟ್ಟು ಪ್ರದೇಶಗಳ ಸಮಗ್ರ ಅಭಿವೃದ್ಧಿ ಹಾಗೂ ನಿರ್ವಹಣೆಗಳಿಂದ ಕೃಷಿ ಅಭಿವೃದ್ಧಿ, ಜೀವನಮಟ್ಟ ಸುಧಾರಣೆಯಷ್ಟೇ ಅಲ್ಲ, ಇಂದು ಭೂಮಿ ಎದುರಿಸುತ್ತಿರುವ ಇಂಗಾಲದ ಡೈ ಆಕ್ಸೈಡ್ ಸಮಸ್ಯೆ, ತಾಪಮಾನ ಏರಿಕೆಯ ಸಮಸ್ಯೆ, ಬರ, ನೆರೆ, ಅಂತರ್ಜಲ ಸಮಸ್ಯೆ, ಅರಣ್ಯನಾಶ ಹೀಗೆ ಏನೆಲ್ಲಾ ಎದುರಿಸಲು ಸಾಧ್ಯ. ದೊಡ್ಡ ದೊಡ್ಡ ಜಲಾಶಯಗಳಲ್ಲಿ ನೀರು ಹಿಡಿದಿಡುವುದಕ್ಕಿಂತಲೂ ಕೆರೆಗಳಲ್ಲಿ ನೀರು ಸಂಗ್ರಹಿಸುವುದು ಸುಲಭದ ಕೆಲಸ. ಪ್ರತಿ ಹಳ್ಳಿಯ ಸಮುದಾಯಗಳೂ ಈ ಬಗ್ಗೆ ಎಚ್ಚೆತ್ತುಕೊಳ್ಳಬೇಕಾದ್ದು ಅಗತ್ಯ ಹಾಗೂ ಅನಿವಾರ್ಯ.

ಆಧಾರ


* ಕೃಷಿ ಕರ್ನಾಟಕ; ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು
* Dying Wisdom: CSE Publication
* Half Way to Freedom: Margaret Burkewhite
* Tank Irrigation in Karnakata: Mysore University
* A Journey to South India: Paies and Nunichz
* Enclyclopedia of Environment: CEE Publication
* India and The Colonies: G. Thompson (1838)
* ಜಲಸಂವರ್ಧನಾ ಯೋಜನಾ ಸಂಘದ ವರದಿ


*


ಪೂರ್ಣಪ್ರಜ್ಞ ಬೇಳೂರು, ಅಂಚೆ : ಬೇಳೂರು – 577 401, ಸಾಗರ, ಶಿವಮೊಗ್ಗ

ದೂ: 08183–260138, 9480294383 Email:poornaprajnabelur@gmail.com



# ಗಂಗೆ ತರುವಾಲಿಕ್ಕೆsss.....

– ರಜನಿ ಗರುಡ

ಸೂರ್ಯ ಉದಯದಲೆದ್ದು । ಬಂದೇವೆ ಗಂಗೇಗೆ ।
ವಾಲೆಯ ಮುತ್ತು ಹೊಳೆಯುತ್ತ ॥ ಬಂದೇವೆ ।
ಗಂಗೆ ತರುವಲಿಕ್ಕೆ ಹೊರಟಾರೆ ॥

ಹೀಗೆ ಅಮ್ಮ-ಅತ್ತೆಯರು ಹಾಡುತ್ತಾ ದೀಪಾವಳಿಯಲ್ಲಿ ನೀರೇಹಬ್ಬದ ದಿನ ಬೆಳಿಗ್ಗೆ ನಾಲ್ಕೂವರೆ ಐದುಗಂಟೆಗೆ ಕತ್ತಲೆಯಲ್ಲಿ ಸ್ನಾನಮಾಡಿ ಮಡಿ ಉಟ್ಟು ಗಂಗೆಯನ್ನು ತುಂಬಲು ಬಾವಿಗೆ ಹೋಗುತ್ತಿದ್ದರು. ಹಿಂದಿನ ದಿನವೇ ಬಾವಿಕಟ್ಟೆಗೆ, ತಂಬಿಗೆ-ಕೊಡಕ್ಕೆಲ್ಲ ಕೆಮ್ಮಣ್ಣು ಬಳಿದು ರಂಗೋಲಿಯನ್ನು ಬಿಡಿಸಿಡುತ್ತಿದ್ದರು. ನೀರೆತ್ತಿ ಪೂಜಿಸಿ ದೇವರ ಮುಂದೆ ರಂಗೋಲಿ ಬಿಡಿಸಿದ ಮಣೆಯ ಹಿಂದೆ ನೀರಿನ ತಂಬಿಗೆ ಕೊಡವನ್ನು ಇಡುತ್ತಿದ್ದರು. ಮಣೆಯ ಮೇಲೆ ಬಲಿಚಕ್ರವರ್ತಿ ಮತ್ತು ಅವನ ಕುಟುಂಬವನ್ನು ಸಾಂಕೇತಿಕವಾಗಿ ಮಗೆಕಾಯಿ, ಸೌತೆಕಾಯಿ, ತೆಂಗಿನಕಾಯಿಯ ಮೇಲೆ ಬಿಡಿಸಿ ಮಣೆಯ ಮೇಲೆ ಸ್ಥಾಪಿಸುತ್ತಿದ್ದರು. ಅನಂತರ ಕೊಟ್ಟಿಗೆಗೆ ಹೋಗಿ ಎಲ್ಲ ದನ-ಕರುಗಳಿಗೆ ಎಣ್ಣೆ ಹಚ್ಚಿ ಆರತಿ ಮಾಡುತ್ತಿದ್ದರು. ದನ-ಕರುಗಳೆಲ್ಲ ಗಾಬರಿಯಾಗಿ ಕಟ್ಟದಲ್ಲೇ ಅತ್ತಿಂದಿತ್ತ ಓಡಿ, ಹಾಯಲು ಬರುತ್ತಿದ್ದವು. ನಾವು ಆ ಬೆಳಗಿನ ಜಾವದಲ್ಲಿ ಎದ್ದು ಜಾಗಟೆ ಬಾರಿಸುತ್ತ ಅವರ ಹಿಂದೆ ಓಡಾಡುತ್ತಿದ್ದೆವು. ಮನೆಮಂದಿಗೆಲ್ಲ ಆ ದಿನ ಎಣ್ಣೆ ಸ್ನಾನ.

ಮಾರಗಲದ ಗೋಡೆ, ಕತ್ತಲೆಯ ಭೂತಾಕಾರದ ನಮ್ಮ ಮನೆಯೊಳಗೇ ಬಾವಿಯಿದೆ. ಇದರ ಕಟ್ಟೆಯ ಮೇಲೆ ಇಬ್ಬರು ಹಾಸಿಕೊಂಡು ಮಲಗಬಹುದು. ಅಷ್ಟು ಅಗಲದ ಬಾವೀಕಟ್ಟೆ. ನಾವು ಇದರ ಮೇಲೆ ಅಡಿಗೆಯಾಟವಾಡುತ್ತಿದ್ದೆವು. ನಮ್ಮ ಮನೆಯ ಗಂಗೆ ಬರೀಗಂಗೆಯಲ್ಲ, ಪಾತಾಳ ಗಂಗೆ, ಮಳೆಗಾಲವೆಂದು ಏರಿದ್ದಿಲ್ಲ. ಬೇಸಿಗೆಯೆಂದು ಇಳಿದಿದ್ದಿಲ್ಲ.

ಒಂದೇ ಹದದಲ್ಲಿದ್ದ ತಿಳಿಯಾದ, ಸಿಹಿಯಾದ ನೀರು. ಅಡಿಗೆಗೆ, ದೇವರಪೂಜೆಗೆ, ಕುಡಿಯಲಿಕ್ಕೆಲ್ಲ ಪ್ರತಿಬಾರಿಯೂ ಸೇದಿಕೊಳ್ಳುತ್ತಿದ್ದರು. ನೀರನ್ನೆಂದೂ ತುಂಬಿಸಿಡುತ್ತಿದ್ದುದನ್ನು ನಾನು ನೋಡಿಯೇ ಇಲ್ಲ. ಮುಂದೆ ಬಾವಿಗೆ ನೀರಿನ ಪಂಪ್ ಹಾಕಿದರು. ಇದರಿಂದ ನಮಗೆ ಸ್ನಾನಕ್ಕೆ, ದಿನಬಳಕೆಗೆ, ಕೊಟ್ಟಿಗೆಗೆ ನೀರೆಳೆದುಕೊಡುತ್ತಿದ್ದ ನಮ್ಮ ಕೆಲಸದವರು ಮತ್ತು ಮನೆಯ ಹೆಂಗಸರು ನೆಮ್ಮದಿಯ ಉಸಿರು ಬಿಟ್ಟರು. ಇದಕ್ಕೆಲ್ಲ ಕಾರಣ ಹಿತ್ತಲಿನಲ್ಲಿ ಹಲಸಿನ ಮರದ ಕೆಳಗೆ ಉದ್ದಕ್ಕೆ ಮಲಗಿದ್ದ ನೀರಿನ ಟ್ಯಾಂಕ್ ಇಪ್ಪತ್ನಾಲ್ಕು ಗಂಟೆ ನೀರನ್ನು ಒದಗಿಸುತ್ತಿತ್ತು. ಈ ಟ್ಯಾಂಕ್ ಬಂದ ಮೇಲೆ ನಮ್ಮ ಆಟದ ಜಾಗವನ್ನು ಬಾವಿಕಟ್ಟೆಯಿಂದ ಟ್ಯಾಂಕ್ ಕಟ್ಟೆಗೆ ಬದಲಾಯಿಸಿಕೊಂಡೆವು.

ನಮ್ಮ ಗದ್ದೆಯ ಕೆಳಗೆ ಅಘನಾಶಿನಿ ನದಿ ಹರಿಯುತ್ತದೆ. ಸಣ್ಣ ಹಳ್ಳದಂತೆ ಹರಿಯುವ ಈ ನದಿ ನಮ್ಮ ಗದ್ದೆ, ತೋಟಕ್ಕೆ ನೀರುಣಿಸುತ್ತದೆ. ನಾವು ಗದ್ದೆಯ ಮೇಲಿನ ರಸ್ತೆಯಿಂದ ದಿನವೂ ಶಾಲೆಗೆ ಹೋಗುವಾಗ ಅಘನಾಶಿನಿಯಲ್ಲೊಮ್ಮೆ ಆಟವಾಡುವುದು ರೂಢಿ. ಬೇಸಿಗೆಯಲ್ಲಿ ತಿಳಿಯಾಗಿ ಹರಿದು ನಮಗೆ ಆಟವಾಡಲು ಅನುವಾಗುತ್ತಿದ್ದವಳು ಮಳೆಗಾಲದಲ್ಲಿ ಕೆನ್ನೀರಾಗಿ ಉಗ್ರಸ್ವರೂಪಿಯಾಗಿ ಬಿಡುತ್ತಿದ್ದಳು. ನಮ್ಮ ಶಾಲೆಯಿಂದ ಸ್ವಲ್ಪ ದೂರದಲ್ಲಿ ಇದು ವರದಾ ನದಿಯನ್ನು ಸೇರಿ ಮುಂದೆ ಇವೆರಡೂ ಒಟ್ಟಾಗಿ ಅರಬ್ಬೀಸಮುದ್ರವನ್ನು ಸೇರಲು ಘಟ್ಟದ ಕೆಳಗೆ ಧಾವಿಸುತ್ತವೆ.

ನಮ್ಮ ಶಾಲೆಯಿಂದ ಸ್ವಲ್ಪ ದೂರದಲ್ಲಿ ಇವೆರಡೂ ನದಿಗಳು ಸೇರುವುದು ರಸ್ತೆಯ ಪಕ್ಕದಲ್ಲಿಯೆ. ಮಳೆಗಾಲದಲ್ಲಿ ಈ ನದಿಗಳಿಗೆ ಪ್ರವಾಹ ಬಂದು ಮುಂದಿನ ಹಳ್ಳಿಗಳ ಸಂಪರ್ಕವನ್ನು ಕಡಿದುಬಿಡುತ್ತಿದ್ದವು. ಮಳೆಗಾಲದಲ್ಲಿ ಹೊಳೆಯಾಚೆಯ ಹಳ್ಳಿಯ ಮಕ್ಕಳಿಗೆ ಶಾಲೆಗೆ ಬರುವುದು ಕಷ್ಟವಾಗುತ್ತಿತ್ತು. ಮಳೆ ಪ್ರಾರಂಭವಾದ ಕೂಡಲೆ ಅವರ ಪಾಲಕರು ಬಂದು ತಮ್ಮ ಮಕ್ಕಳನ್ನು ಕರೆದುಕೊಂಡು ಹೋಗುತ್ತಿದ್ದರು. ಇಲ್ಲವಾದರೆ ಹೊಳೆ ಇಳಿಯುವವರೆಗೆ ಕಾಯಬೇಕಾಗುತ್ತಿತ್ತು. ಮಧ್ಯರಾತ್ರಿಯಾದರೂ ಒಮ್ಮೊಮ್ಮೆ ಇಳಿಯುತ್ತಿರಲಿಲ್ಲ. ದನ-ಕರುಗಳು, ಶಿರಸಿಪೇಟೆಗೆ ಹೋದವರು, ಕಾಯುತ್ತ ನಿಲ್ಲುತ್ತಿದ್ದರು. ಮಾರನೆಯ ದಿನ ಶಾಲೆಯಲ್ಲಿ ಹೊಳೆ ಬಂದಿದ್ದರ ವರ್ಣನೆ, ಅದರಲ್ಲಿ ತೇಲಿಹೋದ ದನ-ಕರು, ಪ್ರಾಣಿಗಳು-ಮರಗಿಡಗಳ ಚಿತ್ರಣ. ಮಧ್ಯರಾತ್ರಿಯವರೆಗೆ ಮಳೆಯಲ್ಲಿ ಕಾದುನಿಂತಿದ್ದರ ವಿವರಗಳೆಲ್ಲ ನಮಗೆ ಭಾರೀ ಥ್ರಿಲ್ ಕೊಡುತ್ತಿದ್ದವು. ಅವರು ಮಳೆಬಂದಾಗ ಪಾಲಕರೊಂದಿಗೆ ಮನೆಗೆ ಹೊರಟರೆ ಶಾಲೆಯಲ್ಲೇ ಉಳಿದು ಪಾಠ ಕೇಳಬೇಕಾದ ನಮಗೆ ಸಂಕಟವಾಗುತ್ತಿತ್ತು. ನಮ್ಮ ರಸ್ತೆಗೂ ಅಘನಾಶಿನಿ ಅಡ್ಡಲಾಗಿ ಹರಿಯಬಾರದಿತ್ತೇ ಎಂದು ಬೇಸರಿಸಿಕೊಳ್ಳುತ್ತಿದ್ದೆವು. ಕುಮಟಾದಿಂದ ಕಾರವಾರಕ್ಕೆ ಹೋಗುವ ಹೈವೇಯಲ್ಲಿ ಅಘನಾಶಿನಿ ಮತ್ತೆ ಎದುರಾಗುತ್ತಾಳೆ. ನಮ್ಮೂರಲ್ಲಿ ಹೊಳೆಯಾಗಿದ್ದವಳು ಇಲ್ಲಿ ನದಿಯಾಗಿ, ಮೈದುಂಬಿ, ಮಂದಗಮನೆಯಾಗಿ, ಕಿಲೋಮೀಟರ್‌ಗಳಷ್ಟು ಅಗಲವಾಗಿ ಹರಿಯುತ್ತಾಳೆ. ಇದಕ್ಕೆ ಉದ್ದನೆಯ ಸೇತುವೆ ಇದೆ. ನಾನು ಆ ದಾರಿಯಲ್ಲಿ ಹೋಗುವಾಗೆಲ್ಲ ನಿಂತು ನೋಡುತ್ತೇನೆ.

ನನ್ನ ಮದುವೆಯಾಗಿ ಗದಗಕ್ಕೆ ಹೋದ ದಿನವೇ ತುಂಗಭದ್ರಾ ನದಿಯ ನೀರು ಹೊಸಪೇಟೆಯಿಂದ ತೊಂಭತ್ತು ಕಿ.ಮೀ. ಪೈಪಿನಲ್ಲಿ ಪ್ರಯಾಣಿಸಿ ಬಂದಿತ್ತು. ಆ ನೀರು ತಿಳಿಯಾಗಲಿಕ್ಕೇ ಹದಿನೈದು ದಿನಗಳು ಹಿಡಿಯಿತು. ಗಡಸು ನೀರನ್ನೇ ಕುಡಿದುಕೊಂಡಿದ್ದ ಅಲ್ಲಿಯ ಜನರು ನದಿಯ ಸಿಹಿನೀರನ್ನು ಜತನದಿಂದ ಸಂಗ್ರಹಿಸಿಟ್ಟುಕೊಳ್ಳುತ್ತಿದ್ದರು.

ಮುಂದೆ ಧಾರವಾಡದಲ್ಲಿ ಮನೆ ಮಾಡಿದಾಗ ಅಲ್ಲಿಯೂ ನೀರನ್ನು ನಾಲ್ಕೈದು ದಿನಗಳಿಗಾಗುವಷ್ಟು ಸಂಗ್ರಹಿಸಿಟ್ಟು ಕೊಳ್ಳಬೇಕಾಗುತ್ತಿತ್ತು. ಮನೆಗೆ ಯಾರಾದರೂ ಬಂದರೆ ಸದಾ ನೀರಿನ ಧ್ಯಾನದಲ್ಲಿರುತ್ತಿದ್ದ ನನ್ನ ಬಾಯಿಂದ 'ನೀರು ನಾಲ್ಕೈದು ದಿನಕ್ಕೆ ಬರುತ್ತದೆ' ಎಂದು ಅರಿವಿಲ್ಲದೇ ಬಂದುಬಿಡುತ್ತಿತ್ತು. ಅಲ್ಲಿಯವರಿಗಾದರೆ ನೀರು ಬರುವುದನ್ನು ಕಾಯುವುದು, ಸಂಗ್ರಹಿಸಿಡುವುದು ತಿಳಿಯುತ್ತದೆ. ನನ್ನೂರ ಕಡೆಯವರಾದರೆ 'ಹೌದೇ' ಎನ್ನುತ್ತಲೇ ಒಂದು ಬಕೆಟ್ ನೀರಲ್ಲಿ ಕೈಕಾಲು ತೊಳೆದುಬಿಡುತ್ತಿದ್ದರು. ಯಾರಾದರೂ ಮನೆಗೆ ಬಂದರೆ ನೀರನ್ನು ಕಾಯುವುದೇ ಒಂದು ದೊಡ್ಡ ಸರ್ಕಸ್ ಆಗಿತ್ತು ನನಗೆ. ಉತ್ತರ ಕರ್ನಾಟಕದಲ್ಲಿ 'ನಳಾ ಬರ್ತದ' ಅಂದರೆ ಮುಗಿಯಿತು ಯಾವುದೇ ಕಾರ್ಯಕ್ರಮವಿರಲಿ, ಮದುವೆ-ಮುಂಜಿಗಳಿರಲಿ ಎಲ್ಲವನ್ನೂ ಬಿಟ್ಟು ಜನ ಓಡೋಡಿ ಮನೆಗೆ ಹೋಗಿಬಿಡುತ್ತಾರೆ. ಆದ್ದರಿಂದ ನೀರು ಬರುವ ದಿನ ಏನೂ ಕಾರ್ಯಕ್ರಮ ಇರಿಸಿಕೊಳ್ಳುವುದಿಲ್ಲ. ಯಾವುದೇ ಆಫೀಸಿನಲ್ಲಾದರೂ ತಡವಾದರೆ 'ನಳಾಬಂದಿತ್ರಿ' ಅಂದರಾಯಿತು. ಎಲ್ಲವೂ ಮಾಫ್ ಆಗಿಬಿಡುತ್ತದೆ. ನನಗೆ ಸ್ವಚ್ಛತೆ ಮತ್ತು ನೀರಿಗಿರುವ ನಿಕಟ ಸಂಬಂಧ ಅರ್ಥವಾಗಿದ್ದೇ ಉತ್ತರ ಕರ್ನಾಟಕದ ಊರುಗಳನ್ನು ನೋಡಿದಮೇಲೆ.

ನಮ್ಮೂರಲ್ಲಿ ಈಗಲೂ ಅಂದಿನಂತೆಯೇ ಅಘನಾಶಿನಿ ಹರಿಯುತ್ತಿದ್ದಾಳೆ. ಆದರೆ ಈಗ ನಮ್ಮೂರವರು ಅವಳ ದಡದಲ್ಲಿ ಭತ್ತ, ತರಕಾರಿಗಳನ್ನು ಬೆಳೆಯುತ್ತಿಲ್ಲ. ನಾವೀಗ ಅವನ್ನೆಲ್ಲ ಪೇಟೆಯಿಂದ ತರುತ್ತೇವೆ. ನಮ್ಮೂರ ಗದ್ದೆಗಳೆಲ್ಲ ಈಗ ಅಕೇಶಿಯಾ ನೆಡುತೋಪುಗಳಾಗಿವೆ. ಉತ್ತರ ಕರ್ನಾಟಕದ ಹಳ್ಳಿಗಳಲ್ಲಿಯೂ ನೀರುತರಲು ದೂರ ದೂರ ಹೋಗಬೇಕಾಗಿಲ್ಲ. ನೀರು ಬರುವುದನ್ನು ಕಾಯುತ್ತಿರಬೇಕಾಗಿಲ್ಲ. ಹಳ್ಳಿ ಹಳ್ಳಿಯಲ್ಲಿಯೂ ಹತ್ತು ರೂಪಾಯಿ ಕೊಟ್ಟರೆ ಐವತ್ತು ಲೀಟರಿನ ಕ್ಯಾನ್‌ಗಳು ಸಿಗುತ್ತವೆ. ಮಂತ್ರಿಗಳಾದ ಹೆಚ್.ಕೆ. ಪಾಟೀಲರ ಕೃಪೆಯಿಂದ ಪ್ರತಿ ಹಳ್ಳಿಗಳಲ್ಲೂ ಈಗ ಮಿನರಲ್ ನೀರಿನ ಘಟಕಗಳು ಪ್ರಾರಂಭವಾಗುತ್ತಿವೆ. ನೀರನ್ನು ಹೊತ್ತು ಹೊತ್ತು ನೀರೆಯರು ಬಳುಕಬೇಕಾಗಿಲ್ಲ. ಬಾವಿಕಟ್ಟೆಯ ಹರಟೆಗಳೂ ಇಲ್ಲ. ಆದ್ದರಿಂದ ಕವಿಗಳಿಗೆ ಕವನ ಬರೆಯಲು ನೀರು ಹೊತ್ತು ಬಳುಕುವ ನಾರಿಯರು ಸಿಗುವುದಿಲ್ಲ. ಬಾವಿ-ನದಿಗಳ ನೀರನ್ನೆಲ್ಲ ಕಲುಷಿತ ಮಾಡಿಕೊಂಡು ಮಿನರಲ್ ವಾಟರ್ ಕುಡಿಯುತ್ತಿದ್ದೇವೆ. ಊರತುಂಬ ನೀರಿನ ಪ್ಲಾಸ್ಟಿಕ್ ಬಾಟಲಿಗಳ ಕಸ ಮಾಡಿಕೊಂಡಿದ್ದೇವೆ.

*

ರಜನಿ ಗರುಡ, ಸುಪಿಥಾ ಅಪಾರ್ಟ್‌ಮೆಂಟ್, # 9, ಎರಡನೇ ಮಹಡಿ, ಕಬ್ಬೂರ್ ರಸ್ತೆ, ಮಾಳಮಡ್ಡಿ, ಧಾರವಾಡ - 8



# ಮಲೆನಾಡು ಜನಪದ ಜಲಸಂಸ್ಕೃತಿ ಮತ್ತು ನಂಬಿಕೆಗಳು

– ಶ್ರೀಪಾದ ಬಿಚ್ಚುಗತ್ತಿ

ಈ ಭೂಮಿಯ ಪ್ರತಿ ಜೀವಿಗಳಿಗೂ ಆಮ್ಲಜನಕದಷ್ಟೇ ನೀರಿನ ಅವಶ್ಯಕತೆಯೂ ಇದೆ. ಅನಾದಿಯಿಂದಲೂ ಅತಿವೃಷ್ಟಿ–ಅನಾವೃಷ್ಟಿಯನ್ನು ಸಮಾನವಾಗಿ ಅನುಭವಿಸಿದ ನಮ್ಮ ಮೂಲ ಕೃಷಿಕ ಇಂತಹ ಅಸಮ ಸ್ಥಿತಿಯನ್ನು ಸರಿದೂಗಿಸಿಕೊಳ್ಳಲು ಕಂಡುಕೊಂಡಿದ್ದು ಆರಾಧನೆ. ನಮ್ಮ ಸಂಪ್ರದಾಯ, ನಂಬುಗೆಗಳ ರೂಪವೇ ಈ ಆರಾಧನೆ. ಭಯದಿಂದ ಉದ್ಭವಿಸಿದ ಇಂತಹ ಸ್ಥಿತಿ ಮುಂದೊಮ್ಮೆ ರೂಢಿಯಾಗಿ ಸಂಸ್ಕೃತಿಯ ರೂಪದಲ್ಲೋ, ವಾಡಿಕೆಯ ರೂಪದಲ್ಲೋ ಪರಂಪರಾನುಗತವಾಗಿ ಹರಿದು ಬಂದಿದೆ. ಇದೇ ಜನಪದರ ಅನುಭವವೂ ಕೂಡ.

ಮಲೆನಾಡು ಭಾಗ ಹಿಂದೊಮ್ಮೆ ಸಮೃದ್ಧ ನೀರನ್ನು ಹೊಂದಿದ್ದು, ಅತಿವೃಷ್ಟಿಯನ್ನು ನಿಯಂತ್ರಿಸುವಲ್ಲಿ ಹೆಣಗಾಡಬೇಕಾಗಿದ್ದಿತು. ಆದಾಗ್ಯೂ ನೀರು ಅತ್ಯಂತ ಅವಶ್ಯ ಹಾಗಾಗಿ ಇಲ್ಲೂ ಜನಪದರು ನೀರನ್ನು ದೈವವೆಂದೇ ಸ್ಮರಿಸುವ ಪರಿ ಹಲವಾರು. ಮಲೆನಾಡ ಸೆರಗಿಗೆ ಒಂದೆಡೆ ಬಯಲುನಾಡು ಇನ್ನೊಂದೆಡೆ ಕರಾವಳಿ ಇರುವುದರಿಂದ ಆ ಭಾಗದ ಕೆಲವು ಆರಾಧನಾ ಪ್ರಭಾವವೂ ಇಲ್ಲಿದೆ.

## ನೀರು ಮತ್ತು ದೇವರು ಹಾಗೂ ಪೂಜಾ ವಿಧಾನಗಳು

ಬಯಲು ನಾಡಿನ ಪ್ರಭಾವದಿಂದ ಗಮನ ಸೆಳೆಯುವ ಒಂದು ಆರಾಧನೆ ಎಂದರೆ ಜೋಕುಮಾರನ ಹಬ್ಬ. ಪ್ರಸ್ತುತ ಈ ಭಾಗದ ಹಲವೆಡೆ ನಡೆಯುವ ಈ ಅಚರಣೆಯ ಜೋಕುಮಾರನನ್ನು ಮಡಿವಾಳರ ದೇವರೆಂದೇ ನಂಬಲಾಗಿದೆ. ಈತ ಮಳೆ–ಬೆಳೆಯ

ದೇವರೆಂದೂ ಅವನ ಹಬ್ಬದಿಂದ ಮಳೆಬೆಳೆ ಸಮೃದ್ಧಿಯಾಗುತ್ತದೆ ಎಂದು ನಂಬುಗೆಯಿದೆ.. ಹಲವಾರು ಶುಭ ಸಂದರ್ಭಗಳಲ್ಲಿ ಪೂಜೆಗೊಳ್ಳುವ ಈತ ಇಲ್ಲಿ ಅಕ್ಕಿ ರಾಶಿಯ ಮಧ್ಯೆ ಮರದ ಗೂಟವೊಂದಕ್ಕೆ ಬಟ್ಟೆಯ ಕಣ ಸುತ್ತಿಕೊಂಡ ರೂಪದಲ್ಲಿರುತ್ತಾನೆ. ಕೆಲವೆಡೆ ಮಣ್ಣಿನ ಜೋಕುಮಾರನನ್ನು ಮಾಡಿ ಪೂಜಿಸಲಾಗುತ್ತದೆ. ಮಳೆ ಬಾರದಿದ್ದಾಗ ಈ ಮಣ್ಣಿನ ಜೋಕುಮಾರನನ್ನು ಮನೆಮನೆಗೆ ಒಯ್ದು ಪೂಜಿಸಿದರೆ ಆತ ಆಕಾಶದಿಂದ ಮಳೆಯನ್ನು ತರುತ್ತಾನೆ ಎಂದು ನಂಬಲಾಗುತ್ತದೆ. ಸ್ವಾರಸ್ಯವೆಂದರೆ ಅಕ್ಕಿಯಲ್ಲಿ ಹುಗಿಯುವ ಕೋಲು ಹಾಗೂ ಮಣ್ಣಿನ ಆಕೃತಿ ಎರಡೂ ಶಿಶ್ನದ ಸಂಕೇತ![1] ಮಲೆನಾಡಿನ ಕೆಲವೆಡೆ ಕಂಡು ಬರುತ್ತಿರುವ ಕೃಷಿ ಆಪಂದ್ಮದ ವಿಗ್ರಹಗಳು,[2] ಲಜ್ಜಾಗೌರಿ ಶಿಲ್ಪ[3], ಗ್ರೀಸ್ ದೇಶದ ಡಯೋನಿಸಸ್ ದೇವತೆ[4] ಇವೆಲ್ಲವೂ ಫಲಪ್ರದ ದೇವತೆಯ ರೂಪವೇ.

ಜೋಕುಮಾರನ ಕುರಿತಾದ ಬೇರೆ ಬೇರೆ ಕಥೆಗಳು, ವಿವಿಧ ರೀತಿಯ ಆಚರಣೆಗಳಿದ್ದಾಗ್ಯೂ ಆತ ಕೃಷಿ ಫಲಪ್ರಧದ ದೇವತೆಯೆಂಬುದಕ್ಕೆ ಅವನ ಕುರಿತಾದ ಕೆಲವು ಹಾಡುಗಳು ಪುಷ್ಟಿ ನೀಡುತ್ತವೆ.

'ಅಡ್ಡಡ್ಡ ಮಳೀ ಬಂದು ದೊಡ್ಡದೊಡ್ಡ ಕೆರೆ ತುಂಬಿ
ಗೊಡ್ಡುಗಳೆಲ್ಲ ಹಯನಾಗಿ... '
'ಕಟ್ಟೀಯ ಹತ್ಯಾನ ಯೇಳ್ಳೀವ ನೋಡ್ಯಾನ
ಏರ್ಯಾನ ನೀರುಗುದುರೆಯ ನಮ ಕೊಮಾರ
ಕೈಬೀಸಿ ಮಳೆಯಾ ಕರೆದಾನೆ.'
'ಅತ್ತಲ ಮಳಿ ಬಂದಿತ್ತಲ್ಲ ಕೆರಿ ತುಂಬಿ ಗುತ್ತಿ
ಮಲೆನಾಡ ಕೊಳಿಕಟ್ಟಿ ಗೌರವ್ವ
ನಿನ್ನ ಪುತ್ರನಂದಲ ತಡದ್ದವೆ'

ನಮ್ಮ ಬಹಳಷ್ಟು ಆಚರಣೆಗಳಿಗೆ ಸಾಂಕೇತಿಕ ರೂಪವಿದೆ ಎಂಬುದು ಗಮನಾರ್ಹ. ಈ ನಿಟ್ಟಿನಲ್ಲಿ ಪರಿಸರ ದೇವತೆಗಳೆಂದು ಕರೆಯಬಹುದಾದ ಬನದಮ್ಮ ಅಥವಾ ಬನದೇವಿ, ರಾಚಮ್ಮ[5], ಬಳಾರಿ, ಹುಲಿಗೆಮ್ಮ, ಹುಲಿಯಪ್ಪ[6], ಕೋಣನತಲೆ ಭೂತ[7], ಇತ್ಯಾದಿಗಳು ಸೇರಿಕೊಳ್ಳುತ್ತವೆ.

ಚಿಕ್ಕಮಗಳೂರು ಜಿಲ್ಲೆಯ ಕೆಲವೆಡೆ ತಿಂಗಳಮಾಮನ ಆಚರಣೆ[8] ಇತ್ತು, ಪ್ರಸ್ತುತ ತನ್ನ ಅಸ್ತಿತ್ವ ಕಳೆದುಕೊಂಡಿರುವ ಇದರ ಆಚರಣೆ ಕೂಡ ಮಳೆಗಾಗಿ.

ಹುಣ್ಣಿಮೆಯಂದು ನಡೆಯುತ್ತಿದ್ದ ಈ ಪೂಜೆಯಲ್ಲಿ ಆಕರ್ಷಕವಾದ ಬಣ್ಣಬಣ್ಣದ ರಂಗವಲ್ಲಿಯಲ್ಲಿ ತೇರು, ಕಳಶ ಅದರ ತುದಿಯಲ್ಲಿ ಚಂದ್ರನ ಚಿತ್ರ ಬರೆಯಲಾಗುತ್ತಿತ್ತು. ಕೋಲಾಟದೊಂದಿಗೆ ರಂಜಿಸುತ್ತಿದ್ದ ಈ ಹಬ್ಬದಲ್ಲಿ ವಿನೋದದ ಹೆಣ್ಣುಕೇಳುವ ಹಾಡು ಹೇಳಲಾಗುತ್ತಿತ್ತು. ಇಲ್ಲಿ ತಿಂಗ್ಳ ಮಾಮನಿಗೆ ಮದುವೆ ಮಾಡುವ ಪರಿ ರಂಜನೀಯ.

'ಒಂದ್ವರ ಕೊಡ್ತೂವಿ ಒಂದ್ಹೆಣ್ಣು ಕೊಡ್ರಮ್ಮ
ಕಾಮೇಟಿ ರಂಗಗೆ ಕಸ್ತೆ ರಂಗಗೆ
ಸಣ್ಣ ಸರಪದ ಮ್ಯಾಲೆ ಶಯನ ಮಾಡಿಸಿಕೊಂಡ
ಅಪ್ಪ ರಂಗಪ್ಪಗೊಂದ್ಹೆಣ್ಣು ಕೊಡಿರಮ್ಮ ಹೆಣ್ಣು ಕೊಡಿರಮ್ಮ '

ಇದರ ನಂತರ ಹಾಡಿನ ಮೂಲಕ ಹೆಣ್ಣಿನ ಕಡೆಯವರು ವರಸೆಯಾಗಿ ಒಂದು ಹಾಡು, ತಿರುಗಿ ವರಸೆಯಾಗಿ ಗಂಡಿನ ಕಡೆಯವರು ಇನ್ನೊಂದು ಹಾಡು ಹಾಡಿ ನಂತರ ಮದುವೆ ಮಾಡುತ್ತಾರೆ. ಹೀಗೆ ಇಂತಹ ಆಚರಣೆಯಲ್ಲಿ ಲೌಕಿಕ ಹಿತದ ಬಯಕೆಯಂದಿಗೆ ಆಚರಿಸುವ ಕಾಲಕ್ಕೆ ರಂಜನೀಯ ರಸನಿಮಿಷಗಳೊಂದಿಗೆ ತಮ್ಮ ಜಂಜಾಟದ ತುಸು ಭಾಗವನ್ನಾದರೂ ಹಗುರಗೊಳಿಸಿಕೊಳ್ಳುವ ಪರಿಯನ್ನಿಲ್ಲಿ ಕಾಣಬಹುದು.

ಮಲೆನಾಡ ಜೋಗೇರ ಜನಾಂಗ ಇರುವೆಡೆ ಅಲ್ಲಲ್ಲಿ ಗಾಳಿ ದುರುಗವ್ವನ ಹಬ್ಬ ನಡೆಯುತ್ತದೆ. ಇದೂ ಕೂಡ ಮಳೆಗಾಗಿಯೇ. ಸುಮಾರಿಗೆ ಪ್ರತೀ ಜೂನ್ ತಿಂಗಳಿನಲ್ಲಿ ನಡೆಯುವ ಈ ಹಬ್ಬದಲ್ಲಿ ಮದುವೆಯಾಗದ ನಾಲ್ಕು ಹುಡುಗಿಯರು ಊರೊಳಗೆ ಉದೋ...ಉದೋ....ಎನ್ನುತ್ತ ಕೆರೆ ಅಥವಾ ಹೊಳೆಗೆ ಹೋಗಿ ತಂಬಿಗೆಯಲ್ಲಿ ನೀರು ತುಂಬಿಕೊಂಡು ಅಲ್ಲಿ ಗಂಗೆ ಪೂಜೆ ಮಾಡಿ ತಲೆಯ ಮೇಲೆ ಹೊತ್ತು ಊರ ಹೊರಗಿನ ಚಪ್ಪರಕ್ಕೆ ತರುತ್ತಾರೆ. ನಂತರ ಕಳಶ ಪೂಜೆಯಂದಿಗೆ ನಾಲ್ವರಿಗೂ ಉಡಿ ತುಂಬುತ್ತಾರೆ. ಆ ಚಪ್ಪರದ ಎದುರು ಇನ್ನೊಂದು ಚಪ್ಪರದಲ್ಲಿ ಮಾದಿಗರ ಹೆಣ್ಣನ್ನು ಕೂಡಿಸಿ ಆಕೆಗೆ ಮಾತಂಗಿಯೆಂದು ಭಾವಿಸಿ ಪಡ್ಲಿಗೆ ಪೂಜೆ ಮಾಡಿ ಕುರಿ ಬಲಿಕೊಟ್ಟು ಎಲ್ಲರೂ ಅಲ್ಲೇ ಸಾಮೂಹಿಕವಾಗಿ ಊಟ ಮಾಡುವ ಪರಿಯನ್ನು ನಾವಿಲ್ಲಿ ಕಾಣಬಹುದು.[9]

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಹಿರೇಚೌಟಿಯಲ್ಲಿ ವರ್ಷಂಪ್ರತಿ 'ಏಳುಬಾವಿ ಗಂಗವ್ವ'ನ ಉತ್ಸವ ನಡೆಯುತ್ತದೆ[10]. ಸಾಮೂಹಿಕವಾಗಿ ನಡೆಯುವ ಈ ಹಬ್ಬ ಕೂಡ ಕೃಷಿ ಫಲಪ್ರಧದ ಆಚರಣೆ.

ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ಭಾಗಗಳಲ್ಲಿ ಊರ ಹಂದಿಯನ್ನು ಹೊತ್ತು ಊರೆಲ್ಲ ಸುತ್ತುತ್ತಾ ನೀರು ಹಾಕಿಸಿಕೊಂಡು ನಂತರ ಬಲಿಕೊಡುವ ಪದ್ಧತಿಯಿದೆ.

ಪಶ್ಚಿಮ ಘಟ್ಟದ ಕೆಲವೆಡೆ 'ಗಂಗೆ ಏಳೋದು'[11] ಸಂದರ್ಭದಲ್ಲಿ ಪೂಜಿಸುವ ವಾಡಿಕೆಯಿದೆ. ಇಲ್ಲಿ ಎಲ್ಲೆಂದರಲ್ಲಿ ನೀರು ತನ್ನಿಂದ ತಾನೆ ಬುಗ್ಗೆ ಏಳುತ್ತಿದ್ದಂತೆ ಪೂಜಿಸಿ ಬರುವ ಪರಿ ಇದೆ.

ಮಳೆ ಮಲ್ಲಪ್ಪನ ಪೂಜೆಯಲ್ಲಿ ಸಗಣಿ ಬೆನವನನ್ನು ಹೊತ್ತ ಬೆತ್ತಲೆ ಬಾಲಕ ಬಾಲಕಿಯರು ಮನೆಮನೆಗೆ ಹೋಗುತ್ತಾರೆ.

ಹಲವು ತೆರನಾದ ಆಚರಣೆಯೊಂದಿಗೆ ಜನಪದದಲ್ಲಿ ಗಮನಿಸ ಬೇಕಾಗಿರುವುದು ಅಲ್ಲಿನ ಹಾಡುಗಳನ್ನು. ಇಲ್ಲಿ ಕೆಲವು ಹಾಡುಗಳನ್ನು ನೇರವಾಗಿ 'ಮಳೆ ಹಾಡುಗಳು' ಎಂದು ಕರೆಯುವುದೇ ಸೂಕ್ತ.

'ಮೊಳಿಯೇ ಮೊಳಿಯೇ ನಿನ್ಗಂಡ ಜಾಲಿಗೆ ಹೋಗ್ಯಾ ।
ಜಾರ್ನ ಬಿದ್ರೆ ಹಿಡ್ವಾರಿಲ್ಲಾ, ತಡ್ವಾರಿಲ್ಲಾ।
ಹನ್ ಕಡಿಯೇ, ಹನ್ ಕಡಿಯೇ ।'

ಈ ಸಾಲು ರಭಸದ ಮಳೆಯನ್ನು ಕಡಿಮೆ ಮಾಡುವ ಪರಿಯಾದರೆ ಇನ್ನು ಮಳೆ ಬಾರದಿದ್ದಾಗ ಜನಜನಿತವಾದ ಹಾಡು ಇನ್ನೊಂದು ಬಗೆಯಲ್ಲಿದೆ.

'ಹುಯ್ಯೋ ಹುಯ್ಯೋ ಮಳೆರಾಯ
ಹೂವಿನ ತೋಟಕೆ ನೀರಿಲ್ಲ.......'

'ಬಾರೆಲೆ ಮಳೆಯೇ ಬಣ್ಣದ ಮಳೆಯೇ
ಸುಣ್ಣವ ಕೊಡುವೆನು ಸುರಿಯಲೆ ಮಳೆಯೇ.......'

ಅದೇ ಈ ಸ್ತುತಿಯಲ್ಲಿ ನೀರನ್ನು ಅದೆಷ್ಟು ಪವಿತ್ರ ಎಂದಿವೆ ನೋಡಿ.

'ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಲಿ ಕಲ್ಲು ಕಾವೇರಿ ಕಪನೀಯ ।
ಕಲ್ಲು ಕಾವೇರಿ ಕಪನೀಯ ನೆನೆದರೆ ಹೊತ್ತಿದ್ದ ಪಾಪ ಪರಿಹಾರ ॥'

ಹಾಗೆಯೇ ಇಂದಿಗೂ ಕನ್ನಡ ನಾಡಿನಲ್ಲಿ ತನ್ನ ಅಂತಃ ಸತ್ವವನ್ನು ಉಳಿಸಿಕೊಂಡಿರುವ 'ಗಂಗೆ-ಗೌರಿ' ಹಾಡುಗಳು ನಮ್ಮ ಕೃಷಿಕ ಮಹಿಳೆಯರಲ್ಲಿ ಮಾಸುವುದುಂಟೆ? ಇಂದಿಗೂ ಮಲೆನಾಡ ಒಕ್ಕಲಿಗ ಮಹಿಳೆಯರು ಹಾಡುತ್ತಿರುವ ಇನ್ನೊಂದು ತೆರನಾದ ಗಂಗೆಯ ಕುರಿತ ಹಾಡು ಈ ಕೆಳಗಿನಂತಿದೆ.

'ಗಂಗೆ ಕೋಡ್ಯಲ್ಲಿ ಹರಿವಾಗೆ ಧರುಮನೆ
ಹಕ್ಕರಣಿ ನೀರು ಕುಡಿದೀವು
ಹಕ್ಕರಣಿ ನೀರು ಕುಡಿವಾಗೆ ಧರುಮನೆ
ಗೋಗೆಂಟ್ ಹುಲ್ ನೀರು ಶಿಕ್ಕೇವು
ಗೋಗೆಂಟ್ ಹುಲ್ನೀರು ಕುಡುದೀವು ಧರುಮಗೆ
ಭೂಮ್ಯಲ್ಲಿ ಬಾರಿ ಬೆಲೆ ಬಂದ್ವು........'

## ತಾಯಿ ಗಂಗಾ ಮತ್ತು ಜನಪದ

ಗಂಗೆ ಜಲದೇವತೆಯ ಸಾಂಕೇತಿಕವಾಗಿ ಕಳಶ ರೂಪದಲ್ಲಿ ಪೂಜಿಸಿಕೊಳ್ಳುತ್ತಾಳೆ. ಕಳಶ ಪೂಜೆಯಿಲ್ಲದೆ ಯಾವ ಕಾರ್ಯವೂ ಆರಂಭಗೊಳ್ಳುವಂತಿಲ್ಲ. ಸಾಮೂಹಿಕವಾಗಿ ಆಚರಿಸುವ ಭಾಗೀರಥಿ ಸಂಕ್ರಮಣ, ಕೋಡಿ ಬಿದ್ದಾಗ, ನೆರೆ ಬಂದಾಗ, ಹೊಸಬಾವಿಗೆ ನೀರು ಬಂದಾಗ ಎಲ್ಲೆಲ್ಲೂ ಗಂಗೆಗೆ ಪ್ರಾಧಾನ್ಯತೆ. ಆರಿದ್ರ ಮಳೆಹಬ್ಬ[12], ಮಧುಲಿಂಗನ ಹಬ್ಬ[13], ಗಂಗೆಯ ಮಕ್ಕಳೆಂದು ನಂಬಿದ ಗಂಗಾಮತದವರ ಮರಳು ಗೌರಿ ಪೂಜೆ ಹೀಗೆ ಜನಪದದ ಆಚರಣೆ ವಿಧವಿಧವಾಗಿ ಗಂಗೆಯನ್ನೇ ಪ್ರಧಾನಿಸಿವೆ.

ಪ್ರಸ್ತುತ ಜನಪದ ಆಚರಣೆ ಮಾಸಿವೆ. ಮಲೆನಾಡು ಭಾಗದಲ್ಲಿ ಶಿಷ್ಟ ಸಂಪ್ರದಾಯದ ಪ್ರಭಾವ ಕಂಡುಬರುತ್ತಿದೆ. ಈ ಸಂಪ್ರದಾಯದಲ್ಲಿ ಜನಪದದ ನೈಜತೆ ಇರುವುದಿಲ್ಲವಾದರೂ ಇಲ್ಲೂ ಕೂಡ ಜನಪದರ ಪ್ರಭಾವವಿದೆ. ಶಿಷ್ಟ ಸಂಪ್ರದಾಯದಲ್ಲಿ ಪರ್ಜನ್ಯ ಪ್ರಧಾನವಾಗುತ್ತಾನೆ. ನೀರಿನ ಬಂಡಿಯನ್ನು, ಭೂಮಿಯನ್ನು ಪತ್ನಿಯನ್ನಾಗಿಸಿಕೊಂಡ ಈತನದು ಮಳೆ ತರುವ ಕೆಲಸ, ಮೋಡದ ದೇವತೆಯೀತ. ವರುಣ ಮೂಲತಃ ಮಳೆ ತರುವ ದೇವತೆಯಾದರೂ ನಂತರದಲ್ಲಿ ಈತನ ಸ್ಥಾನವನ್ನು ಪರ್ಜನ್ಯ ಕಸಿದುಕೊಂಡಂತೆ ಕಂಡುಬರುತ್ತದೆ. ಆದಾಗ್ಯೂ ಕಲಶ ಪೂಜೆಯಲ್ಲಿ 'ಓಂ ಭೂರ್ಭುವಸ್ವಃ ವರುಣಾಯ ನಮಃ' ಎಂದೇ ಕರೆಯಲಾಗುತ್ತದೆ. ಶಿಷ್ಟ ಸಂಪ್ರದಾಯದಲ್ಲೂ ಗಂಗೆಯನ್ನು ವಿಧವಿಧವಾಗಿ ಸ್ತುತಿಸಲಾಗಿದೆ.

'ಓಂ ಇಮಂ ಮೇ ಗಂಗೇ ಯಮುನೇ ಸರಸ್ವತಿ।
ಶುತುದ್ರಿ ಸ್ತೋಮಂ ಸಚತಾ ಪುರುಷ್ಣ್ಯಾ

ಅನಿಕ್ಕ್ಯಾ ಮರುದ್ವೃರ್ದೆ ವಿತಸ್ತಯಾರ್ಜೀಕೀಯೇ
ಶೃಣಹ್ಯಾಸು ಷೋಮಯಾ॥'

ಅದೇ ಅಂತರಿಕ್ಷದಿಂದ ಬಂದ ಮಳೆಯ ರೂಪದ ಆಪೋ ದೇವತೆಗಳು ನಮಗೆ ಆರೋಗ್ಯ ಸುಖ ಶಾಂತಿ ನೀಡಲಿ ಎಂಬುದಾಗಿ ಅಥರ್ವಣದಲ್ಲಿ :

'ಶಂ ನ ಆಪೋ ಧನ್ವನ್ಯಾ ಶಮು ಸಂತ್ವನೂಪ್ಯಾ

ಶಂನ: ಖನಿತ್ರಮಾ ಆಪ: ಶಮಯಾ:

ಕುಂಭ ಅಭೃತಾ: ಶಿವನ: ಸಂತು ವಾರ್ಷಿಕೀಃ' ಎನ್ನಲಾಗಿದೆ.

ಇಲ್ಲಿಯೂ 'ಜೀವಂಗಳಿಗೆಲ್ಲ ಉದಕವೇ ಪ್ರಾಣವಾಗಿ' ಎಂಬಂಶ ಗಮನಾರ್ಹ. ಪುರಾಣಗಳಲ್ಲಿ ಪ್ರತಿ ನದಿಗಳಿಗೂ ಒಂದೊಂದು ಕಥೆಯಿದೆ, ಸ್ತುತಿಯಿದೆ. 'ಅಸ್ಯಾಃ ಪರತರಂ ತೀರ್ಥಂ ನಭೂತಂ ನ ಭವಿಷ್ಯತಿ' ಅಂದರೆ ಗಂಗೆಗಿಂತ ಶ್ರೇಷ್ಠ ತೀರ್ಥ ಹಿಂದೂ ಇರಲಿಲ್ಲ, ಮುಂದೂ ಇರುವುದಿಲ್ಲ. ಭಗಿರಥ ಗಂಗೆಯನ್ನು ಭುವಿಗೆ ತಂದದ್ದರಿಂದ ಆಕೆಗೆ ಭಾಗಿರಥಿ ಎಂತಲೂ ಕರೆಯಲಾಗಿದೆ. ಸಾಂಕೇತಿಕವಾಗಿ ಭಾಗಿರಥಿ ಸಂಕ್ರಮಣ ಆಚರಣೆ ರೂಢಿಯಲ್ಲಿದೆ. ಕೊಡಗಿನ ಬಾಗಮಂಡಲದಲ್ಲಿ ತುಲಾ ಸಂಕ್ರಮಣದಂದು ವಿಶೇಷ ಪೂಜೆ ನಡೆಯುತ್ತದೆ. ಇಲ್ಲಿ ಕಾವೇರಿ, ಕನ್ನಿಕಾ, ಸುಜ್ಯೋತಿ ನದಿಗಳು ಹುಟ್ಟುತ್ತವೆ. ಕಾವೇರಿಯನ್ನು ದಕ್ಷಿಣ ಗಂಗೆ ಎಂದು ಕರೆಯಲಾಗಿದೆ. ಉತ್ತರ ಕನ್ನಡದ ಅಘನಾಶಿನಿಗೆ ಪಾಪ ತೊಳೆಯುವ ನದಿಯೆಂಬ ಹೆಸರು ಇದೆ. ಹೀಗೆ ಪ್ರತಿ ಶುಭಶುಭ ವೇಳೆಯಲ್ಲೂ ಗಂಗೆಗೆ ಪ್ರಾಧಾನ್ಯತೆ ಇದೆ. ಕಳಶದ ಮೂಲಕ ಜಲತರುವ ಕ್ರಿಯೆ, ಗಂಗೆ-ಗೌರಿ ಪೂಜೆ, ಕಳಶ ಸ್ಥಾಪನೆ ಇಲ್ಲೆಲ್ಲ ನೀರೇ ಪ್ರಧಾನ.

## ಹುಯ್ಯೋ ಹುಯ್ಯೋ ಮಳೆರಾಯ!

ನಾಡಿಗೆ ಮಳೆ ಬಾರದೇ ಇದ್ದಾಗ ದೇವರ ಮೊರೆ ಹೋಗುವುದು ಸಹಜ ಅಂತಹ ಸಂದರ್ಭದಲ್ಲಿ ನಡೆಸುವ 'ಕಾರೀರಇಷ್ಟಿ' ಎನ್ನುವ ಹೋಮದಲ್ಲಿ ಈ ಪುನರ್ನವ ಸಸ್ಯವನ್ನು ಸಮಿತ್ತನ್ನಾಗಿ ಆಹುತಿ ಕೊಟ್ಟಾಗ ಮಳೆ ಬರುವದೆಂಬ ನಂಬಿಕೆ. ಇದನ್ನು ನಾವು ತೈತ್ತರೀಯಸಂಹಿತೆ ಸಾಯಣ ಭಾಷ್ಯದಲ್ಲಿ ನೋಡಬಹುದು.

'ಸೋಯಂ ಪುನರ್ನವಜನ್ಯೋ ಧೂಮ: ಹಿರಣ್ಯಕೇಶ:
ಅಗ್ನಿಕೇಶ ಸ್ಥಾನೀಯಾ ಜ್ವಾಲಾ ಯೇನ ಧೂಮೇನ ಸಹೋತ್ಪದ್ಯಂತೇ
ರಜಸೋ ಮೇಘರೂಪಸ್ಯ ವಿಸಾರೇ ಪ್ರಸರಣೇ ಯಥಾ ವಾಯು:
ಕಂಪಮಾನ: ಶೀಘ್ರಗತಿಯುಕ್ತ: ತದ್ವದಯಂ ಮೇಘಾತ್ಮಾ
ಸೋಽಯಮೀದೃಶೋ ಧೂಮೋಽಸ್ಮದರ್ಥಂ ವೃಷ್ಟಿಮ್
ಉತ್ಪಾದಯತು, ಉಷಸೋ ನ ವೇದ ಸೂರ್ಯೋದಯೋ
ಯಥಾ ನ ಜ್ಞಾಯತೇ ತಥಾ ಮೇಘಸಮೃದ್ಧಿರಸ್ತು ಇತ್ಯರ್ಥ:'

–ಸಾಯಣ ಭಾಷ್ಯ

ಪುನರ್ನವ ವೃಕ್ಷದ ಸಮಿತ್ತುಗಳನ್ನು
'ಹಿರಣ್ಯಕೇಶೋ ರಜಸೋ ವಿಸಾರೇಽಹಿರ್ಧುರ್ನಿರ್ವಾತ

ಇವ ಧೃಜಿಮಾತ್/
ಶುಚಿಭ್ರಾಜಾ ಉಷಸೋ ನ ವೇದ
ಯಥಾಸ್ವತೀರಪಸ್ಯುವೋ ನ ಸತ್ಯಾ:

–ತೈತ್ತರೀಯಸಂಹಿತೆ 3.1.11.4

ಎಂಬ ಈ ಮಂತ್ರವನ್ನು ಪಠಿಸುತ್ತ 'ಆಹವನೀಯ' ಎಂಬ ಅಗ್ನಿಗೆ ಆಹುತಿ ನೀಡಿದಾಗ ಉಂಟಾಗುವ ಧೂಮವು ಬಂಗಾರದ ಜ್ವಾಲೆಯೊಡನೆ ಮೋಡಗಳನ್ನು ತಲುಪುತ್ತದೆ. ಕೂಡಲೇ ಅಧಿಕ ಪ್ರಮಾಣದಲ್ಲಿ ಮಳೆಯಾಗುವದು. ಕಪ್ಪಾದ ದಟ್ಟ ಮೋಡಗಳಿಂದಾಗಿ ಸೂರ್ಯನ ಕಿರಣಗಳು ಕಾಣದಂತಾಗುತ್ತದೆ ಎನ್ನುತ್ತದೆ.

ಮಳೆ ಬಾರದಿದ್ದಾಗ ಪರ್ಜನ್ಯ ಜಪದ ಪದ್ಧತಿ ಶಿಷ್ಟ ಸಂಪ್ರದಾಯದಲ್ಲಿ ಕಾಣಬಹುದು. ಇಲ್ಲಿ ರುದ್ರಾಭಿಷೇಕದ ಮೂಲಕ ಆಚರಣೆ ಇರುತ್ತದೆ. ಶಿವನ ಒಲುಮೆ ಮಳೆಗೆ ಕಾರಣ. ಶಿವನ ಅಷ್ಟಮೂರ್ತಿಗಳಲ್ಲಿ ನೆಲ,ನೀರು, ಗಾಳಿ, ಮುಗಿಲು, ಬೆಂಕಿ, ನೇಸರು, ಚಂದಿರ, ಆತ್ಮ ಬರುತ್ತದೆ. ಪರ್ಜನ್ಯ ಜಪದಲ್ಲಿ ರುದ್ರನಿಗೆ ಅಭಿಷೇಕ ಮಾಡಿದ ನೀರು ಹತ್ತಿರದ ಹೊಳೆಗೆ ಅಥವಾ ಕೆರೆಗೆ ಹರಿಸುವ ಪದ್ಧತಿ ಇದೆ. ಉತ್ತರ ಕನ್ನಡ ಜಿಲ್ಲೆ, ಸಿದ್ದಾಪುರ ತಾಲ್ಲೂಕು ಬೀಳಗಿಯಲ್ಲಿ ಆಂಜನೇಯನನ್ನು ಪೂಜಿಸಿ ಅಭಿಷೇಕ ಮಾಡುತ್ತಾರೆ. ಈ ಅಭಿಷೇಕದ ನೀರು ಬಾಳೆ ವಗದಿಯ ಮೂಲಕ ಸುಮಾರು ಅರ್ಧ ಕಿಲೋಮೀಟರ್ ದೂರದ ನದಿಗೆ ಸೇರುತ್ತದೆ.

ಮಲೆನಾಡ ಭಾಗದ ಕೆರೆಗಳಲ್ಲಿ ಗಜಲಕ್ಷ್ಮಿ ಫಲಕವಿರುತ್ತದೆ.[14] ಸಂದರ್ಭಕ್ಕೆ ಆಗಾಗ್ಗೆ ಪೂಜೆ ನಡೆಯುತ್ತದೆ. ಗಜಲಕ್ಷ್ಮಿಯನ್ನು ಸಮೃದ್ಧಿಯ ಸಂಕೇತವೆನ್ನಲಾಗುತ್ತದೆ. ಇದರೊಂದಿಗೆ ತಾಂತ್ರಿಕ ನೆರಳು ಕೂಡ ನೀರಿಗೆ ಪ್ರಭಾವ ಬೀರಿದೆ ಎನ್ನಲು ಕೆರೆ ಕಮಲವ್ವನ ಆರಾಧನೆ ಅರೆ ಮಲೆನಾಡಿನ ಬಳ್ಳಿಗಾಮೆಯಲ್ಲಿ, ಚುರ್ಚುಗುಂಡಿಗಳಲ್ಲಿ ಕಾಣ ಬಹುದು. ಶಿವಮೊಗ್ಗ ಜಿಲ್ಲೆಯ ಸಾಗರದ ಸಂಗ್ಯ, ಸೊರಬದ ಉಳವಿ,ಚಿಟ್ಟೂರುಗಳಲ್ಲಿ, ಶಿಕಾರಿಪುರದ ಅಮಟೆಕೊಪ್ಪದಲ್ಲಿ ಕೃಷಿ ಆವಂದ್ಯ ಕಲ್ಲದ ಶಿಲ್ಪಗಳನ್ನು ಕಾಣಬಹುದು. ಇವೆಲ್ಲವೂ ಪ್ರಬಲ ಸಾಂಕೇತಿಕ ಕಲ್ಪಗಳ ನೆರಳುಗಳು.

## ಪಾಪದ ಕೆಲಸ, ಮಳೆರಾಯನಿಗೆ ಕೋಪ

ಹೀಗೆ ಶಿಷ್ಟ, ಜನಪದ ಆಚರಣೆಗಳಲ್ಲಿ ಒಲುಮೆಯೇ ಪ್ರಧಾನವಾಗಿದ್ದರ ಹಿನ್ನೆಲೆಯಲ್ಲಿ ಭೀತಿ ಎದ್ದು ಕಾಣುತ್ತದೆ. ಹಾಗೆಯೇ ಕೃಷಿಯೇ ಬೆನ್ನೆಲುಬಾದ ಕೃಷಿಕನಿಗೆ ಇದಕ್ಕೆ ಪೂರಕವಾದ ಕೆಲವು ರೂಢಿ ಸಂಪ್ರದಾಯಗಳನ್ನು ಗಮನಿಸಬಹುದು. ಇಲ್ಲಿ ವನದೇವತೆ ಆರಾಧನೆ, ಕಾಯ್ದಿಟ್ಟ ವನ, ದೇವರಬನ, ಕೋಣನತಲೆ, ಭೂತಾರಾಧನೆ ಹಲವು ಭೂತ ದೈವಗಳ, ಹುಲಿಯಪ್ಪ ಇತ್ಯಾದಿ ಆರಾಧನೆಗಳೊಂದಿಗೆ ಮುಸ್ಲಿಮ್ ಜನಾಂಗ ಕೂಡ ಅತಿ ಪಾಪವನ್ನು ನಾವು ಮಾಡುತ್ತಿರುವುದರಿಂದ ಅನಾವೃಷ್ಟಿ ಉಂಟಾಗಿದೆ. ಅಲ್ಲಾನನ್ನು ಪ್ರಾರ್ಥಿಸೋಣ ಎನ್ನುವಲ್ಲಿ, ಇದೇ ನೀತಿ ಕ್ರಿಶ್ಚಿಯನ್ ಸಮುದಾಯದಲ್ಲೂ ಕಾಣುವುದರಿಂದ ನಮ್ಮ ಇಂತಹ ಎಲ್ಲ ಆರಾಧನೆಯಲ್ಲಿ ಪ್ರಕೃತಿಯೇ ಪ್ರಧಾನ.

ಜನಪದರಲ್ಲಿ ನಂಬಿಕೆಯ ಪರಿ: ಆರಾಧನೆ ಸ್ತುತಿಯಿಂದ ಹೊರತಾಗಿ ಅನಾದಿಯಿಂದಲೂ

ಬಂದಂತಹ ಕೆಲವು ನಂಬಿಕೆಗಳನ್ನು ಗಮನಿಸಬೇಕಾಗುತ್ತದೆ. 'ವೇದ ಸುಳ್ಳಾದರೂ ಗಾದೆ ಸುಳ್ಳಲ್ಲ' ಎಂಬ ಅನುಭವ ಜನ್ಯ ನಂಬಿಕೆಗಳು ಹಲವಾರು. ಇಲ್ಲೂ ಕೂಡ ಇಂತಹ ನಂಬಿಕೆಗಳಲ್ಲಿ ಪುರಾಣದ ಸ್ಪರ್ಶವಿದೆ, ಶಿಷ್ಟದ ಸ್ಪರ್ಶವೂ ಇದೆ. ಹೀಗೆ ಈ ಎಲ್ಲ ಸಂಸ್ಕೃತಿಯಲ್ಲೂ ನಾಗರೀಕತೆಯ ಪ್ರಭಾವವಿದ್ದಾಗ್ಯೂ 'ರೂಢಿಗತ' ಎಂಬಂಶವನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ನಾವು ಇಂತಹ ಹಲವಾರು ಸಂಸ್ಕೃತಿಯನ್ನು ವೈಜ್ಞಾನಿಕ ವಿಶ್ಲೇಷಣೆ ಮಾಡುವ ಅವಶ್ಯಕವೂ ಇದೆ.

'ಕಾಡಿನ ಹಳ್ಳ ನಂಬ ಬೇಡ, ಊರಾಗಿನ ಕುಳ್ಳನ್ನ ನಂಬಬೇಡ' ಮಲೆನಾಡ ಆರ್ಭಟದ ಮಳೆಯ ಕುರಿತಾದ ಈ ನಾಣ್ಣುಡಿಯೊಂದಿಗೆ

'ಒಕ್ಕಲು ಕೇರ್‍ಯಾಗೆ ಮಳೆರಾಯ
ಅವು ಮಕ್ಕಳ ಮಾರ್‍ಯಾರೋ ಮಳೆರಾಯ
ಮಕ್ಕಳ ಮಾರಿ ರೊಕ್ಕ ತಕ್ಕೊಂಡು
ಭತ್ತಾಂತ ತಿರುಗ್ಯಾರೋ ಮಳೆರಾಯ'

ಎಂಬ ಬರಗಾಲದ ಹಾಡು ಕೂಡ ಈ ಭಾಗದ ವೈಪರೀತ್ಯವನ್ನು ದೃಢಪಡಿಸಿವೆ. ಈ ವೈಪರೀತ್ಯದ ಇನ್ನೊಂದು ಪ್ರಬಲ ಆಂಶವೆಂದರೆ 'ರಾಜನ್ ಹಾಯುವುದು'. ಈ ರಾಜನ್ ಹಾಯುವುದು ಎಂದರೆ ಬಿದಿರು ಅಕ್ಕಿ ಬರುವುದು. ಇದು ಬಂದರೆ ಬರಗಾಲದ ಮುನ್ಸೂಚನೆ ಎಂಬ ನಂಬಿಕೆಯಿದೆ.

ಮಳೆ ಅತಿಯಾದರೂ ಕೃಷಿಕನಿಗೆ ಬವಣೆ ತಪ್ಪಿದ್ದಲ್ಲ. ಮಲೆನಾಡಿನಲ್ಲಿ ಇಂತಹ ವೇಳೆ ಕಿರಿಯ ಬಾಲಕ ಬಾಲಕಿಯರನ್ನು ಬೆತ್ತಲೆ ಮಾಡಿ ಅಂಗಳದಲ್ಲಿ ಕೆಂಡ ಸುರಿಯುವುದು, ದೊಂದಿ ಹಚ್ಚಿ ನೆಡುವುದು ಒಂದು ಪದ್ಧತಿ.

ಮಳೆಯನ್ನು ಬಯಸಿ, ಮುನ್ಸೂಚನೆ ಕುರಿತಾಗಿ, ಮಳೆಬಾರದಿದ್ದಾಗ ಇರುವ ನಂಬಿಕೆಗಳು ಹಲವಾರು. ಇಲ್ಲಿ ಪ್ರಾದೇಶಿಕ ಭಿನ್ನತೆಯೂ ಕಂಡುಬರುತ್ತದೆ. ತೊನ್ನು ಇದ್ದವರು ಸತ್ತು ಅವರನ್ನು ಹೂಳಿದರೆ ಮಳೆ ಆಗುವುದಿಲ್ಲ. ಚಂದ್ರನ ಸುತ್ತು ಗೂಡು ಕಟ್ಟಿದರೆ ಮಳೆ ದೂರ, ದೂರ ಕಟ್ಟಿದರೆ ಮಳೆ ಹತ್ತಿರದಲ್ಲಿದೆ. ಸೂರ್ಯನ ಸುತ್ತ ಗೂಡು ಕಟ್ಟಿದರೆ ಸೂರು ಹನಿ ತಪ್ಪುವುದಿಲ್ಲ, ಏಡಿ ಏರಿ ಹತ್ತಿದರೆ ಮಳೆ ಜಾಸ್ತಿ. ಜೇನು ತುಪ್ಪ ತೆಳುವಾದರೆ ಮಳೆ ಆರಂಭ, ದಪ್ಪವಾದರೆ ಮಳೆ ದೂರ. ಮುಂಗಾರು ವೇಳೆಗೆ ಸೊಳ್ಳೆ ಅತಿಯಾಗಿ ಕಡಿದಲ್ಲಿ ಮಳೆ ಶೀಘ್ರ, ನೊಣ ಕಡಿದರೆ, ಕಟ್ಟಿರುವೆ ಸಾಲುಗಟ್ಟಿದರೆ, ಬೆಳ್ಳಕ್ಕಿ ಬ್ಯಾಣದಲ್ಲಿ ಗುಂಪಾಗಿ ಕುಳಿತರೆ, ಮಳೆ ಚಿಟ್ಟೆ ನೆಲ ಮಟ್ಟದಲ್ಲಿ ಹಾರಾಡುತ್ತಿದ್ದರೆ, ಇರುವೆ ಹೆಚ್ಚು ಹರಿಯುತ್ತಿದ್ದರೆ, ಮಿಣುಕು ಹುಳು ಹೆಚ್ಚಾದರೆ, ಇಬ್ಬನಿ ಜಾಸ್ತಿ ಬಿದ್ದರೆ, ಕೊಡತಿ ಹುಳು ಎದ್ದರೆ, ಒರಲೆ (ಗೆದ್ದಲು) ಎದ್ದರೆ, ಜಾಲದ ಹುಳು ಎದ್ದರೆ ಹೀಗೆ ಇಂತಹ ಸೂಚನೆಗಳು ಮಳೆ ತರುವ ಆಶಾಭಾವನೆಯ ನಂಬಿಕೆಗಳು. ಶುಭ ಸೂಚ್ಯದ ನಂಬುಗೆಗಳೊಂದಿಗೆ ಅಶುಭ ಸೂಚ್ಯದ ನಂಬಿಕೆಯ ಪರಿಯಲ್ಲಿ ಜೇನು ಗಿಡುಗ ಹಾರುತ್ತ ಕೂಗಿದರೆ, ಕೊಕ್ಕರೆ ಹಾರತ್ತ ಮುಂದೆ ಹೋದರೆ ಅದು ಬರದ ಸೂಚನೆ ಎಂತಲೂ, ಬೆಳದಿಂಗಳ ಹಕ್ಕಿ ಕೂಗಲು ಶುರು ಮಾಡಿದರೆ ಮಳೆಗಾಲ ಮುಗಿದ ಸೂಚನೆ. ಹೀಗೆ ಇಂತಹ ಅಸಂಖ್ಯ ನಂಬಿಕೆಗಳು ಇಂದಿಗೂ ಗಟ್ಟಿಗೊಂಡಿರುವುದರೊಂದಿಗೆ ಅವು ಹೆಚ್ಚಾಗಿ ಪ್ರಾಣಿ, ಪಕ್ಷಿ, ಕೀಟ, ಸಸ್ಯಗಳನ್ನು ತಗುಲಿಕೊಂಡಿರುವುದು ಗಮನಾರ್ಹ.

ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕು ಮಂಚಿ ಗ್ರಾಮದಲ್ಲಿ ಪ್ರತಿ ವರ್ಷ ಚೈತ್ರ ಶುದ್ಧ ನವಮಿಯಂದು ವಿಶಿಷ್ಟ ಜಾತ್ರೆ ನೆರೆಯುತ್ತದೆ. ಅಂದು ಅಲ್ಲಿ ಅನುಷ್ಠಾನದಲ್ಲಿದ್ದವರು ಬೇರು ಸಹಿತದ ಮರಗಳನ್ನು ಕಿತ್ತು ತರುತ್ತಾರೆ. ಆ ಮರ ಕಿತ್ತು ತರುವವರು ಬೇರೆ ಬೇರೆ ದಿಕ್ಕಿಗೆ ಹೋಗಿರುತ್ತಾರೆ ಬರುವಾಗಲೂ ಬೆರೆ ಬೇರೆ ದಿಕ್ಕಿನಿಂದ ಅಲ್ಲಿನ ಕೆರೆಯ ಸಮೀಪ ಬರುತ್ತಾರೆ. ಆಗ ಬರುವವರ ಸಂಖ್ಯೆ, ಸಮಯ, ತಂದ ಮರದ ಲಕ್ಷಣ ಮಳೆಗಾಲವನ್ನು ಸೂಚಿಸುತ್ತದೆ.

ಕಪ್ಪೆಗೂ ಮಳೆಗೂ ನಂಟು ಎಂದು ಭಾವಿಸಿದವರು ಕೇವಲ ಭಾರತೀಯರಷ್ಟೇ ಅಲ್ಲ ವಿದೇಶಗಳಲ್ಲೂ ಇಂತಹ ನಂಬಿಕೆ ಇದೆ. ಮಲೆನಾಡಿನಲ್ಲಿ ಮಳೆ ಬಾರದಿದ್ದಾಗ ಜರಡಿಯಲ್ಲಿ ಮೊಂಡರುಗಪ್ಪೆ ಹಾಕಿಕೊಂಡು ಹುಡುಗ,ಹುಡುಗಿಯರು ಎಲ್ಲರ ಮನೆಬಾಗಿಲಿಗೆ ಹೋಗಿ ನೀರು ಹುಯ್ಯಿಸಿಕೊಳ್ಳುವ ಪರಿಯುಂಟು.

ಬರಗಾಲ ಬಸಪ್ಪ, ಗಡಿಮಾರಿಯರನ್ನು ಊರುಗಡಿ ದಾಟಿಸಿದರೆ ಬರಗಾಲ ತಪ್ಪುತ್ತದೆ ಎಂಬ ನಂಬಿಕೆಯೂ ಇದೆ.

ಇನ್ನು ಶಿಷ್ಟ ನಂಬಿಕೆಗಳಲ್ಲಿ ಮಳೆಬಾರದಿದ್ದಾಗ, ಶೃಂಗಮುನಿ ಕಲ್ಲು, ಮಳೆಕಲ್ಲು, ಚಂಡೇಶ್ವರರನ್ನು ನೀರಿನಲ್ಲಿ ಮುಳುಗಿಸಿ ಇಡುವುದು, ಶಿವನನ್ನು ಒಲಿಸಿಕೊಂಡರೆ ಮಳೆ ಬರುತ್ತದೆ, ಮಳೆಗಾಗಿ ಪುರಾಣ ಪಠಣ, ಯಕ್ಷಗಾನ, ಈಶಾನ್ಯ ಭಾಗದಲ್ಲಿ ಮೋಡ ಕಪ್ಪು ಕಟ್ಟಿದರೆ ಮಳೆ ರಭಸದಿಂದ ಬರುತ್ತದೆ, ಮಳೆ ತಿಂಗಳಿನಲ್ಲಿ ಮದುವೆ ಇಟ್ಟುಕೊಂಡರೆ ಮಳೆ ಬೇಡವೆಂದು ಹರಕೆ ಎತ್ತಿಡುವುದು, ಸಿಡಿಲು ಬಡಿದರೆ ಶಾಂತಿ, ಹೋಮ, ಹವನ ಮಾಡಿಸಬೇಕು ಎಂಬ ನಂಬಿಕೆ, ಚೊಚ್ಚಲ ಮಕ್ಕಳಿಗೆ ಸಿಡಿಲು ಬಡಿಯುತ್ತದೆ ಇಂತಹ ಇನ್ನೂ ಹಲವಾರು ನಂಬುಗೆಗಳು ಪ್ರಸ್ತುತ ಅಸ್ತಿತ್ವದಲ್ಲಿವೆ.

ಮಳೆ ನಕ್ಷತ್ರಗಳಿಗೊಂದೊಂದು ಗಾದೆಯಿದೆ. ಎಲ್ಲೆಡೆಯಲ್ಲಿಯೂ ಪ್ರಚಲಿತವಿದ್ದರೂ ಇವೂ ಕೂಡ ಪ್ರಾದೇಶಿಕ ಭಿನ್ನತೆಯಿಂದ ಕೂಡಿವೆ. ಮಳೆ ಶಕುನದ ಕುರಿತು ಕೂಡ ಇದೇ ಅಭಿಪ್ರಾಯವಿದೆ ಎನ್ನಬಹುದು. ಕೃಷಿ ಅಥವಾ ನೀರಿಗೆ ಸಂಬಂದಿಸಿದಂತೆ ಸ್ವಾರಸ್ಯ ವಿಚಾರವೆಂದರೆ ಭಾದ್ರಪದ ಮಾಸದಲ್ಲಿ ಭತ್ತದ ತೆನೆಯ ಮೇಲೆ ಬಿದ್ದ ಮಂಜಿನ ಹನಿಯನ್ನು 'ಕೊಮಾರನ ಪೀರ್ಯ' (ಜೋಕುಮಾರ) ಎನ್ನಲಾಗುತ್ತದೆ. ರಾತ್ರಿ ವೇಳೆ ನೀರು ಮುಟ್ಟುವ ಮುನ್ನ ಎಚ್ಚರಿಸಿ ನೀರು ಮುಟ್ಟಬೇಕು. ಮಳೆ ಬರದೆ ಪೈರುಗಳಲ್ಲಿ ಹುಳು ಹತ್ತಿದರೆ ಸುಟ್ಟ ಬಿದಿರನ್ನು ಗದ್ದೆಯಲ್ಲಿ ತಲೆ ಕೆಳಗಾಗಿ ಹುಗಿಯುವ ಪರಿ ಕೂಡ ಕಂಡುಬರುತ್ತದೆ.

## ನೀರು ಕುರಿತ ರೋಚಕ ಸಂಗತಿಗಳು

ಜಲಶೋಧದ ಕುರಿತು ಇರುವ ನಂಬಿಕೆಗಳು, ಪದ್ಧತಿ, ಆಚರಣೆಗಳು. ಇಲ್ಲಿ ಸಾಂಪ್ರದಾಯಿಕ ಪದ್ಧತಿಯಾಗಿ ಮಾರ್ಪಟ್ಟಿದ್ದರೂ ಜನಪದದ ಪ್ರಭಾವ ಇಲ್ಲವೆನ್ನುವಂತಿಲ್ಲ.

ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಬಾರಂಗಿಯ ಶಾಸನವೊಂದರಲ್ಲಿ–15 ಸಿದ್ಧರ ಸೋ(ಶೋ)ದದಿಂದ ಕೆರೆ ಕಟ್ಟಿದ ಉಲ್ಲೇಖವಿದೆ. ಜಲಶೋಧನೆ ಎಲ್ಲರಿಗೂ ಸಿದ್ಧಿಸುವ ವಿದ್ಯೆಯಲ್ಲ ಎಂಬ ನಂಬಿಕೆಯೂ ಇದೆ. ಮಲೆನಾಡ ಭಾಗದಲ್ಲಿ ಇಂತಹ ನಾಟಿ ತಜ್ಞರೂ ಇದ್ದಾರೆ. ಹಲವು ದೇವ, ದೇವತೆಗಳಲ್ಲಿ ಹೇಳಿಕೆ ತೆಗೆದು ಕೊಳ್ಳುವ ಪದ್ಧತಿಯೂ ಇದೆ.

ಸಸ್ಯಕ್ಕೂ ನೀರಿಗೂ ಪ್ರಬಲವಾದ ನಂಟಿದೆ: ಅತ್ತಿ, ಎಕ್ಕ, ಕುಂಬಸಿ (ಕುಮಚಲು), ಬೇವು ಇಲ್ಲಿ ಪ್ರಧಾನ ಸಸ್ಯಗಳು. ಈ ಗಿಡಗಳ ಹತ್ತಿರ ನೀರಿನ ಸೆಲೆ ಇರುತ್ತದೆ ಎಂದು ನಂಬಲಾಗುತ್ತದೆ. ಅದೇ ರೀತಿ ಹುತ್ತವಿದ್ದಲ್ಲಿ, ಪಶ್ಚಿಮ ಹಾಗೂ ಪೂರ್ವ ದಿಕ್ಕಿನಲ್ಲಿ ನೀರಿನ ಸೆಲೆ ಹೆಚ್ಚು. ಅರಳಿ, ಆಲ, ಅತ್ತಿ ಒಂದೇ ಕಡೆ ಇದ್ದಲ್ಲಿ, ಹುತ್ತಗಳಲ್ಲಿನ ರಂಧ್ರಗಳು ವಿಶೇಷವಾಗಿದ್ದಲ್ಲಿ, ಪಶ್ಚಿಮದಲ್ಲಿ ಅತ್ತಿ, ದಕ್ಷಿಣದಲ್ಲಿ ಕರಿ ಲಕ್ಕಿ, ಉತ್ತರಕ್ಕೆ ನೇರಳೆ ಗಿಡವಿದ್ದಲ್ಲಿ ಹೀಗೆ ಆಯಾ ಗಿಡ, ಪ್ರಾಕೃತಿಕ ರಚನೆಯನ್ವಯ ಜಲಶೋಧ ನಡೆದರೆ ಅದರ ವಿಧಾನಗಳೂ ಹಲವು ರೀತಿಯಲ್ಲಿರುತ್ತದೆ. ಹುಣಸೆ, ಎಕ್ಕ ಅಥವಾ ಕಬ್ಬಿಣದ ಕವಲು ಕಡ್ಡಿಯ ಮೂಲಕ ನೀರು ಪತ್ತೆಹಚ್ಚುವುದು, ತೆಂಗಿನಕಾಯಿ, ಬಂಗಾರದ ಮೂಲಕ, ಹೆಜ್ಜೆ ಗುರುತಿನ ಮೇಲೆ, ಧ್ವನಿ ಆಲಿಸಿ ಪತ್ತೆ ಹಚ್ಚುವುದು, ಜಲದ ಕಣ್ಣಿಗೆ ನವಿಲು ಗರಿಯನ್ನು ಸಿಕ್ಕಿಸುವುದರಿಂದ ನೀರು ಯಾವಾಗಲೂ ಬತ್ತುವುದಿಲ್ಲ, ನೀರು ಸಿಹಿಯಾಗಿರಲು ಬಾವಿಯ ತಳಕ್ಕೆ ನೆಲ್ಲಿ ಗಿಡದ ಹಲಗೆ ಹಾಕುವುದು, ಆರಿದ್ರಾ ನಕ್ಷತ್ರದಲ್ಲಿ ಬಾವಿ ತೋಡಬಾರದು, ಮದುವೆ, ಉಪನಯನವಾದ ವರ್ಷದಲ್ಲಿ, ಮನೆ ಹಿರಿಯ ಸತ್ತ ವರ್ಷದಲ್ಲಿ, ಗೃಹ ಪ್ರವೇಶದ ನಂತರ ಆರು ತಿಂಗಳು ಬಾವಿ ತೋಡಬಾರದೆಂಬ ಪದ್ಧತಿ ಕಂಡುಬರುತ್ತದೆ. ಹೆಚ್ಚಾಗಿ ಆರಾಧ್ಯ ದೈವವನ್ನು ಕರೆದುಕೊಂಡು ಬಂದು ಅದು ಸೂಚಿಸುವ ಸ್ಥಳದಲ್ಲಿ ಬಾವಿ ತೋಡಿಸುವ ವಿಧಾನವೂ ಇದೆ.

## ಸಾಂಪ್ರದಾಯಿಕ ನೀರು ನಿರ್ವಹಣೆಯ ಮುಂದುವರಿಕೆ

ಹೀಗೆ ಈ ಎಲ್ಲ ವಿಧಿ ವಿಧಾನಗಳ ತೌಲನಿಕ ಅಧ್ಯಯನದಲ್ಲಿ ಪ್ರಸ್ತುತತೆಯನ್ನು ಗಮನಿಸಬೇಕಾಗುತ್ತದೆ. ಮುಖ್ಯವಾಗಿ ಈ ನಂಬಿಕೆಗಳು ನಾಗರೀಕತೆಯ ಸೋಂಕನ್ನು ಹೊಂದಿದ್ದಾಗ್ಯೂ ರೂಢಿಯಲ್ಲಿವೆ ಎಂಬಂಶ ಸಮಾಧಾನಕರ. ಇತ್ತೀಚಿನ ದಿನಗಳಲ್ಲಿ ತಲೆದೋರಿರುವ ನೀರಿನ ಅಭಾವ ಗಮನಿಸಿ ಜನಪದದ ಬಹಳಷ್ಟು ಅಂಶಗಳನ್ನು ವೈಜ್ಞಾನಿಕ ವಿಶ್ಲೇಷಣೆ ಮಾಡುವ ಅವಶ್ಯವಿದೆ. ಇದರೊಂದಿಗೆ ಜಲ ಸಂರಕ್ಷಣೆ ಕುರಿತಾಗಿ ಜನಪದರಲ್ಲಿ ಎಂತಹ ವಿಧಾನವಿತ್ತು? ಇದರ ಬಗ್ಗೆ ಹೆಚ್ಚು ಆಸ್ಥೆ ವಹಿಸಬೇಕಾಗುತ್ತದೆ. ಈ ವಿಷಯಕ್ಕೆ ಒತ್ತುಕೊಟ್ಟು ಕೃಷಿ ಹೊಂಡದ ರಚನೆಯ ಬಗ್ಗೆ ಪ್ರಾಚೀನರು ತಮ್ಮ ಕೃಷಿ ಭೂಮಿಯಲ್ಲಿ ಒಂದೊಂದು ಹೊಂಡವನ್ನು ತೋಡಿಸಿಕೊಳ್ಳುತ್ತಿದ್ದುಂಟು. ನಂತರದಲ್ಲಿ ಅದಿಷ್ಟು ಜಾಗದಲ್ಲಿ ಇನ್ನಷ್ಟು ಬೆಳೆ ಬೆಳೆಯಬಹುದೆಂದು ಮುಚ್ಚಿದ ಉದಾಹರಣೆಯೇ ಬಹಳ. ಅದೇ ರೀತಿ ಕಾಡಂಚಿನ ನೀರು ಬಸಿದು ಕೆರೆಗೆ ಹೂಳು ತರದಂತೆ ನಿರ್ಮಿಸಲಾಗುತ್ತಿದ್ದ ಕಾಲುವೆ ನಿರ್ಮಾಣ, ಕೆರೆ ಸರಪಳಿ ವ್ಯವಸ್ಥೆ, ನೀರು ಹಂಚಿಕೆ ವಿಧಾನ ಇತ್ಯಾದಿಗಳ ಬಗ್ಗೆ ಸೂಕ್ತ ಹಾಗೂ ಅತಿ ಹೆಚ್ಚಿನ ಗಮನ ಹರಿಸಬೇಕಾಗಿದೆ.

**ಅಡಿ ಟಿಪ್ಪಣಿ:**

1. ಜೋಕುಮಾರ ನೆಂದರೆ ಷಣ್ಮುಖ, ಶಿವಪುತ್ರ, ಕಾಮರೂಪಿ ಎಂಬೆಲ್ಲ ಹೇಳಿಕೆಯಿದೆ. ಶಿವಲಿಂಗ ಕೂಡ ಶಿಶ್ನಾಕೃತಿ ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಶಿಷ್ಟ ಸಂಪ್ರದಾಯದಲ್ಲಿನ ಪರ್ಜನ್ಯ ಜಪ, ರುದ್ರಾಭಿಷೇಕದ ನೆಲೆ, ಹಿನ್ನೆಲೆಯ ಅವಲೋಕನವಾಗಬೇಕಿದೆ.

2. ಕೃಷಿ ಆವಂದ್ಯದ ಶಿಲ್ಪಗಳು ಶಿವಮೊಗ್ಗ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬಂದಿವೆ. ಇವುಗಳ ಕಾಲಮಾನ ಸುಮಾರು 16–17ನೇ ಶತಮಾನ. ಇದರ ಕುರಿತು ಡಾ॥ ಅ.ಸುಂದರರು ಇತಿಹಾಸ ದರ್ಶನ–9ರಲ್ಲಿ ವಿವೇಚಿಸಿದ್ದಾರೆ.

ಶಿಲ್ಪ ಲಕ್ಷಣ: ಇವುಗಳ ಭಂಗಿ ಸ್ವ-ಮೈಥುನ. ಹೆಣ್ಣು-ಯೋನಿಯಗಲಿಸಿ ತನ್ನ ಕೈಗಳಿಂದ ಸ್ವರತಿಯಲ್ಲಿ ತೊಡಗಿದ್ದರೆ, ಗಂಡು- ತನ್ನ ಶಿಶ್ನವನ್ನು ಎರಡು ಕೈಗಳಿಂದ ಹಿಡಿದುಕೊಂಡು ಸ್ವರತಿಯಲ್ಲಿ ತೊಡಗಿದಂತಹ ಭಂಗಿಯಿರುತ್ತದೆ ಆದರೆ, ಸ್ವ ಮೈಥುನವಲ್ಲ ಬದಲಿಗೆ ಮಿಥುನ ಕ್ರಿಯೆಗೆ ಸಿದ್ಧರಾಗಿ ಆಹ್ವಾನಿಸುವ ಭಂಗಿ. ಇಲ್ಲಿ ಜನನೇಂದ್ರಿಯವೇ ಕೇಂದ್ರ ಬಿಂದು. ಇದರೊಂದಿಗೆ ಅವರ ವೇಷ, ಭೂಷಣ, ತೊಡುಗೆಯನ್ನು ಗಮನಿಸಿದಾಗ ಆ ಕಾಲದ ಸದೃಢ ಪುರುಷ, ಸ್ತ್ರೀಯರ ಮಾಧರಿಯೇನೋ ಅನಿಸುತ್ತದೆ.

ಇದರ ಪ್ರಮಾಣದಲ್ಲಿ ನಿರ್ದಿಷ್ಟ ಶಿಳತೆಯೇನೂ ಇಲ್ಲ. ಒಂದು ಅಡಿ ಎತ್ತರದಿಂದ ಮೂರ್‍ನಾಲ್ಕು ಅಡಿ ಎತ್ತರದ ಶಿಲ್ಪಗಳನ್ನೂ ಕಾಣಬಹುದು. ಇಲ್ಲಿ ಪೂರ್ಣ ಪ್ರಮಾಣದ ಹಾಗೂ ಉಬ್ಬು ಶಿಲ್ಪದ ಕೆತ್ತನೆ ಕಂಡುಬರುತ್ತದೆ. ಅತ್ಯಂತ ಗಮನ ಸೆಳೆದ ಪ್ರತಿಮೆಗಳು ಸೊರಬ ತಾಲ್ಲೂಕಿನ ಉಳವಿ, ಚಿಟ್ಟೂರು ಕೆರೆ ಏರಿಯಲ್ಲೂ, ಸಾಗರ ಸಮೀಪ ಸಂಗಳದಲ್ಲಿಯೂ, ಶಿಕಾರಿಪುರ ತಾಲ್ಲೂಕು ಅಮಟೆಕೊಪ್ಪ ಕೆರೆಯ ಏರಿ, ಕವಲೇದುರ್ಗದ ಕೋಟೆಯ ಗೋಡೆ, ಸಿದ್ದಾಪುರ ತಾಲ್ಲೂಕು ಬಿಳಗಿ ಗೋಲಬಾವಿಯಲ್ಲೂ ನೋಡಬಹುದು.

ಶಿಲ್ಪಗಳ ರಚನೆಯ ಹಿನ್ನೆಲೆ: ಬಹುತೇಕ ಕೆರೆ ಕಟ್ಟೆಗಳ ಮೇಲಿರುವ ಇಂತಹ ಚಿತ್ರಣಗಳಿಗೆ ಇನ್ನೂ ಸಮರ್ಪಕವಾದ ವ್ಯಾಖ್ಯಾನ ಸಿಕ್ಕಿಲ್ಲ. ಗ್ರಾಮೀಣ ಜನತೆಯ ಅಭಿಪ್ರಾಯದಲ್ಲಿ ಹಲವು ನಂಬಿಕೆಗಳು ನುಸುಳಿವೆ. ಕೆಲವೆಡೆ ಇವನ್ನು ಉಗಿದು ಮುಂದೆ ಹೋಗುವ ಪದ್ಧತಿಯಿದ್ದರೆ, ನೋಡಿ ನಗಬಾರದು, ಫೋಟೊ ತೆಗೆಯಬಾರದು, ಇವರು ಕೆರೆಯನ್ನು ಕಟ್ಟಿದವರು-ವಡ್ಡಪ್ಪ, ವಡ್ಡವ್ವ ಎಂಬೆಲ್ಲ ಹೇಳಿಕೆಯಿದೆ. ಎಲ್ಲೂ ಪೂಜೆಗೊಳ್ಳುತ್ತಿರುವ, ದೇಗುಲ ನಿರ್ಮಿಸಿದ ಉದಾಹರಣೆ ಕಂಡು ಬರುತ್ತಿಲ್ಲ. ಮುಖ್ಯವಾಗಿ ಗಮನಿಸಬೇಕಾದ್ದು ಇವಿರುವ ಸ್ಥಳ ಇಲ್ಲಿ ಗೌಪ್ಯವಿಲ್ಲ ಎಲ್ಲವೂ ಬಯಲು ನಮ್ಮ ಸಂಪ್ರದಾಯ ಸ್ತ್ರೀಯ ತಾಯ್ತನವನ್ನು ಗಮನಿಸಿ ಆಕೆಯೇ ಕ್ಷೇತ್ರ ವೆಂದು ವರ್ಣಿಸುತ್ತದೆ. ಆಕೆ ಕ್ಷೇತ್ರವೆಂದಾದರೆ ಪುರುಷ ಬೀಜದ ಸಂಕೇತ. ಈ ಹಿನ್ನೆಲೆಯಿಂದ ಇವುಗಳಿರುವ ಸ್ಥಳದ ಹಿನ್ನೆಲೆಯನ್ನು ಗಮನದಲ್ಲಿಟ್ಟು ಅನುಲಕ್ಷಿಸಿದಾಗ ಕೆಲವು ಸೂಕ್ಷ್ಮ ಅರ್ಥಗಳು ಗೋಚರಿಸುತ್ತವೆ.

ಕೆರೆ ಕಟ್ಟೆಗಳ ಮೇಲೆ ರಚಿಸಿರುವ ಔಚಿತ್ಯವನ್ನು ಹೀಗೆ ವ್ಯಾಖ್ಯಾನಿಸಬಹುದಾಗಿದೆ. ಕೆರೆಯ ಒಂದೆಡೆ ನೀರು ಮಧ್ಯೆ ದಂಡೆ ಇನ್ನೊಂದೆಡೆ ಕೃಷಿ ಯೋಗ್ಯ ಭೂಮಿ. ಇಲ್ಲಿ ಕೃಷಿ ಭೂಮಿಯನ್ನು ಕ್ಷೇತ್ರವೆಂದು ಪರಿಗಣಿಸಬೇಕಾಗುತ್ತದೆ. ಯೋಗ್ಯ ಬೆಳೆಗೆ ನಿಯಮಿತ ಹಾಗು ಕಾಲಕ್ಕನುಗುಣವಾಗಿ ನೀರು ಅವಶ್ಯ ಹಾಗಾಗಿ ನೀರನ್ನು ಕೃತಕವಾಗಿ ಸಂಗ್ರಹಿಸಿಡಬೇಕಾಗಿದೆ ಅದೆ ದಂಡೆ ಅಥವಾ ಕಟ್ಟು. ಆರೋಗ್ಯವಂತರಿಂದ ಯೋಗ್ಯ ಪೀಳಿಗೆಯ ಉಗಮ ಹೇಗೋ ಹಾಗೆ ಕೃಷಿಯಲ್ಲಿಯೂ ಯೋಗ್ಯ ಕ್ಷೇತ್ರಕ್ಕೆ ಯೋಗ್ಯ ಬೀಜ ಅವಶ್ಯ. ಇಲ್ಲಿ ನೀರು ವೀರ್ಯವನ್ನು ಸೂಚಿಸುತ್ತದೆ.

ಉತ್ತಮ ಕ್ಷೇತ್ರ ಹಾಗು ಉತ್ತಮ ನೀರಿನಿಂದ ಯೋಗ್ಯ ಬೆಳೆ ಹೇಗೋ ಹಾಗೆ ಇಲ್ಲಿನ ಶಿಲ್ಪಗಳಲ್ಲಿ ಸಾಂಕೇತಿಕ ರೂಪದಲ್ಲಿ ಸದೃಢ ಪುರುಷ-ಸ್ತ್ರೀ ಭಂಗಿಯನ್ನು ಕಡೆಯಲಾಗಿದೆ. ಹೀಗೆ ಬೆಳೆಗೆ ನೇರ ಸಂಬಂಧಿಸಿದ ಇವುಗಳನ್ನು ಕೃಷಿ ಕಟ್ಟಳೆಯ ಸಾಂಕೇತಿಕ ಮೂರ್ತಿಗಳು ಎಂದು ತರ್ಕಿಸಬಹುದಾಗಿದೆ. ಬಹುತೇಕ ಕೆಳದಿ ಅರಸರ ಕಾಲದಲ್ಲಿ ಜನರು ಇವುಗಳನ್ನು ಸಮಯೋಚಿತವಾಗಿ ಅಂದರೆ ಬಿತ್ತನೆ, ಕೊಯ್ಲು ಇತ್ಯಾದಿ ಸಮಯದಲ್ಲಿ ಪೂಜಿಸುತ್ತಿದ್ದಿರಬಹುದು. ನೀರನ್ನು ಕಾಯ್ದುಕೊಳ್ಳುವ, ನೀರನ್ನು ಸಮರ್ಪಕವಾಗಿ ಬಳಸಿಕೊಳ್ಳುವ ಸಾಂಕೇತಿಕ ಶಿಲ್ಪ ಇವು ಎಂಬ ಅಭಿಪ್ರಾಯವು ಇದೆ.

ಇಂತಹ ಶಿಲ್ಪಗಳು ಯಾವುದೇ ಗಣ್ಯ ವ್ಯಕ್ತಿಗಳನ್ನು ಸೂಚಿಸದೆ ಸದೃಢ ವೀರ್ಯವಂತಿಕೆ, ಫಲವಂತಿಕೆಯನ್ನು ಸೂಚಿಸುವ ಪ್ರತಿಮೆಗಳಿವು ಎಂಬುದನ್ನ ಗಮನದಲ್ಲಿಡಬೇಕು. ಈ ಕೆರೆಕಟ್ಟೆಗಳ ಸಮೀಪದಲ್ಲಲ್ಲದೇ ಕೋಟೆ ದೇಗುಲಗಳಲ್ಲಿ ಇರುವ ಇಂತಹ ಚಿತ್ರಣಗಳು ಕೂಡ ಇವೇ ಗೂಢಾರ್ಥವನ್ನು ಒಳಗೊಂಡಿರುವ ಸಾಧ್ಯತೆಗಳಿವೆ.

3. ಲಜ್ಜಾಗೌರಿ-ಕಮಲಾತ್ಮಿಕೆ-ಕೆರೆಕಮಲವ್ವ ಎಂತೆಲ್ಲ ಕರೆಯುವ ಈಕೆ ತಾಂತ್ರಿಕ ಆಚರಣೆಯ ಯೋನಿ ಪೂಜೆಯ ಸ್ಥಾನದಲ್ಲಿ ಗುರುತಿಸಲಾಗುತ್ತದೆ. (ಇದರ ಕುರಿತು ಡಾ॥ ಅ.ಸುಂದರರು ಶಿವಮೊಗ್ಗ ಜಿಲ್ಲಾ ದರ್ಶನದಲ್ಲಿ ಸೂಚಿಸಿದ್ದಾರೆ). ಸ್ಥಳೀಯವಾಗಿ ಕೆರೆ ಬಳಿ ಇರುವುದರಿಂದ ದೃಷ್ಟಿಗೊಂಬೆ ಎನ್ನಲಾಗುತ್ತಿದೆ. ಮಕ್ಕಳಾಗದಿದ್ದಲ್ಲಿ ಪೂಜಿಸುವ ಪದ್ಧತಿ ಇಟ್ಟುಕೊಂಡಿರುವುದು ಕೂಡ ತಿಳಿದುಬರುತ್ತದೆ. ಆದರೆ, ಕೆರೆಗೆ ಸಂಬಂಧಿಸಿದಂತೆ ಏನು ಆರಾಧನೆ ನಡೆದಿರಬಹುದು ಎಂಬ ಬಗ್ಗೆ ಸುಳಿವು ಲಭ್ಯವಾಗಿಲ್ಲ.

4. ಝೀಯಸ್ ಅಮೇರಿಕನ್ ಇಂಡಿಯನ್ ಬುಡಕಟ್ಟು ಜನಾಂಗಗಳಲ್ಲಿ ಆಚರಣೆಗೊಳ್ಳುವ ಮಳೆ ದೇವತೆ. ಡಯೋನಿಸಸ್ ಗ್ರೀಸ್ ದೇಶದ ದೇವತೆ. (ಮಳೆ ಒಂದು ಜನಪದ ಅಧ್ಯಯನ-ಡಾ॥ಎಸ್.ಪಿ.ಪದ್ಮಪ್ರಸಾದ್).

5. ರಾಚಮ್ಮ-ರಾಜರಾಜೇಶ್ವರಿ ಬನಶಂಕರಿ, ಬಳಾರಿ, ಬನದೇವಿ ಇವೆಲ್ಲ ವನದೇವತೆಗಳೆ. ಸಾಗರ ತಾಲ್ಲೂಕಿನ ಯಲಕುಂದ್ಲಿ ಗ್ರಾಮದಲ್ಲಿ ರಾಚಮ್ಮನನ್ನು ಆರಾಧಿಸುತ್ತಿದ್ದು, ಆಕೆಯ ಹೆಸರಿನಲ್ಲಿ ಸುಮಾರು 30 ಎಕರೆ ಅರಣ್ಯವನ್ನು ಮೀಸಲಿಡಲಾಗಿದೆ.

6. ಬನದೇವತೆಯ ಸ್ಥಾನದಲ್ಲಿ ಈ ಹುಲಿಯಪ್ಪ ಬರುತ್ತಾನೆ. ಹೆಚ್ಚಾಗಿ ಉತ್ತರ ಕನ್ನಡ ಹಾಗೂ ದಕ್ಷಿಣ ಕನ್ನಡ, ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ ಭಾಗಗಳಲ್ಲಿ ಹಾಗೂ ತೀರ್ಥಹಳ್ಳಿ, ಹೊಸನಗರಗಳಲ್ಲಿ ಯಥೇಚ್ಛವಾಗಿ ಕಂಡು ಬರುತ್ತಿವೆ. ಸಾಗರ ತಾಲ್ಲೂಕಿನ ಹುಲಿದೇವರ ಬನದಲ್ಲಿ ಆರಾಧನೆಗೊಳ್ಳುತ್ತಿದ್ದು, ಹುಲಿ ಶಿಲ್ಪಕ್ಕೆ ಗುಡಿ ಕಟ್ಟಲಾಗಿದೆ. ಅದೇ ಇನ್ನು ಕೆಲವೆಡೆ ಹುಲಿಯಪ್ಪ ಎಂದು ಕರೆಯಲಾಗುತ್ತಿರುವ ಶಿಲ್ಪಗಳ ಲಕ್ಷಣಗಳನ್ವಯ ಅವು ಹುಲಿಯಲ್ಲ, ಸಿಂಹಗಳು! ಬಹುತೇಕ ಅವನ್ನು ನರಸಿಂಹನ ಮೂಲ ವಿಗ್ರಹಗಳೆಂದು ಗುರುತಿಸುವುದು ಸೂಕ್ತ ಎನಿಸುತ್ತದೆ. ಹುಲಿಯಪ್ಪನ ವಿಗ್ರಹ ಇರುವೆಡೆ ಉತ್ತರ ಕನ್ನಡದ ಅನೇಕ ಗ್ರಾಮಗಳಲ್ಲಿ ಇಂದಿಗೂ ಜೇಡಿ ಮಣ್ಣಿನ ಹುಲಿ ವಿಗ್ರಹಗಳನ್ನು ಹರಕೆ ನೀಡುವ ಪದ್ಧತಿ ಇದೆ. ಕುಮಟಾ ಭಾಗದ ಮೇಧಿನಿ ಗ್ರಾಮದಲ್ಲಿ ಸುಮಾರು ಕ್ರಿ.ಶ.17-18ರದ್ದು ಎನ್ನಬಹುದಾದ ಇಂತಹ ಹರಕೆ ವಿಗ್ರಹಗಳು ಕಂಡುಬಂದಿದೆ.

7. ಕೋಣನ ತಲೆ ಭೂತನ ಆರಾಧನೆ ಕೂಡ ವನದೇವತೆಗಳ ಸ್ಥಾನದಲ್ಲಿ ಸೇರಿಸಬಹುದು, ಇವುಗಳ ರಚನಾ ಕಾಲ ಕ್ರಿ.ಶ.4ನೇ ಶತಮಾನದಿಂದ 14ನೇ ಶತಮಾನದ ತನಕ ಗುರುತಿಸ ಬಹುದು. ಹೆಚ್ಚಾಗಿ ಇವು ಶಿವಮೊಗ್ಗ ಜಿಲ್ಲೆಯ ಸೊರಬ, ಶಿಕಾರಿಪುರ ಹಾಗೂ ಹಾವೇರಿ ಜಿಲ್ಲೆಯ ಹಿರೇಕೆರೂರು, ಹಾಂಗಲ್ಲ್ ತಾಲ್ಲೂಕಿನಲ್ಲಿ ಗಮನಿಸಬಹುದು. ಕೇವಲ ಕೋಣನ ತಲೆಯನ್ನು ಫಲಕದಲ್ಲಿ ರಚಿಸಲಾಗಿದ್ದು, ಎಲ್ಲೂ ಗುಡಿ ಕಟ್ಟಿದ್ದು ಕಂಡು ಬರುತ್ತಿಲ್ಲ. ಪ್ರತಿ ದೀಪಾವಳಿಯ ನರಕಚತುರ್ದಶಿಯಂದು ಪೂಜಿಸಿ ಬಲಿ ಕೊಡುವ ವಾಡಿಕೆ ಕೆಲವೆಡೆ ಕಂಡುಬಂದಿದೆ.

8. ತಿಂಗಳಮಾಮನ ಪೂಜೆ ಊರ ವಿಶಾಲ ಜಾಗೆಯೊಂದರಲ್ಲಿ ಹುಣ್ಣಿಮೆ ದಿನ ಬಣ್ಣ ಬಣ್ಣದ ರಂಗೋಲಿಯಲ್ಲಿ ತೇರಿನ ಚಿತ್ರ ಬರೆಯಲಾಗುತ್ತದೆ. ತೇರಿನ ಕಳಶದ ತುದಿಗೆ ಚಂದ್ರನನ್ನು ಬರೆದು, ಅಕ್ಕಿ ಅಥವಾ ರಾಗಿರೊಟ್ಟಿ ಈ ಚಿತ್ರದ ಎದುರು ಇಟ್ಟು ಪೂಜಿಸಲಾಗುತ್ತದೆ. ಕೋಲಾಟ ಮುಂತಾದ ಮೋಜಿನಾಟ ನಡೆಯುವ ಇದರ ಆಚರಣೆ ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕಿನ ಕೆಲ ಹಳ್ಳಿಗಳಲ್ಲಿ ಅಸ್ತಿತ್ವದಲ್ಲಿದ್ದುದು ತಿಳಿದು ಬಂದಿದೆ.

9. ಈ ಆಚರಣೆ ಪ್ರತಿವರ್ಷ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕೊರಕೋಡು ಗ್ರಾಮದಲ್ಲಿ ನಡೆಯುತ್ತದೆ.

10. ಈ ಆಚರಣೆ ಕೂಡ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಓರೇಚೌಟ ಗ್ರಾಮದಲ್ಲಿ ವರ್ಷಂಪ್ರತಿ ಆಚರಿಸಲಾಗುತ್ತದೆ. ಸೋಜಿಗವೆಂದರೆ ಈಚೆಗೆ ಬೇಸಿಗೆಯಲ್ಲಿ ಪೂಜೆ ಮಾಡುವ ಕೆರೆಯಲ್ಲಿ ಹಲವು ಬಾವಿಗಳು ಇದ್ದುದು ಕಂಡು ಬಂದಿದೆ. ಬಹುತೇಕ ಏಳು ಬಾವಿಗಳನ್ನು ನಿರ್ಮಿಸಿ, ಕೆರೆ ನಿರ್ಮಾಣ ಮಾಡಿದಂತೆ ತೋರುತ್ತದೆ. ಅಥವಾ ಕೆರೆಗೆ ನೀರು ಕೊರತೆಯಾದಾಗ ಬಾವಿ ತೆಗೆದು ನೀರು ಪೂರೈಸಿರಬಹುದಾಗಿದೆ.

11. ಗಂಗೆ ಏಳೋದು ಆಚರಣೆ ಹೆಚ್ಚಾಗಿ ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ಭಾಗಗಳಲ್ಲಿ ಕಂಡುಬಂದಿದೆ. ಏಕಾಏಕಿ ಎಲ್ಲೆಂದರಲ್ಲಿ ನೀರಿನ ಬುಗ್ಗೆ ಏಳುವುದಕ್ಕೆ ಕಾರಣ ಬಹುತೇಕ ಮಳೆಗಾಲದ ನೀರು ಹೆಚ್ಚಾಗಿ ಭೂಮಿಯಲ್ಲಿ ಸಂಗ್ರಹವಾದಾಗ ಆಗುವ ವರತೆಯಿಂದಾಗಿ ಎನಿಸುತ್ತದೆ.

12. ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಹಲವಾರು ಹಳ್ಳಿಗಳಲ್ಲಿ ಪ್ರತಿವರ್ಷ ಆರಿದ್ರಾ ಮಳೆ ದಿನಗಳಲ್ಲಿ ಆಚರಿಸುತ್ತಾರೆ. ಹೆಚ್ಚಾಗಿ ಇಲ್ಲಿನ ಈಡಿಗ ಜನಾಂಗದವರಿಗೆ ಇದು ಸಂಭ್ರಮದ ಹಬ್ಬವಾಗಿದೆ. ಇಲ್ಲಿ ಸ್ತ್ರೀ ದೇವತೆಯರದು ಪ್ರಮುಖ ಆರಾಧನೆ. ಹಾಗಾಗಿ ದ್ರಾವಿಡ ಜನಪದ ಸ್ತ್ರೀ ದೇವತೆಗಳ ಜನಪ್ರಿಯತೆ ಎಂತಹದ್ದು ಎನ್ನುವುದನ್ನು ಗಮನಿಸಬೇಕಾಗುತ್ತದೆ. ವಿಶೇಷವಾಗಿ ಸೊರಬ ತಾಲ್ಲೂಕು ಗುಂಡಶೆಟ್ಟಿಕೊಪ್ಪ ಗ್ರಾಮದಲ್ಲಿ ಪ್ರತಿ ವರ್ಷ ಆರಿದ್ರೆ ಮಳೆ ಸಮಯದಲ್ಲಿ ಹಬ್ಬ ಆಚರಿಸುವುದಕ್ಕೂ ಮೊದಲ ಒಂದು ಮಂಗಳವಾರ ಹರಕೆ ಕಟ್ಟುತ್ತಾರೆ. ಬಿಳಿಹುಲ್ಲು ಮುಡಿ ಅಥವಾ ಮುರಿ ಕಟ್ಟಿ ಅದರೊಳಗೆ ಉಪ್ಪು, ಮೆಣಸಿನ ಕಾಯಿ, ಭತ್ತ, ರಾಗಿ, ಅಕ್ಕಿ, ಬೆಳೆಯುವ ಎಲ್ಲ ಧಾನ್ಯಗಳನ್ನು ಹಾಕಿ ಪೂಜಿಸಿ ಅಗಸೆ ಬಾಗಿಲಿನಲ್ಲಿ ತೋರಣೋಪಾದಿಯಲ್ಲಿ ಕಟ್ಟುತ್ತಾರೆ. ಮತ್ತೆ ಮುಂದಿನ ಮಂಗಳವಾರ ಅದೆ ಅಗಸೆ ಬಾಗಿಲಿನಲ್ಲಿ ಅಲ್ಲಿಯೇ ಕುಂಬಾರ ಮಣ್ಣಿನ ಮಾರ್‍ಯಮ್ಮನ ವಿಗ್ರಹವನ್ನು ರಚಿಸುತ್ತಾರೆ. ಇದೇ ವೇಳೆ ಅತ್ತ ಒಂದಿಷ್ಟು ಜನ ಪೂಜಾರಿ ಬ್ಯಾಣಕ್ಕೆ ತೆರಳಿ ಚಪ್ಪರದ ಗುಡಿ ನಿರ್ಮಿಸುತ್ತಾರೆ. ಇಲ್ಲಿ ತಯಾರಾದ ವಿಗ್ರಹವನ್ನು ಪಡ್ಲಿಗೆ, ಮಡ್ಲಕ್ಕಿಯೊಂದಿಗೆ ಇಡೀ ಗ್ರಾಮಸ್ಥರು ಪೂಜಾರಿ ಬ್ಯಾಣದ ಚಪ್ಪರದ

ಗುಡಿಯ ಬಳಿ ಮೆರವಣಿಗೆಯೊಂದಿಗೆ ತೆರಳಿ ಪ್ರತಿಷ್ಠಾಪಿಸಿ ಪೂಜಿಸುತ್ತಾರೆ. ಈ ಹಬ್ಬಕ್ಕೆ ಹೊಸ ಮದುಮಕ್ಕಳು ವಿಶೇಷವಾಗಿ ಪೂಜೆ ಸಲ್ಲಿಸುವ ಪದ್ಧತಿ ಇದೆ. ಕುರಿ, ಕೋಳಿ ಹರಕೆ, ಹಾರ್‌ಕೋಳಿ ಹರಕೆಗಳಿರುತ್ತದೆ. ಅಂದು ರಾತ್ರಿ ಊರ ಗಡಿಯಲ್ಲಿ ಮಾರಿಯನ್ನು ವಿಸರ್ಜಿಸಿ, ಕೋಳಿ ಬಲಿ ನೀಡಿ, ಆ ಕೋಳಿಯನ್ನು ಅಲ್ಲಿಯೇ ಬೇಯಿಸಿ ಪೂಜಾರಿ ತಿನ್ನಬೇಕು. ಗ್ರಾಮದ ಪ್ಯಾಲ್ಯೋರ್ ಸುಬ್ಬಪ್ಪ ಮಣ್ಣಿನ ವಿಗ್ರಹ ತಯಾರಿಸಬೇಕು.

13. ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಬಂಕಸಾಣ ಎಂಬಲ್ಲಿ ಈ ಮಧುಲಿಂಗನನ್ನು ಪ್ರತಿವರ್ಷ ವಿಜೃಂಭಣೆಯಿಂದ ಪೂಜಿಸಲಾಗುತ್ತದೆ. ಜಾತ್ರಾ ಉತ್ಸವ ತಿಂಗಳುಗಟ್ಟಲೆ ನಡೆಯುವ ಇಲ್ಲಿ ವರದಾ–ದಂಡಾವತಿ ನದಿ ಕೂಡಿಕೊಳ್ಳುತ್ತವೆ.

14. ಮಲೆನಾಡ ಭಾಗದ ಕೆರೆಗಳಲ್ಲಿ ಗಜಲಕ್ಷ್ಮಿ ಫಲಕವಿರುತ್ತದೆ. ಸಂದರ್ಭಕ್ಕೆ ಆಗಾಗ್ಗೆ ಪೂಜೆ ನಡೆಯುತ್ತದೆ. ಗಜಲಕ್ಷ್ಮಿಯನ್ನು ಸಮೃದ್ಧಿಯ ಸಂಕೇತವೆನ್ನಲಾಗುತ್ತದೆ. ತಮ್ಮ ಐಶ್ವರ್ಯ ವೃದ್ಧಿಯಾಗಲೆಂದೆ ಬಯಸಿ ಪೂಜಿಸುವಂತದ್ದು, ಹೆಚ್ಚಾಗಿ ಉತ್ತರ ಕರ್ನಾಟಕ, ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ, ಸೊರಬ ತಾಲ್ಲೂಕು ಪ್ರದೇಶದಲ್ಲಿ ಕಾಣಸಿಗುವ ಈ ಗಜಲಕ್ಷ್ಮೀ ಗ್ರಾಮದ ಕೆರೆಗಳ ತೂಬಿನ ಮೇಲೆ, ದೇಗುಲದ ಗರ್ಭಗೃಹ, ಮುಖಮಂಟಪ, ಶುಕನಾಸಿ, ನವರಂಗ ದ್ವಾರಗಳ ಲಲಾಟದಲ್ಲಿ, ಕಾನ್ ಪ್ರದೇಶದ ಆರಂಭದಲ್ಲಿ ಕಂಡು ಬರುತ್ತದೆ. ಸೀಮಿತ ಸಮಯದಲ್ಲಿ ಇವುಗಳ ಆರಾಧನೆ ನಡೆಯುತ್ತದೆ.

15. ಎಪಿಗ್ರಾಫಿಯಾ ಕರ್ನಾಟಿಕಾ–ಇ.ಸಿ. ತುಃ– ನಂ 329. ಕ್ರಿ.ಶ.1159.

## ಆಕರ ಗ್ರಂಥಗಳು:


1. ಹಾಲಕ್ಕಿ ಪಾಯಸ–ಎಲ್.ಜಿ.ಭಟ್.
2. ಜಾನಪದ ಸಾಹಿತ್ಯ ದರ್ಶನ–10.
3. ನೇಮಿನಾಥ ಪುರಾಣ.
4. ವಚನಗಳು.
5. ಪಾರ್ಶ್ವನಾಥ ಪುರಾಣ.
6. ವಚನಗಳು.
7. ವಿಶಿಷ್ಟ ಜನಪದ.
8. ದ್ರಾವಿಡ ಜನಪದ. ತೀ.ನಂ.ಶಂ.
9. ಕನ್ನಡ ಅಥರ್ವಣ ವೇದ–1. ಲಕ್ಷ್ಮಣ ದಾಬಣಿ ಪೈ.
10. ಮಲೆನಾಡು ಜನಪದ–ಜೀನಳ್ಳಿ ಸಿದ್ದಲಿಂಗಪ್ಪ.
11. ಮಳೆ ಒಂದು ಜನಪದ ಅಧ್ಯಯನ–ಡಾ॥ ಎಸ್. ಪಿ. ಪದ್ಮಪ್ರಸಾದ್.
12. ವಿಶ್ವ ಕೋಶ–9
13. ಶಿವಮೊಗ್ಗ ಜಿಲ್ಲಾ ದರ್ಶನ–ಡಾ॥ಅ.ಸುಂದರ.
14. ಇತಿಹಾಸ ದರ್ಶನ–9.
15. ಲೇಖಕನ ಪ್ರಕಟಿತ ಬಿಡಿ ಲೇಖನಗಳು. ಕೃಷಿ ಆವಂಧ್ಯ ಕಲ್ಲು, ಲಜ್ಜಾಗೌರಿ, ಮಾರಿಯ ಪರಿ, ಕೋಣನ ತಲೆ, ಗಜಲಕ್ಷ್ಮೀ ಫಲಕ.
16. ತೈತ್ತರೀಯ ಸಂಹಿತೆ



**ಕೃತಜ್ಞತೆಗಳು**: ಧಾರವಾಡ ಕರ್ನಾಟಕ ವಿವಿ ಜನಪದ ವಿಭಾಗದ ಶಾಲಿನಿ ರಘುನಾಥ ಭಟ್, ಕುವೆಂಪು ವಿವಿ ಇತಿಹಾಸ ವಿಭಾಗದ ರಾಜಾರಾಂ ಹೆಗಡೆ, ಲೇಖಕ ಶಿವಾನಂದ ಕಳವೆ, ಶಿರಸಿ ಉಮಾಪತಿ ಭಟ್, ಚಿಕ್ಕಮಗಳೂರು ಜಿಲ್ಲೆಯ, ಉತ್ತರ ಕನ್ನಡ ಜಿಲ್ಲೆಯ ನನ್ನ ಆಪ್ತೇಷ್ಟರು, ಸೊರಬ ತಾಲ್ಲೂಕಿನ ಹಿರಿಯ ಬಂಧು–ಮಿತ್ರರು, ನನ್ನೊಂದಿಗೆ ತಿರುಗಾಡಿದ ಕೆ.ಎಲ್.ಕುಮಾರಸ್ವಾಮಿ ಹಾಗೂ ಜಿ.ಎನ್.ಉಮೇಶ್, ಸತೀಶ್ ಟಿ.ಜಿ., ಕರಡು ತಿದ್ದು ಪಡಿಯಲ್ಲಿ ಸಹಕರಿಸಿದ ಪತ್ನಿ ನಂದಾ, ಕುಟುಂಬದ ಹಿರಿಯರು.


*

---


ಶ್ರೀಪಾದ ಬಿಚ್ಚುಗತ್ತಿ, ಯಲಸಿ ಅಂಚೆ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ



ಕಥೆ

# ನೆಮ್ಮದಿ

**– ಅಬ್ದುಲ್ ಹಮೀದ್ ಪಕ್ಕಲಡ್ಕ**

ಅವನಿಗೆ ನೆಮ್ಮದಿ ಬೇಕಿತ್ತು. ಆ ಜನರಿಂದ ರಸ್ತೆಯ ಪಕ್ಕದಲ್ಲಿರುವ ನ್ಯೂಸ್ ಪೇಪರ್ ಸ್ಟಾಲಿಗೆ ತಾಗಿನಿಂತು ಅವನು ರಸ್ತೆಯನ್ನು ವೀಕ್ಷಿಸುತಿದ್ದ. ಸೂರ್ಯೋದಯವಾಗಿ ಕೆಲವೇ ಗಂಟೆಗಳಾಗಿರಬಹುದು. ಜಾತ್ರೆಗೆ ಸೇರಿದಂತೆ ಅತ್ತಿಂದಿತ್ತ, ಇತ್ತಿಂದತ್ತ ಓಡಾಡುವ ಪಾದಾಚಾರಿಗಳು, ರಸ್ತೆಯ ಇಕ್ಕಲಗಳಲ್ಲೂ ಮಾರಾಟದ ಸಾಮಾಗ್ರಿಗಳನ್ನು ರಾಶಿಹಾಕಿ ಗಿರಾಕಿಗಳನ್ನು ತಮ್ಮತ್ತ ಸೆಳೆಯಲು ಕಿರುಚಾಡಿಕೊಂಡು ವಿವಿಧ ಭಂಗಿಗಳಲ್ಲಿ ನಿಂತಿರುವ ಬೀದಿ ಬದಿ ವ್ಯಾಪಾರಿಗಳು, ಸರ್ಕಸ್ ಬ್ಯಾಲೆನ್ಸ್ ಮಾಡಿಕೊಂಡು ಸೈಕಲಿನಲ್ಲಿ ಅಡ್ಡಾದಿಡ್ಡಿ ಓಡಾಡುವ ಪಡ್ಡೆ ಹುಡುಗರು, ತಳ್ಳುಗಾಡಿಗಳಲ್ಲಿ ಸಾಮಾಗ್ರಿಗಳನ್ನು ತುಂಬಿಕೊಂಡು ದಾರಿಗಾಗಿ ಬೊಬ್ಬಿಡುತ್ತಾ ಬೆವರು ಸಾಲುಗಳೊಂದಿಗೆ ತಮ್ಮ ದೇಹಧಾರ್ಢ್ಯವನ್ನು ಪ್ರದರ್ಶಿಸುತ್ತಾ ಮುನ್ನುಗ್ಗುವ ಕಾರ್ಮಿಕರು, ಐಶಾರಾಮಿ ಕಾರುಗಳು, ದ್ವಿಚಕ್ರ ವಾಹನಗಳು, ಗಗನ ಚುಂಬಿತ ಕಟ್ಟಡಗಳು! ಇವೆಲ್ಲದರ ಮಧ್ಯ ಅವನು ನೆಮ್ಮದಿಯನ್ನು ಅರಸುತ್ತಿದ್ದ.

'ರೀ ಯಜಮಾನರೇ, ಸ್ವಲ್ಪ ಸರಿದು ನಿಲ್ರೀ. ಅಂಗಡಿಗೆ ಬೆನ್ನು ಮಾಡಿ ನಿಂತರೆ ನಾವು ವ್ಯಾಪಾರ ಮಾಡುವುದು ಹೇಗೆ? ಹೋ! ಪರಊರಿಂದ ಬಂದಿರಬೇಕು? ಯಾವೂರು ಸ್ವಾಮಿ ತಮ್ಮದು? ಏನೋ ಕಳಕೊಂಡವರಂತೆ ಹುಡುಕುತಿದ್ದೀರಿ? ಏನು ಬೇಕಿತ್ತು

ನಿಮಗೆ?' ಒಂದೇ ಸಮನೆ ವಟಗುಟ್ಟುವ ಪೇಪರ್ ಸ್ಟಾಲಿನವನ ಮಾತಿಗೆ ಅವನೇನೂ ಅಧೀರನಾಗಲಿಲ್ಲ. ಅವನು ಸ್ವಲ್ಪ ಬದಿಗೆ ಸರಿದು ನಿಂತುಕೊಂಡು ಗಿರಾಕಿಗಳು ಬೆಳಗ್ಗಿನ ನ್ಯೂಸ್ ಪೇಪರ್‌ಗಾಗಿ ಮತ್ತು ಎದೆಯನ್ನು ಬೆಚ್ಚಗಿಡಲು ಒಂದು ಕಪ್ ಚಹಾ, ಕಾಫಿಗಾಗಿ ಹಾಗೂ ಸಿಗರೇಟಿಗಾಗಿ ಅವನ ಅಂಗಡಿಗೆ ಮುಗಿ ಬೀಳುತಿದ್ದರು. ಅವನು ಪಟಪಟನೆ ವಿವಿಧ ರೀತಿಯ ನ್ಯೂಸ್ ಪೇಪರ್‌ಗಳನ್ನು ಕೊಡುತ್ತಾ, ಹಣ ವಸೂಲಿ ಮಾಡಿಕೊಂಡು ನಾಲ್ಕು ಕಡೆಗೂ ಕಣ್ಣಾಡಿಸುತ್ತಿದ್ದ. ಮತ್ತೊಮ್ಮೆ 'ಏನು' ಎಂಬಂತೆ ಆ ಪರಕೀಯನನ್ನು ದಿಟ್ಟಿಸಿದ.

ಈಗ ಆ ಪರಕೀಯ ಉತ್ತರಿಸಲೇ ಬೇಕಾಯಿತು. ಅವನು ನಕ್ಕು ಆ ಪೇಪರಿನವನನ್ನು ಕೇಳಿದ. 'ನನಗೆ ನೆಮ್ಮದಿ ಬೇಕಾಗಿತ್ತು.'ಪೇಪರಿನವನ ಮುಖ ಕಳೆಗುಂದಿತು. ಅವನು ಆ ಪರಕೀಯನನ್ನು ಆಪಾದ ಮಸ್ತಕ ನೋಡಿದ. ಇವನನ್ನು ಯಾವ ವರ್ಗಕ್ಕೆ ಸೇರಿಸುವುದೆಂದು ಅರ್ಥವಾಗದೆ ತಲೆಕೆರೆದುಕೊಂಡ. ಜಾಸ್ತಿ ಆಲೋಚಿಸುವಷ್ಟು ಅವನಿಗೆ ವ್ಯವಧಾನವಿರಲಿಲ್ಲ. ಕೊನೆಗೆ ಯಾವುದೋ ಒಂದು ದಿನ ಪತ್ರಿಕೆಯನ್ನು ಅವನ ಕಡೆಗೆ ಎಸೆದ. 'ಇದನ್ನು ಓದಿ. ನಿಮಗೆ ನೆಮ್ಮದಿ ಸಿಗುತ್ತದೆ.' ಪೇಪರಿನವನು ಆ ಪರಕೀಯನನ್ನು ಕಣ್ಣೆತ್ತಿಯೂ ನೋಡದೆ ತನ್ನ ಕೆಲಸದಲ್ಲಿ ಮಗ್ನನಾದ. ಆ ಪರಕೀಯ ತನ್ನ ಹತ್ತಿರ ಬಿದ್ದ ದಿನ ಪತ್ರಿಕೆಯನ್ನು ಮನಸ್ಸಿಲ್ಲದ ಮನಸ್ಸಿನಿಂದ ಬಾಗಿ ಎತ್ತಿಕೊಂಡು ಪುಟ ತಿರುವಿದ. 'ಗಡಿಯಲ್ಲಿ ಘರ್ಷಣೆ. ಐದು ಯೋಧರ ಬರ್ಬರ ಹತ್ಯೆ' 'ಪ್ರಾರ್ಥನಾನಿರತ ಭಕ್ತಾಧಿಗಳ ಮೇಲೆ ಬಾಂಬುದಾಳಿ. ಇಪ್ಪತ್ತು ಮಂದಿಯ ದುರ್ಮರಣ.' 'ನಾಗರಿಕರ ಮೇಲೆ ವಿಷಾನಿಲ ಪ್ರಯೋಗ. ಸಾವಿರಾರು ನಾಗರಿಕರ ಸಾವು.' 'ವ್ಯಾಪಕ ಕೋಮು ಗಲಭೆ. ಸಾವು-ನೋವು-ಕರ್ಫ್ಯೂ ಜಾರಿ' 'ರಾಜಧಾನಿಯಲ್ಲಿ ತರುಣಿಯ ಮೇಲೆ ಅತ್ಯಾಚಾರ, ಕೊಲೆಗೈದು ಪರಾರಿ.'

ಅವನು ದಿನ ಪತ್ರಿಕೆಯನ್ನು ಮುಚ್ಚಿದ. ಎಲ್ಲಿ ಬಿದ್ದಿತ್ತೋ ಅಲ್ಲಿಯೇ ಪತ್ರಿಕೆಯನ್ನು ಬಿಸಾಡಿ ಎದ್ದು ನಡೆಯ ತೊಡಗಿದ. ಅವನು ಹೋದ ದಾರಿಯನ್ನೇ ದಿಟ್ಟಿಸುತ್ತಾ ಪತ್ರಿಕೆಯವ ವ್ಯಂಗ್ಯವಾಗಿ ನಕ್ಕು ಅಂದ. 'ಬಹುಶ ಅವನಿಗೆ ನೆಮ್ಮದಿ ಸಿಕ್ಕಿರಬಹುದು.'

ಸೂರ್ಯ ನಿಧಾನವಾಗಿ ಮೇಲೇರುತ್ತಿದ್ದಂತೆ ಅದರ ಇರುವು ನಿಧಾನವಾಗಿ ಜನರ ಮೇಲೆ ಪರಿಣಾಮ ಬೀಳುತಿತ್ತು. ಆ ಜನದಟ್ಟಣೆಯ ರಸ್ತೆಯಲ್ಲಿ ಅವನು ವೇಗವಾಗಿ ನಡೆಯುತ್ತಿದ್ದ. ಬಿಸಿಲು ಅವನ ನೆತ್ತಿಯನ್ನು ಚುಚ್ಚುತಿತ್ತು. ಪತ್ರಿಕೆಯ ಸುದ್ದಿಗಳು ಅವನ ಅಲ್ಪ ಸ್ವಲ್ಪ ನೆಮ್ಮದಿಯನ್ನು ಕೆಡಿಸಿದ್ದುವು. ತಲೆಕೆಟ್ಟವನಂತೆ ಅವನು ಜನರ ಮಧ್ಯೆ ದಾರಿ ಮಾಡಿಕೊಂಡು ನಡೆಯುತ್ತಿದ್ದ. ಅವನಿಗೆ ನೆಮ್ಮದಿ ಬೇಕಿತ್ತು. ಹಲವಾರು ಕಿಲೋ ಮೀಟರ್ ದೂರ ನಡೆದರೂ ಅವನಿಗೆ ನೆಮ್ಮದಿಯ ತಾಣ ಸಿಗಲಿಲ್ಲ. ಎಲ್ಲಿ ನೋಡಿದರೂ ಗಗನ ಚುಂಬಿತ ಕಟ್ಟಡಗಳು, ರಸ್ತೆಯಲ್ಲಿ ಒಂದೇ ಸಮನೆ ಕಪ್ಪು ಹೊಗೆಕಾರುತ್ತಾ ನಿರಂತರ ಓಡಾಡುವ ವಾಹನಗಳು, ರಸ್ತೆಯ ಇಕ್ಕೆಲಗಳಲ್ಲಿ ಏನೋ ಕಳಕೊಂಡವರಂತೆ ಪೂರ್ವದಿಂದ ಪಶ್ಚಿಮಕ್ಕೆ, ಪಶ್ಚಿಮದಿಂದ ಪೂರ್ವಕ್ಕೆ ಓಡಾಡುವ ಮನುಷ್ಯರು. ಮುಖದಲ್ಲಿ ನಗುವಿಲ್ಲ. ಚಿಂತನೆಯ ಗೆರೆಗಳು. ನಿಂತು ಮಾತಾಡುವವರಿಲ್ಲ, ಪರಿಚಯ ಮಾಡಿಸಿಕೊಳ್ಳಲು ಪುರುಸೊತ್ತಿಲ್ಲ, ಯಾಂತ್ರಿಕ ಬದುಕು. ಸ್ನೇಹ, ಪರಿಚಯ, ಒಂದಿಷ್ಟು ನಗುಮುಖ, ಯಾವುದೂ ಅಗತ್ಯವಿಲ್ಲದೆ ಮುಖಗಂಟಿಕ್ಕಿಕೊಂಡು ಓಡಾಡುವ ಯಾಂತ್ರಿಕ ಮನುಷ್ಯರು. ಅವನಿಗೆ ತಾಳ್ಮೆ ತಪ್ಪಿತು.

ಇನ್ನಷ್ಟು ದೂರ ನಡೆಯಲಿ? ಈ ಜನಜಂಗುಳಿಯ ಮಧ್ಯೆ ನೆಮ್ಮದಿಯ ತಾಣವನ್ನು ಎಲ್ಲಿ ಹುಡುಕುವುದು? ಅವನು ಸುಸ್ತಾಗಿ ಪುಟ್‌ಪಾತಿನ ಮಧ್ಯ ದೃಢವಾಗಿ ನಿಂತುಬಿಟ್ಟ.

ಇದ್ದಕ್ಕಿದ್ದಂತೆ ರಸ್ತೆಯಲ್ಲಿ ಓಡಾಡುವ ವಾಹನಗಳು ನಿಂತುಕೊಂಡವು. ದೂರದಿಂದ ವಾಹನಗಳ ಕರ್ಕಶ ಹಾರ್ನು ಕಿವಿಯ ತಮ್ಮಟೆಯನ್ನು ಭೇದಿಸುತಿತ್ತು. ಜನರು ತಂಡೋಪ ತಂಡವಾಗಿ ರಸ್ತೆಯಲ್ಲಿ, ಪುಟ್‌ಪಾತಿನಲ್ಲಿ ಅವನಿಗೆ ಎದುರಾಗಿ ಓಡಿ ಬರುತಿದ್ದರು. ಎಲ್ಲರೂ ದಿಗಿಲುಗೊಂಡು ಕಂಡ ಕಂಡ ದಾರಿಯಲ್ಲಿ ಓಡುತಿದ್ದರು. ದೂರದಲ್ಲಿ ದಟ್ಟಣೆಯ ಹೊಗೆ ಕಾಣುತ್ತಿತ್ತು. ಬೆಂಕಿಯ ಕೆನ್ನಾಲಗೆ ಮೇಲೇರತ್ತಿತ್ತು. ರೊಚ್ಚಿಗೆದ್ದ ಜನರ ಗುಂಪೊಂದು ಲಾಂಗು, ಮಚ್ಚು ಬೀಸುತ್ತಾ ಮುನ್ನುಗ್ಗುತ್ತಿತ್ತು. ಅಂಗಡಿ ಬಾಗಿಲುಗಳು ಪಟಪಟನೆ ಮುಚ್ಚಿಕೊಂಡವು. ಯಾರೋ ಧಡಿಯ ಓಡುವ ರಭಸಕ್ಕೆ ಪುಟ್‌ಪಾತಿನ ಮಧ್ಯ ನಿಂತಿದ್ದ ಅವನಿಗೆ ಡಿಕ್ಕಿ ಹೊಡೆದ. ಧಡಿಯನ ಹೊಡೆತಕ್ಕೆ ಸಾವರಿಸಿಕೊಂಡು ಅವನು ಬದಿಗೆ ಸರಿದ.

'ಏ ಪುಣ್ಯಾತ್ಮ, ನಡುದಾರಿಯಲ್ಲಿ ಯಾಕೆ ಸಾಯಲು ನಿಂತಿದ್ದೀ. ನಿನಗೆ ಜೀವ ಭಯವಿಲ್ಲವೇ?' ಧಡಿಯ ಒಂದು ಕ್ಷಣ ನಿಂತು ಗದರಿಸಿದ. ಧಡಿಯನ ಗದರಿಕೆ ಅವನ ಮೇಲೆ ಯಾವುದೇ ಪರಿಣಾಮ ಬೀಳಲಿಲ್ಲ.

'ನನಗೆ ಜೀವ ಭಯ ಇಲ್ಲ. ಆದರೆ ನೆಮ್ಮದಿ ಕಳಕೊಂಡ ಭಯವಿದೆ.' ಅವನು ಉತ್ತರಿಸಿದ. 'ಏನು? ನಿನಗೆ ನೆಮ್ಮದೆ ಇಲ್ಲ ಅಲ್ಲವೇ? ನಿನಗೆ ನೆಮ್ಮದಿ ಬೇಕಾದರೆ ಬಾ. ನನ್ನೊಂದಿಗೆ ಓಡು.' ಧಡಿಯ ಅವನ ಕೈ ಹಿಡಿದು ಎಳೆದುಕೊಂಡು ಓಡತೊಡಗಿದ. ಬಹಳ ದೂರ ಇಬ್ಬರೂ ಓಡಿದರು. ತೀರಾ ಸುಸ್ತಾಗಿ ಇಬ್ಬರೂ ರಸ್ತೆ ಅಂಚಿನಲ್ಲಿ ನಿಂತರು. ಗಲಭೆ ಸ್ಥಳದಿಂದ ದೂರವಾದರೂ ಅವರು ಇನ್ನೊಂದು ಜನದಟ್ಟಣೆಯ ಪ್ರದೇಶಕ್ಕೆ ಬಂದಿದ್ದರು. ಇದು ಇನ್ನೂ ದೊಡ್ಡ ವ್ಯವಹಾರಿಕ ತಾಣವಾಗಿದ್ದು ರಸ್ತೆಯಲ್ಲಿ ಮಿಸುಕಾಡಲೂ ಸಾಧ್ಯವಿಲ್ಲದಷ್ಟು ಜನರು ಓಡಾಡುತಿದ್ದರು.

ಧಡಿಯ ಆಗುಂತಕನ ಕೈ ಬಿಡಿಸಿ ಅವನ ಭುಜತಟ್ಟಿ ಹೇಳಿದ. 'ಗೆಳೆಯಾ, ಈ ದೇಶದಲ್ಲಿ ನೆಮ್ಮದಿಯನ್ನು ಹುಡುಕುವ ಸಾಹಸ ಮಾಡಬೇಡ, ಅದು ಮರೀಚಿಕೆ. ನಮ್ಮನ್ನು ನಂಬಿಕೊಂಡ ನಮ್ಮ ಸಂಸಾರವನ್ನು ಉಳಿಸುವ, ಪೋಷಿಸುವ ಹಾಗೂ ಅದರೊಂದಿಗೆ ನಮ್ಮ ಜೀವವನ್ನು ಕೂಡಾ ರಕ್ಷಿಸುವುದರಲ್ಲಿಯೇ ನಮ್ಮ ಆಯುಷ್ಯ ಮುಗಿಯುತ್ತದೆ. ಇನ್ನು ನೆಮ್ಮದಿಯ ಮಾತೆಲ್ಲಿ ಬಂತು? ನಿನಗೆ ಒಳ್ಳೆಯದಾಗಲಿ.' ಧಡಿಯ ಜನ ದಟ್ಟಣೆಯ ಮಧ್ಯೆ ಮರೆಯಾದ.

ಅವನ ನೆಮ್ಮದಿ ಸಂಪೂರ್ಣ ಕೆಟ್ಟಿತು. ಮನಸ್ಸು ಅಲ್ಲೋಲ ಕಲ್ಲೋಲವಾಯಿತು. ಯಾತಕ್ಕಾಗಿ ನೆಮ್ಮದಿಯಿಲ್ಲದ ಈ ಬದುಕು? ಅವನು ಭಾರವಾದ ಹೆಜ್ಜೆಯಿಂದ ಮುಂದೆ ನಡೆಯ ತೊಡಗಿದ. ಎಷ್ಟು ನಡೆದರೂ, ಎಲ್ಲಿ ತಿರುಗಿದರೂ ದಟ್ಟಣೆಯ ಜನಸಂಖ್ಯೆ, ಅಂಗಡಿಗಳು ಹಾಗೂ ಗಗನ ಚುಂಬಿತ ಕಟ್ಟಡಗಳು ಮಾತ್ರ ಕಾಣುತಿದ್ದುವು. ಅವನ ಕಣ್ಣಿಗೆ ಗುಡ್ಡ, ಬೆಟ್ಟ, ಬಯಲು, ಹರಿಯುವ ನದಿ, ಕಾಲುವೆ, ತೊರೆ, ಹಸಿರು ಮರ-ಗಿಡಗಳು, ಪಶುಪಕ್ಷಿಗಳು, ಪ್ರಾಣಿಗಳು ಕಾಣಲೇ ಇಲ್ಲ. ಕಾಣಲು ಸಾಧ್ಯವೂ ಇಲ್ಲ. ಅವನಿಗೆ ಅಂತಹ ಸುಂದರ ಪ್ರಕೃತಿ ಬೇಕಿತ್ತು. ಅಂತಹ ಸುಂದರ ತಾಣವನ್ನು ಅವನು ಅರಸುತಿದ್ದ. ಅವನು ದೇಹದ ಸಮತೋಲನ ಕಳೆದುಕೊಳ್ಳುವ ಸ್ಥಿತಿಗೆ ಬಂದ. ಅವನ ದೇಹ ಸ್ವಲ್ಪ ವಾಲುತಿತ್ತು.

ಅನತಿ ದೂರದಲ್ಲಿ ಜನದಟ್ಟಣೆಯ ಮಧ್ಯ ಕದ್ದು ಕದ್ದು ತರುಣನೊಬ್ಬ ಕೆಲವರಿಗೆ ಕರಪತ್ರ ಹಂಚುತ್ತಿದ್ದ. ಅವನು ಆ ತರುಣನನ್ನು ಸಮೀಪಿಸಿ ಕರಪತ್ರ ಬೇಡಿ ಪಡಕೊಂಡ. ಅವನ ಆಸಕ್ತಿ ನೋಡಿ ಆ ತರುಣ ಅವನನ್ನು ರಸ್ತೆಯ ಬದಿಯ ಬೃಹದಾಕಾರದ ಕಟ್ಟಡದ ಮೂಲೆಗೆ ಕರಕೊಂಡು ಹೋದ.

'ನೀವು ನೆಮ್ಮದಿಯನ್ನು ಅರಸುತ್ತಿರುವಿರಲ್ಲವೇ?' ತರುಣನ ನೇರ ಪ್ರಶ್ನೆಗೆ ಅವನ ಮುಖ ಅರಳಿತು. 'ಹೌದು. ನನಗೆ ನೆಮ್ಮದಿ ಬೇಕಾಗಿದೆ.'

'ಈ ದೇಶದಲ್ಲಿ ನೆಮ್ಮದಿ ಸುಲಭದಲ್ಲಿ ಸಿಗದು. ಅದು ಮರೀಚಿಕೆ. ಅದಕ್ಕಾಗಿ ಕ್ರಾಂತಿಯಾಗಬೇಕು. ಕ್ರಾಂತಿ, ರಕ್ತ ಕ್ರಾಂತಿ, ದೇಶವನ್ನು ಬಂದೂಕಿನ ತುದಿಯಿಂದ ಆಳಿದರೇನೇ ನಿಮಗೆ ನೆಮ್ಮದಿ, ಶಾಂತಿ ದೊರೆಯುತ್ತದೆ.' ಆ ತರುಣ ತನ್ನ ಕೈಚೀಲದಿಂದ ಕೆಲವೊಂದು ಕೆಂಪು ಕರಪತ್ರ, ಪುಸ್ತಕ ನೀಡಿದ.

ಆಗುಂತಕನಿಗೆ ಒಮ್ಮೆಲೆ ದಿಗಿಲಾಯಿತು. 'ಇಲ... ಇಲ್ಲ. ಇಂತಹ ನೆಮ್ಮದಿ ನನಗೆ ಬೇಡ. ಈ ನೆಮ್ಮದಿಯನ್ನು ನಾನು ಅರಸುತ್ತಿಲ್ಲ. ಕ್ಷಮಿಸಿ.' ಅವನು ಆ ತರುಣ ಕೊಟ್ಟ ಕರಪತ್ರ, ಪುಸ್ತಕಗಳನ್ನು ಅವನಿಗೆ ಹಿಂತಿರುಗಿಸಿ, ಬಿರಬಿರನೆ ನಡೆದ. ಮತ್ತು ಜನಸಂದಣಿಯಲ್ಲಿ ಸೇರಿಹೋದ.

ಅವನು ಬಹಳ ದೂರ ನಡೆಯುತ್ತಲೇ ಇದ್ದ. ದಣಿವು, ನಿರಾಶೆ, ಹತಾಶೆ ಅವನನ್ನು ಕಾಡುತ್ತಿತ್ತು. ಅನತಿ ದೂರದಲ್ಲಿ ಒಂದು ಗಗನ ಚುಂಬಿತ ಕಟ್ಟಡಗಳ ಕೆಳಭಾಗದಲ್ಲಿ ಕೆಲವು ಐಷಾರಾಮ ಕಾರುಗಳು ನಿಂತಿದ್ದವು. ಅದರ ಪಕ್ಕದ ದ್ವಾರದ ಬಳಿ ಕೆಲವು ಜನರು ಒಂದೇ ಬಗೆಯ ದಿರಿಸುಗಳನ್ನು ಉಟ್ಟುಕೊಂಡಿದ್ದು ಜನರನ್ನು ನಗುಮುಖದಿಂದ ಸ್ವಾಗತಿಸುತಿದ್ದರು. ದ್ವಾರದ ಮೇಲೆ ಒಂದು ಫಲಕ. 'ಬೆಳಕಿನೆಡೆಗೆ' ಅವನಿಗೆ ಸಂತೋಷವಾಯಿತು. ಅವನು ವೇಗವಾಗಿ ಆ ಕಡೆಗೆ ನಡೆದು ಹೋದ. ನಗುಮುಖದಿಂದ ಸ್ವಾಗತಕಾರರು ಅವನನ್ನು ಸ್ವಾಗತಿಸಿ ಒಳಗೆ ಕಳುಹಿಸಿದರು. ಅದೊಂದು ದೊಡ್ಡ ಸಭಾಂಗಣ. ಸಭಾಂಗಣ ಜನರಿಂದ ಭರ್ತಿಯಾಗಿತ್ತು. ವೇದಿಕೆಯ ಮೇಲೆ ನಾಲ್ಕಾರು ಜನ ಆಸೀನರಾಗಿದ್ದರು. ಒಬ್ಬರು ನಿರರ್ಗಳವಾಗಿ ಭಾಷಣ ಮಾಡುತಿದ್ದರು.

ಅವನು ಸಭಿಕರಲ್ಲಿ ಒಬ್ಬನಾಗಿ ಕುಳಿತುಕೊಂಡ. 'ಸ್ವಾತಂತ್ರ್ಯ ಪೂರ್ವದಿಂದಲೂ ನಮ್ಮ ಸಂಸ್ಕೃತಿಯ ಮೇಲೆ ದಬ್ಬಾಳಿಕೆ ನಡೆದಿದೆ. ಇದಕ್ಕೊಂದು ಪರಿಹಾರ ಆಗಲೇ ಬೇಕು. ಅದಕ್ಕಾಗಿ ನಾವೆಲ್ಲಾ ಒಂದಾಗಬೇಕು. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು.' ಭಾಷಣ ಮುಂದುವರಿಯುತ್ತಲೇ ಇತ್ತು. ಜನರಲ್ಲಿ ಆವೇಶ ಉಕ್ಕಿ ಹರಿಯುತಿತ್ತು. ಅವನು ಎದ್ದು ನಿಂತ. ಹೊರಡಲು ಅಣಿಯಾದ. ಕಾರ್ಯಕರ್ತನೊಬ್ಬ ಓಡಿ ಬಂದ. 'ಕುಳಿತುಕೊಳ್ಳಿ. ಮುಖ್ಯ ಭಾಷಣ ಇನ್ನು ಆಗಲಿಕ್ಕಿದೆ. ನಿಮಗೆ ಏನು ಬೇಕಾಗಿದೆ ಹೇಳಿ?' ಅವನು ವಿನಂತಿಸಿದ.

'ಇಲ್ಲ ನನಗೆ ಭಾಷಣದ ಅಗತ್ಯವಿಲ್ಲ. ನನಗೆ ನೆಮ್ಮದಿ ಬೇಕು. ಆದರೆ ಅದಿಲ್ಲಿ ಸಿಗಲಾರದು.' ಅವನು ಕಾರ್ಯಕರ್ತನನ್ನು ಬದಿಗೆ ಸರಿಸಿ, ಸರಸರನೆ ಮೆಟ್ಟಿಲಿಳಿದು ಜನಸಂದಣಿಯಲ್ಲಿ ಸೇರಿಹೋದ.

ಸೂರ್ಯ ಅಸ್ತಮಿಸುವ ಹೊತ್ತು ಸಮೀಪಿಸಿತು. ಅವನ ಪ್ರಯಾಣ ನಿಂತಿರಲಿಲ್ಲ.

ಅವನು ಆ ಜನ ಸಂದಣಿಯಿಂದ ದೂರ ಹೋಗಲು ಪ್ರಯತ್ನಿಸಿದಷ್ಟೂ ಜನಸಂದಣಿ ಜಾಸ್ತಿಯಾಗುತಿತ್ತು. ಗಗನ ಚುಂಬಿತ ಕಟ್ಟಡಗಳ ಸಂಖ್ಯೆ ಏರತೊಡಗಿತು. ವಾಹನಗಳ, ಜನರ ಓಡಾಟ ಜಾಸ್ತಿಯಾಗ ತೊಡಗಿತು. ಅವನು ಪಾದಾಚಾರಿಗಳ ಮುಖಗಳನ್ನು ನೋಡುತಿದ್ದ. ಅವರ ಮುಖದಲ್ಲಿ ಉದ್ವಿಗ್ನತೆ, ಗಡಿಬಿಡಿ, ಭಯ, ಅವಸರ, ಚಿಂತೆ ಕಂಡು ಬರುತಿತ್ತು. ನೆಮ್ಮದಿ ಮಾತ್ರ ಯಾರ ಮುಖದಲ್ಲೂ ಕಂಡು ಬರಲಿಲ್ಲ. ಅವನು ಹತಾಶನಾದ. ಹೊಟ್ಟೆ ಚುರುಗುಟ್ಟುತಿತ್ತು. ಅವನಿಗೆ ವಿಶ್ರಾಂತಿಯ ಅವಶ್ಯಕತೆ ಇತ್ತು. ಹಸಿವು ಒಂದಿಲ್ಲದಿರುತಿದ್ದರೆ ಮನುಷ್ಯ ಇನ್ನೂ ಮೃಗೀಯನಾಗುತಿದ್ದನೋ ಏನೋ. ಅವನು ತನ್ನಷ್ಟಕ್ಕೇ ಅಂದುಕೊಂಡ. 'ಸರ್... ಸರ್...' ಯಾರೋ ಕರೆದಂತಾಗಿ ಅವನು ತಿರುಗಿ ನೋಡಿದ. ಚಿಗುರು ಮೀಸೆಯ ಹುಡುಗನೊಬ್ಬ ವೇಗವಾಗಿ ಅವನ ಹಿಂದೆಯೇ ಬರುತ್ತಿದ್ದ.

ಹತ್ತಿರವಾಗುತ್ತಿದ್ದಂತೆ ಆ ಹುಡುಗ ಮೆಲ್ಲನೆ ಹೇಳಿದ. 'ಸರ್... ಒಳ್ಳೆಯ ಹೋಟೇಲಿದೆ. ರೂಮೂ ಇದೆ. ಬನ್ನಿ ಸಾರ್. ನಾನು ಮಾಡಿಸಿ ಕೊಡುತ್ತೇನೆ. ಇಲ್ಲೇ ಪಕ್ಕದಲ್ಲೇ. ನನಗೇನೂ ನೀವು ಕೊಡುವುದು ಬೇಡ.' ಆಗುಂತಕ ನಿಂತುಕೊಂಡ. ಆ ಹುಡುಗನನ್ನು ಒಮ್ಮೆ ಮೇಲಿಂದ ಕೆಳಗೆ ನೋಡಿದ.

'ಬೇಡ... ಬೇಡ... ನನಗೆ ಅದರ ಅಗತ್ಯವಿಲ್ಲ. ನನಗೆ ನೆಮ್ಮದಿ ಬೇಕು. ಅದೆಲ್ಲಿ ಸಿಗುತ್ತದೆ ಹೇಳು?'

'ಅದನ್ನೇ ಸಾರ್ ನಾನು ಹೇಳುತ್ತಿರುವುದು. ಒಳ್ಳೆಯ ನೇಪಾಳಿ ಹುಡುಗಿಯರಿದ್ದಾರೆ ಸಾರ್. ನೀವು ಹ್ಞೂ... ಅನ್ನಿ ಸಾರ್. ನಿಮ್ಮನ್ನು ಹೋಟೇಲಿನಲ್ಲಿ ಬಿಟ್ಟು ಬರುತ್ತೇನೆ. ನನಗೇನೂ ಕಮಿಶನ್ ಕೊಡಬೇಡಿ. ಬನ್ನಿ ಸಾರ್...' ಆ ಹುಡುಗ ಉತ್ಸಾಹದಿಂದ ಹೇಳುತಿದ್ದ. ಕೇಳುತಿದ್ದಂತೆ ಆಗುಂತಕನ ಕೋಪ ನೆತ್ತಿಗೇರಿತು. ಅವನು ತಾಳ್ಮೆ ಕಳಕೊಂಡ. 'ಥೂ...! ಹಲ್ಕಾ..! ನಾನು ಅಂತವನಲ್ಲ. ಅಂತಹ ನೆಮ್ಮದಿ ನನಗೆ ಬೇಡ. ಈ ಜಂಜಾಟ, ಉದ್ವಿಗ್ನತೆ, ಭಯ, ಬೇಸರದಿಂದ ದೂರವಾದ ನೆಮ್ಮದಿ ಬೇಕು. ಸುಂದರ ಪ್ರಕೃತಿಯನ್ನು ಕಾಣಬೇಕು. ಬೆಟ್ಟ, ಗುಡ್ಡ, ತೊರೆ, ಹರಿಯುವ ನದಿ, ಪ್ರಾಣಿ ಪಕ್ಷಿಗಳು... ಕಣ್ಮರೆಯಾಗುತ್ತಿರುವ ಪ್ರಕೃತಿಯನ್ನು ನಾನು ನೋಡಿ ನೆಮ್ಮದಿ ಪಡಬೇಕು. ಆ ನೆಮ್ಮದಿ ಬೇಕು. ನೀನು ಕೊಡ ಬಲ್ಲೆಯಾ?'

ಹುಡುಗ ಒಮ್ಮೆ ಅಧೀರನಾದ. ಇವನು ಯಾವ ತರಹದ ವ್ಯಕ್ತಿ ಎಂದು ಅರ್ಥಮಾಡಲಾಗದೆ ಕೊಸರಿದ. ಸ್ವಲ್ಪ ಕ್ಷಣ ಸಾವರಿಸಿ ಕೊಂಡು ಅವನು ನಗುತ್ತಲೇ ಉತ್ತರಿಸಿದ. 'ಸಾರ್... ಆ ಕಟ್ಟಡ ನೋಡಿ ಸಾರ್. ಏಳು ಮಳಿಗೆಯ ಕಟ್ಟಡ. ನೀವು ಅಲ್ಲಿಗೆ ಹೋಗಿ ಸಾರ್. ಏಳನೇ ಮಳಿಗೆಯಲ್ಲಿ ಒಂದು ಕಚೇರಿ ಇದೆ ಅಲ್ಲಿ ನೀವು ಇಷ್ಟಪಡುವ ನೆಮ್ಮದಿಗೆ ಅವಕಾಶ ಇದೆ. ಅಲ್ಲಿ ವಿಚಾರಿಸಿ ಸಾರ್...' ಆ ಹುಡುಗ ಹೇಳುತ್ತಲೇ ತನ್ನ ವ್ಯಾಪಾರಕ್ಕಾಗಿ ಜನರ ಮಧ್ಯ ಸೇರಿಹೋದ.

ಅವನು ನಿಧಾನವಾಗಿ ಆ ಕಟ್ಟಡದತ್ತ ತೆರಳಿದ. ಕತ್ತಲು ಆವರಿಸುತಿದ್ದಂತೆ ಪಟ್ಟಣ ತೆರೆಯ ತೊಡಗಿತು. ರಸ್ತೆಯ ಲೈಟುಗಳು, ಉರಿಯ ತೊಡಗಿದುವು. ಅಂಗಡಿ, ಹೋಟೇಲುಗಳು ಲೈಟುಗಳಿಂದ ಮಿನುಗತೊಡಗಿದುವು. ಅಲ್ಲಲ್ಲಿ ಸುಗಂಧದ ಪರಿಮಳ ಹೊರಸೂಸುತಿತ್ತು. ಇಡೀ ಪಟ್ಟಣವೇ ಜೀವ ಕಳೆ ಬಂದಂತೆ ವಿಜೃಂಭಿಸತೊಡಗಿತು. ಇದಾವುದರ ಪರಿವೆಯಿಲ್ಲದೆ

ಅವನು ಆ ಕಟ್ಟಡದ ಲಿಫ್ಟನ್ನು ಏರಿ ಏಳನೇ ಮಳಿಗೆಗೆ ಬಂದ. ಅಲ್ಲಿ ನಿಂತು ಅವನು ಎದುರಿಗೆ ದೃಷ್ಟಿ ಹಾಯಿಸಿದ.

ಅಲ್ಲೊಂದು ವಿಶಾಲವಾದ ನಾಮಫಲಕ ಇತ್ತು. 'ನೆಮ್ಮದಿ'. ಅವನು ಆ ನೆಮ್ಮದಿ ನಾಮಫಲಕದ ಕೆಳಗಿರುವ ಕರೆಗಂಟೆಯನ್ನು ಒತ್ತಿದ. ಬಾಗಿಲು ತೆರೆದುಕೊಂಡಿತು. ಸುಮಾರು ನಲ್ವತ್ತು - ನಲ್ವತ್ತೈದು ವರ್ಷದ ಮಹಿಳೆಯೊಬ್ಬಳು ನಗುಮುಖದಿಂದ ಅವನನ್ನು ಸ್ವಾಗತಿಸಿದಳು. 'ಬನ್ನಿ... ಬನ್ನಿ... ಒಳಗೆ ಬನ್ನಿ... ಕುಳಿತುಕೊಳ್ಳಿ...' ಅವನು ಒಳಹೊಕ್ಕು ಹತ್ತಿರದಲ್ಲಿದ್ದ ಸೋಫಾದ ಮೇಲೆ ಕುಳಿತುಕೊಂಡ. ಅವನ ಸಮೀಪದಲ್ಲೇ ಅವಳು ನಯವಾಗಿ ಕುಳಿತಳು. ಅವಳು ಮೈಗೆ ಹಾಗೂ ಬಟ್ಟೆಗಳಿಗೆ ಸಿಂಪಡಿಸಿದ ಸುಗಂಧ ದ್ರವ್ಯದ ಪರಿಮಳ ಇಡೀ ಕೋಣೆಯನ್ನು ಆವರಿಸಿತ್ತು. ಪಾಶ್ಚಾತ್ಯ ಸಂಗೀತ ಮೆಲ್ಲನೆ ರೂಮಿನ ಮೂಲೆಯಿಂದ ತೇಲಿಬರುತಿತ್ತು. ಅವನಿಗೆ ಕಸಿವಿಸಿಯಾಯಿತು. ಅವನ ಮೌನವನ್ನು ಅವಳೇ ಮುರಿದಳು.

'ನೀವು ತುಂಬಾ ದಣಿದಿದ್ದೀರಿ. ಕುಡಿಯಲು ಏನಾದರೂ...' ಅವನು ಉತ್ತರಿಸುವ ಮೊದಲೇ ತಂಪು ಪಾನೀಯ ಹಿಡಿದುಕೊಂಡು ತನ್ನ ಅರೆಬೆತ್ತಲೆ ದೇಹವನ್ನು ಪ್ರದರ್ಶಿಸುತ್ತಾ ತರುಣಿಯೊಬ್ಬಳು ಪ್ರತ್ಯಕ್ಷಳಾದಳು. ಅವನಿಗೆ ಗಾಬರಿಯಾಯಿತು. ಹುಡುಗನ ಕುಚೋದ್ಯದ ಕೃತ್ಯ ಅವನಿಗೆ ಈಗ ಅರ್ಥವಾಯಿತು. ಅವನು ಎದ್ದು ನಿಂತ. 'ಕ್ಷಮಿಸಿ, ನಾನು ನೆಮ್ಮದಿ ಹುಡುಕುತ್ತಾ ಇಲ್ಲಿಗೆ ಬಂದೆ. ಆದರೆ ನನ್ನ ನೆಮ್ಮದಿ ಇದಲ್ಲ. ಅದನ್ನು ನೀವು ಅರ್ಥ ಮಾಡಿಕೊಳ್ಳಲಾರಿರಿ. ನನಗೆ ನನ್ನದೇ ರೀತಿಯ ನೆಮ್ಮದಿ ಬೇಕು' ಅವನಂದ.

ಅವನ ಸಂಕಟ ನೋಡಿ ಆ ಮಧ್ಯ ವಯಸ್ಸಿನ ಹೆಂಗಸು ನಕ್ಕಳು. 'ಅರ್ಥವಾಯಿತು ಬಿಡಿ. ನಿಮಗೆ ಮಸಾಜಿನ ಅವಶ್ಯಕತೆ ಇಲ್ಲದಿದ್ದರೆ ಬಿಟ್ಟುಬಿಡಿ. ಬೇರೆ ವ್ಯವಸ್ಥೆಯೂ ನಮ್ಮಲ್ಲಿದೆ.' ಅವಳು ಕಣ್ಣು ಸನ್ನೆ ಮಾಡಿದಳು. ಒಂದೆರಡು ಕ್ಷಣದಲ್ಲಿ ಆರೇಳು ಹುಡುಗಿಯರು ಅವನನ್ನು ಸುತ್ತುವರಿದರು. ಎಲ್ಲರಲ್ಲೂ ಉಡುಗೆ-ತೊಡುಗೆಯ ಬರಗಾಲವಿತ್ತು. ಅವನು ಅವರೆಲ್ಲರನ್ನೂ ದೂಡಿಕೊಂಡು ಹೊರ ನಡೆದು ವೇಗವಾಗಿ ನಡೆದುಕೊಂಡು ಲಿಫ್ಟಿನ ಒಳ ಹೊಕ್ಕು ಕಟ್ಟಡದ ತಳಭಾಗಕ್ಕೆ ಬಂದ.

ಫುಟ್‌ಪಾತಿನಲ್ಲಿ ಜನ ಪೂರ್ವದಿಂದ ಪಶ್ಚಿಮಕ್ಕೆ, ಪಶ್ಚಿಮದಿಂದ ಪೂರ್ವಕ್ಕೆ ನಡೆದಾಡುತಿದ್ದರು. ಓಡಿಯಾಡುತಿದ್ದರು. ಅದೇ ಜನ ದಟ್ಟಣೆ, ಅದೇ ವಾಹನಗಳು, ಅದೇ ರಸ್ತೆ ಬದಿ ವ್ಯಾಪಾರಿಗಳು, ಅದೇ ಅಂಗಡಿಗಳು, ಅದೇ ಯಾಂತ್ರಿಕ ಮನುಷ್ಯರು, ಅದೇ ಕರ್ಕಶ ಹಾರ್ನುಗಳು, ಹೊಗೆ. ಎಲ್ಲರ ಮುಖದಲ್ಲೂ ಉದ್ವಿಗ್ನತೆ, ಬೇಸರ, ಚಿಂತೆ, ಓಡಾಟ, ಅತೃಪ್ತಿ, ಭಯ, ಅವಸರ, ಗಡಿಬಿಡಿ...

ಅವನೊಂದು ನಗು ನಕ್ಕ. ಅದು ಹುಚ್ಚು ನಗೆಯೋ, ಸಹಜ ನಗುವೋ ಎಂದು ಯಾರಿಗೂ ಗೊತ್ತಾಗಲಿಲ್ಲ. ಯಾಕೆಂದರೆ ಅವನು ಅದಾಗಲೇ ಆ ಜನದಟ್ಟಣೆಯಲ್ಲಿ ಲೀನನಾದ.

*

---

ಅಬ್ದುಲ್ ಹಮೀದ್ ಪಕ್ಕಲಡ್ಕ, ಜಿಹಾ ಕಾಟೇಜ್, ಬೆಳ್ಳಿಚೌರ್, ಮಿಜಾರು ಅಂಚೆ, ಮಂಗಳೂರು

# ಮಳೆರಾಯನ ಗೊಂಬೆ

ಮಣ್ಣನ್ನುತ್ತುತ್ತ ಮಣ್ಣನ್ನೆ ಬೆಳೆಯುವ
ಎರೆಹುಳುವಿನ ಮಾತು
ಬಯಲಿನಲ್ಲೆದ್ದ ಮಣ್ಣಹೂವು

ಅಂಟಂಟು ಜೇಡಿಮಣ್ಣು, ಅಂಟಿಗೆ ಬಿಗಿ,
ನಾದುತ್ತ ನಾದುತ್ತ ಕಸುವು ಕೈಗೆ
ಕಣ್ಣಿಗೆ ಕಾಣದ ನುಣ್ಣನೆ ನಾಮದ ಹುಡಿ
ಒಳಗಿಂದೇಳುವ ಭೂಮಿಯ ತಿರುಳು

ಮಿದ್ದಿ ಮಣ್ಣನ್ನು ಒರಟು ಮೃದುವಿಗೆ ಕೂಡಿಕೊಳ್ಳುವಂತೆ
ಯಾವುದು ಯಾವುದೆಂದು ಬಿಡಿಸದಂತೆ,
ಆಮೇಲೆ ಬಿಡಿಸುವುದು ಕಣ್ಣು, ಮೂಗು, ಕಿವಿ, ಕೈ, ಕಾಲು;
ಮಣ್ಣಿಗೇ ಸೇರುತ್ತದೆ ಮಣ್ಣು

ಬಿಗಿದು ಸೇದಿದರೆ ಅಂಗಕ್ಕಿನ್ನೊಂದು ಅಂಗ
ಕೊಟ್ಟ ಆಕಾರಕ್ಕೆ ಅರ್ಥದ ಮೊಳಕೆ

ಮಣ್ಣಿನ ಗೊಂಬೆಗೆ ಜೀವವುಕ್ಕಿಸಲು
ತಲೆ ಮೇಲೆ ಹೊತ್ತು ಕುಣಿಯಬೇಕು
ಮನೆಮನೆಯ ಹೊಸ್ತಿಲಲ್ಲಿ ನಿಲ್ಲಿಸಿ ನೀರೆರೆಯಬೇಕು

ಹೊತ್ತ ಮಣ್ಣು ಕರಗಿ ಮುಖ ಮೈಮಾರೆ ಮೇಲೆ ಹರಿವಾಗಿ
'ಬಾರೋ ಬಾರೋ ಮಳೆರಾಯ
ಊರಿನ ತೋಟಕೆ ನೀರಿಲ್ಲ...'

ರೂಪವು ರೂಪದೊಳಗೆ ಸೇರಬೇಕು
ಮಳೆರಾಯನ ಗೊಂಬೆ ನೀರೊಳಗೆ ಮಣ್ಣಾಗಬೇಕು

ಮಳೆ ಆಗುವುದೆಂಬ ನಂಬಿಕೆಗೆ
ಯಾವ ರೂಪ? ಎಲ್ಲಿಯ ಆಕಾರ?

– ತೇಜಶ್ರೀ ಜ.ನಾ.

# ಅವನೂ ಅವಳೂ ಗೊತ್ತಿಲ್ಲದಂತೆ

ಬಂದೀತೇ ಒಂದು ಸಾಲು ಒಡಲ ಕಟ್ಟುಗಳ ತೊರೆದು
ಕಣ್ಣ ತಪ್ಪಿಸಿದ ಮನದ ಆಸೆ ಲಯದಲ್ಲಿ
ಎಲೆ ಬಿದ್ದ ಮರದ ಮೊದಲ ಚಿಗುರಂತೆ

ಹೂವೋ ಹಣ್ಣೋ ಮರವೋ ಬಿಳಿಲೋ
ಇದ್ದಿಲ್ಲದ ನಾಳೆಯ ಹುರುಪನ್ನು ಕಾಣಿಸುವ ಇಂದು
ನೂರು ಸುತ್ತಿನ ಮನದ ಚಡಪಡಿಕೆಯ ಕೋಟೆಯಾಗಿರಲು

ಹೊಸಿಲ ದಾಟದ ಸಾಲು ಸಾಲ ಹಿಂದಲ ಸಾಲು
ಊರ ಚರಿತೆಯ ನುಗ್ಗ ನೂಕಿ ಇಣುಕಲು
ಇದ್ದ ಭಾವವೂ ಯಾವ ಬಾಗಿಲ ಹಿಂದೆ ಅಡಗಿತೋ

ಅವುಚಿಕೊಳ್ಳುವ ತೋಳುಗಳ ಕೆಳಗೆ ಅವುಸಿಕೊಳ್ಳುವ ಅಳುಕು
ತಾನೇ ತಪ್ಪಿಸಿ ತಾನೇ ಹುಡುಕಿ ಸಿಕ್ಕ ನೋವು ಸಿಗದ ಖುಷಿ
ಹೋಗಬಾರದೇ ತನ್ನದೂ ಒಂದು ಸಾಲು ಒಡಲ ಕಟ್ಟುಗಳ ತೊರೆದು

ಒಬ್ಬರು ಇನ್ನೊಬ್ಬರ ಸಾಲಿಗೆ ತಲೆಯಾನಿಸಲು ಕಾಯುತ್ತಿರಲು
ಒಂದು ಮಾತು ಇನ್ನೊಂದ ನೇವರಿಸುವಂತೆ ನಿಂದಿರಲು
ಯಾವ ಕೊಂಡಿ ಎಲ್ಲಿಯದೋ ಕೂಡಲಾಗದ ಸಂತೆಯಲಿ

ಹೇಳಿಬಾರದ ಹೇಳಹೋಗದ ಸುಳಿಯ ಸುಳುಹಲ್ಲಿ
ಒಣಗಿದ ಅಕ್ಷರಗಳು ನೀರಡಿಸಿದಂತೆ ಮತ್ತದೇ ಸಾಲ ಕನಸಿ
ಯಾಕೆ ಸುತ್ತುವುದೋ ಎದೆ ಮೂಲದ ಕೊರಕು ಜಾಡಿನಲ್ಲಿ

ಕಾಮಿ ಬೆಕ್ಕುಗಳು ಧ್ಯಾನಕ್ಕೆ ಕೂತಿವೆ ಸಾಗುವುದ ಮರೆತು
ಮಳ್ಳಗಾಳಿಯ ಸುಳಿ ಮುಂಗುರುಳ ಬಿಡದೆ ತಡವಿರಲು
ಹಾರಲು ನಿಂತ ಹಕ್ಕಿಯ ಬಾಯಲ್ಲಿ ಕಚ್ಚಿದ ಸಾಲು

ಬೀಳಬಾರದೇ ಸಾಲು ಇಡೀ ಜಗವೇ ಕೈಯೊಡ್ಡಿ ನಿಂತಿರಲು
ಬೀಳುವುದು ಉಂಟೇ ಇದ್ದ ಮಾತುಗಳ ಮರೆತ ಬೊಗಸೆಯೊಳಗೆ
ಬಡಿಯುತ್ತಲೇ ಇರುವ ಎದೆಯ ತಾಳಕ್ಕೆ ಎಂತಲಾದರೂ

ಗೊತ್ತಿರುವ ಒಂದು ಪದದ ಹಿಂದೆ ಅವನೂ ಅವಳೂ ಗೊತ್ತಿಲ್ಲದಂತೆ
ಹುಡುಕಿನ ಕತೆಗಳ ಹಿಂದೆ ಊರೂ ಕೇರಿ ಗುರುತಿಲ್ಲದಂತೆ
ದಕ್ಕದ ಎಲ್ಲವೂ ಇನ್ನಾರದೋ ಹಗಲಾಗಿ ಇರುಳಾಗಿ ಎಲ್ಲರ ಹಿಂದೆ

ದಿನವೆಂಬುದು...

**– ಜಿ.ಕೆ. ರವೀಂದ್ರಕುಮಾರ್**



* ಇಂದು ದೇಶದಲ್ಲಾಗಿರುವ ಬದಲಾವಣೆಗಳನ್ನು ಗಮನಿಸಿದರೆ ದೇಶ ಸಮಾಜವಾದಿಗಳು ತೋರಿಸಿದ ದಾರಿ ತುಳಿಯುತ್ತಿದೆ ಎಂಬುದು ಸ್ಪಷ್ಟವಾದೀತು? ಅಂತರ್ರಾಷ್ಟ್ರೀಯ ಅರ್ಥಶಾಸ್ತ್ರಜ್ಞರು ಇತ್ತೀಚೆಗೆ ಬಳಸುತ್ತಿರುವ 'ಜಿನಿ' ಮಾನದಂಡದ ಪ್ರಕಾರ ಇಂದು ಭಾರತ ಬಂಡವಾಳವಾದಿ ಅಮೇರಿಕೆಗಿಂತ ಅಷ್ಟೇ ಅಲ್ಲ, ಕಮ್ಯುನಿಸ್ಟ ಚೀನಕ್ಕಿಂತ ಹೆಚ್ಚಿನ ಸಮಾನತೆಯನ್ನು ಸಾಧಿಸಿದೆ. ಇದು ಸಮಾಜವಾದಿಗಳ ಅತ್ಯಂತ ದೊಡ್ಡ ಗೆಲುವು ಎನ್ನುವುದು ನನ್ನ ವೈಯಕ್ತಿಕ ಅಭಿಪ್ರಾಯ.

**– ಬಾಪೂ ಹೆದ್ದೂರಶೆಟ್ಟಿ**

* ಸಮಾಜವಾದವು ತನ್ನ ಹುಟ್ಟಿನಿಂದ ಹಾಗೂ ಬಂಡವಾಳದ ಹುಟ್ಟಿನ ಕಾಲದಿಂದಲೇ ಅತ್ಯಂತ ಪ್ರಬಲವಾದ ಬಂಡವಾಳ ವಿರೋಧಿ ನೈತಿಕ ವಿಮರ್ಶೆಯನ್ನು ಕಟ್ಟಿಕೊಂಡು ಬಂದಿದೆ. ಇತ್ತೀಚೆಗೆ ಈ ನೈತಿಕ ವಿಮರ್ಶೆಯನ್ನು ಅಪ್ರಸ್ತುತ, ಅತಿ, ಆದರ್ಶವಾದಿ ಹೀಗೆಂದು ವರ್ಣಿಸಿ ದುರ್ಬಲಗೊಳಿಸುವ ಪ್ರಯತ್ನವನ್ನು ಮಾಡಲಾಗುತ್ತಿದೆ. ನಿಜವೇನೆಂದರೆ ಈ ನೈತಿಕ ವಿಮರ್ಶೆಯು ಇಂದು ಎಂದಿಗಿಂತಲೂ ಹೆಚ್ಚು ಪ್ರಸ್ತುತವಾಗಿದೆ.

**– ರಾಜೇಂದ್ರ ಚೆನ್ನಿ**

* ನದಿಗಳಿಗೆ ಬೃಹತ್ ಅಣೆಕಟ್ಟು ನಿರ್ಮಾಣವನ್ನು ನಾವು ವಿರೋಧಿಸಬೇಕು. ಮುಳುಗಡೆ ಆಗದಂತೆ ಹರಿಯುವ ನೀರಿಗೆ ಚೆಕ್‌ಡ್ಯಾಮ್ ನಿರ್ಮಿಸಿ ಕೃಷಿಗೆ ಬಳಸುವ ಕೌಶಲವನ್ನು ರೂಢಿಸಿದರೆ ಸಾಕು. ಸಾಧ್ಯವಾದಲ್ಲಿ ವಿದ್ಯುತ್ ಉತ್ಪಾದಿಸಿದರೆ ಒಳಿತೆ ಅಲ್ಲವೇ? ಇಂಥ ಪ್ರಶ್ನೆಯ ಎದುರು ಪ್ರಗತಿಯ ವಾದವಿದೆ.

**– ಬಂದಗದ್ದೆ ರಾಧಾಕೃಷ್ಣ**